# ಬಲಿ

ಪದ್ಮಾ ಶ್ರೀಧರ್

ಕಣಿವೆ ಪ್ರಕಾಶನ
192, 12ನೇ ಮೆಯಿನ್, ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಸರಸ್ವತಿಪುರಂ, ಮೈಸೂರು–570009

BALE- a social novel by Smt. Padma Shreedhar, 1246, 'chiguru', 7th B Cross, New Town, Yalahanka, Bangalore-57 and published byM/S Kanive Prakashana, (Ph. 0821-2541085),192, 12th Main, Kamakshi Hospital Road, Saraswathipuram, Mysore-570009.

Printed on Maplitho 70 GSM paper.
No.of Pages: 184+4=188, Demi 1/8.

First Edition: 2012

Price: Rs. 120/-

DTP: Smt. Asha Nayak.

Impression at: VISMAYA OFFSET PRINTERS,
KR Mohalla, MYSORE-4

# ಬಲೆ ಮುನ್ನುಡಿ

'ಬಲೆ' ಒಂದು ಸಾಮಾಜಿಕ ಕಾದಂಬರಿ. ಇದೇ ಹೆಸರಿನಲ್ಲಿ ಮೊದಲಿಗೆ 'ರಾಗಸಂಗಮ' ಮಾಸಪತ್ರಿಕೆಯಲ್ಲಿ ಕಂತುಗಳಲ್ಲಿ ಪ್ರಕರಣಗೊಂಡಿದ್ದು ಈಗ ಪುಸ್ತಕ ರೂಪದಲ್ಲಿ ಓದುಗರಿಗಾಗಿ ಪ್ರಕಟಗೊಳ್ಳುತ್ತಿದೆ.

ಒಂದು ಕೊಲೆಯ ಸುತ್ತ, ಕಥಾವಸ್ತು ಹರಡಿಕೊಂಡು, ಇದರಿಂದಾಗಿ, ಹತ್ತಿರದವರ ಮನದಲ್ಲಿ, ಬದುಕಿನಲ್ಲಿ ಆದ ಬದಲಾವಣೆಗಳಲ್ಲಿ ಕಥೆಯು ಮುಂದುವರೆಯುತ್ತದೆ.

ಓದುಗರಿಗೆ ಇಷ್ಟವಾಗುತ್ತದೆಂದು ಭಾವಿಸುತ್ತೇನೆ. ಪ್ರಕಟಣೆಯ ಜವಾಬ್ದಾರಿಯನ್ನು ಹೊತ್ತಿರುವ ಪ್ರಕಾಶಕ ವರ್ಗದವರಿಗೆ ನನ್ನ ಧನ್ಯವಾದಗಳು. ಓದುಗರಿಗೆ ವಂದನೆಗಳು.

ಇತಿ

– *ಪದ್ಮಾ ಶ್ರೀಧರ್*

# ಬಲೆ

ಮೊಬೈಲು ಫೋನು ರಿಂಗಾಯಿತು. ಅರೆ ನಿದ್ದೆಯಲ್ಲಿದ್ದ ಸೀಮಾ ಫೋನನ್ನೆತ್ತಿಕೊಂಡು 'ಹಲೋ' ಎಂದಳು.

"ಸೀಮಾ ನಾನು... ಗೌತಮ್..." ಎಂದಿದ್ದ ಪಿಸುದನಿಯಲ್ಲಿ. ಅವಳು ಬೇಸರದಿಂದ,

"ನೀನಾ? ಈಗ್ಯಾಕೆ ಮಾಡ್ದೆ?" ಕೇಳಿದಳು.

"ಅಲ್ಲಿ ನಿನ್ನ ಅಕ್ಕ ಪಕ್ಕ ಬೇರೆ ಯಾರೂ ಇಲ್ಲ ತಾನೇ?" ಕೇಳಿದ.

"ಆಫ್ ಕೋರ್ಸ್...ಯಾರೂ ಇಲ್ಲ...ಈಗೇನು ನಿನ್ನ ರೋಮ್ಯಾನ್ಸ್?"

"ನಾನೊಂದು ಪ್ರಾಬ್ಲಂನಲ್ಲಿ ಸಿಕ್ಕಿಬಿದ್ದಿದ್ದೀನಿ...ನಿನಗೆ ರೋಮ್ಯಾನ್ಸ್ ಚಿಂತೆ..." ಅವನು ರೇಗಿದಾಗ ಅವಳೂ ರೇಗಿದಳು.

"ಫೋನು ಮಾಡಿರೋದು ನೀನು...ಅದೇನು ಅಂತ ಹೇಳು... ಸಾಯಂಕಾಲ ಅಷ್ಟು ಹೊತ್ತೂ ಒಟ್ಟಿಗೆ ಇದ್ದೆವು. ಆಗ ಏನೂ ಪ್ರಾಬ್ಲಂ ಇರಲಿಲ್ಲ."

"ನೀನು ಅತ್ತ ಹೋದ ಮೇಲೆ ಶುರುವಾದದ್ದು... ಎನಿವೇ... ನನ್ನ ಬಗ್ಗೆ ಯಾರಾದ್ರೂ ಏನಾದ್ರೂ ಕೇಳಿದ್ರೆ ಪ್ಲೀಸ್ ಏನೂ ಹೇಳ್ಬೇಡ... ಪೋಲೀಸರು ನನ್ನನ್ನು ಹುಡುಕುತ್ತಿರಬಹುದು."

"ಪೋಲೀಸ್ನೋರಾ...? ಏನ್ಮಾಡ್ದೆ ನೀನು?"

"ಮೆಲ್ಲಗೆ ಮಾತಾಡು ಪ್ಲೀಸ್... ಶಶಾಂಕ ರೇಣುಕಾಳ ಕೊಲೆ ಮಾಡಿದಾ ನಂತೆ ...." ಸೀಮಾ ದಿಗ್ಗನೆ ಎದ್ದು ಕುಳಿತಳು.

"ಕೊಲೇನಾ...?" ಕಿರುಚಿದಳು.

"ಪ್ಲೀಸ್ ಮೆಲ್ಲಗೆ ಮಾತಾಡು... ನಂಗೂ ಗೊತ್ತಾದದ್ದು ಈಗ ಸ್ವಲ್ಪ ಹೊತ್ನಲ್ಲಿ.

ಅದೇನಾಯ್ತು ಅಂತ ನಂಗೂ ಗೊತ್ತಿಲ್ಲ. ಅವನೆಲ್ಲಿದಾನೆಂತ ನಂಗೂ ಗೊತ್ತಿಲ್ಲ."

"ನಿಂಗ್ಯಾಕೆ ಭಯ...? ಪೋಲೀಸ್ನೋರು ಕೇಳಿದ್ರೆ ನಂಗೊತ್ತಿಲ್ಲಾಂತ ಹೇಳು."

"ಅದು ಅಷ್ಟು ಸುಲಭ ಅಲ್ಲ. ನಾನು ನಾಳೆ ಮತ್ತೆ ಫೋನು ಮಾಡ್ತೀನಿ... ನಾನು ಫೋನ್ ಮಾಡಿದ್ದೆ ಅಂತ ಯಾರ್ಗೂ ಹೇಳ್ಬೇಡ..." ಎಂದು ಹೇಳಿ ಲೈನ್ ಕಟ್ ಮಾಡಿದ. ಇವಳು ಅವನ ನಂಬರನ್ನು ಡಯಲ್ ಮಾಡಿದಳು. ಸ್ವಿಚ್ ಆಫ್ ಆಗಿದೆ ಅಂತ ಬಂದಿತು. ತಥ್ ಎಂದುಕೊಂಡು ಮೊಬೈಲನ್ನು ದಿಂಬಿನ ಕೆಳಗಿಟ್ಟು, ದಿಂಬಿನ ಮೇಲೆ ತಲೆಯನ್ನು ಹಾಕಿದಳು. ಆದರೆ ನಿದ್ದೆ ಹಾರಿ ಹೋಗಿತ್ತು.

"ಛೇ... ಎಂಥಾ ಬೇಜವಾಬ್ದಾರಿ... ಏನದು ಅಂತ ಸರಿಯಾಗಿ ಹೇಳಬಾರ್ದಾ...! ಶಶಾಂಕ ಕೊಲೆ ಮಾಡಿದ್ರೆ ಇವನ್ಯಾಕೆ ಹೆದರ್ಬೇಕು...? ಪೋಲೀಸ್ನೋರು ನನ್ನನ್ನು ಕೇಳಿದ್ರೆ ನಾನು ಎಲ್ಲಾ ನಿಜವನ್ನೇ ಹೇಳಿಬಿಡ್ತೀನಿ" ಎಂತಂದುಕೊಂಡಳು. ಅಷ್ಟರಲ್ಲಿ ರೂಮಿನ ಬಾಗಿಲನ್ನು ಯಾರೋ ಬಡಿದ ಸದ್ದಾಯಿತು. ನಿದ್ದೆಯನ್ನು ನಟಿಸಿದಳು... ಎದ್ದು ಬಾಗಿಲನ್ನು ತೆಗೆದು ಮಾತನಾಡುವ ಮನಸ್ಸಿರಲಿಲ್ಲ... ಆದರೆ, ಕೇವಲ ಕೆಲವೇ ದಿನಗಳ ಹಿಂದೆ ಅವನೊಡನೆ ಕಳೆದ ಸುಮಧುರ ಘಳಿಗೆಗಳನ್ನು ಮೆಲುಕು ಹಾಕಿದಳು.

ಡಿನ್ನರ್ ಮುಗಿದ ಮೇಲೆ, ಗೌತಮ ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿದ್ದ. ಡಿನ್ನರ್ ನಂತರ ಅವನ ಮನೆಗೆ ಬಂದದ್ದು... "ಇವತ್ತು ನೀನು ತುಂಬಾ ಚೆನ್ನಾಗಿ ಕಾಣ್ತಿದೀಯ ಸೀಮಾ... ಈ ಡ್ರೆಸ್ ನಿನಗೆ ತುಂಬಾ ಒಪ್ಪುತ್ತೆ." ಎನ್ನುತ್ತಾ ದುಪ್ಪಟ್ಟಾವನ್ನು ತೆಗೆದು ತನ್ನ ತಲೆಯ ಮೇಲೆ ಹೊದ್ದುಕೊಂಡ. ಅವಳು ನಕ್ಕಳು.

"ಥೇಟ್ ಹುಡುಗಿಯ ಹಾಗೆ ಕಾಣ್ತಿದೀಯಾ ನೀನು..." ಎಂದಳು.

"ಆದರೆ ನಾನು ಹುಡುಗಿಯಲ್ಲ. ನನಗೆ ಮೀಸೆ ಇದೆ...." ಎನ್ನುತ್ತಾ ತನ್ನ ಮುಖವನ್ನು ಅವಳ ಬಳಿಗೆ ತಂದ.

ಅವಳು ಹಿಂದಕ್ಕೆ ವಾಲಿದಳು. ಅವನು ಆಯತಪ್ಪಿ ಅವಳ ಮೇಲೆ ಬಿದ್ದ. ಅವಳ ಕೋಮಲವಾದ ದೇಹಕ್ಕೆ, ಅವನ ದೇಹ ತಗುಲಿತು. ಅವಳಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅವನನ್ನು ತಳ್ಳುವ ಬದಲು ಬೆರಗು ಕಣ್ಣುಗಳಿಂದ ಅವನನ್ನೇ ನೋಡಿದಳು. ಅವಳ ತುಟಿಗಳು ಅದುರಿದವು.... ಕಣ್ಣುಗಳು ಕಾಮನೆಯನ್ನು ಸೂಚಿಸಿದವು. ಅವನ ತುಟಿಗಳು ಅವಳ ತುಟಿಗಳನ್ನು ಸೋಕಿದವು.... ಈ ಘಳಿಗೆಗಾಗಿ ಕಾಯುತ್ತಿದ್ದವಳಂತೆ ಅವನನ್ನು ತನ್ನ ಕೈಗಳಿಂದ ಬಳಸಿದಳು. ಮುಂದೆ ನಡೆದಿದ್ದೆಲ್ಲವೂ ಅನಿರೀಕ್ಷಿತವಲ್ಲ. ಅಪೇಕ್ಷಿತ ಬಯಕೆಗಳನ್ನು ತುಂಬಿಕೊಂಡ ದೇಹಗಳು ಅಂಟಿಕೊಂಡವು.

ಸುಮಾರು ಎರಡು ವರ್ಷಗಳ ಕೆಳಗೆ ಪರಿಚಯವಾಗಿತ್ತು. ಸ್ನೇಹಿತರಾದರು, ನಂತರ ಆಪ್ತರಾದರು. ಒಬ್ಬರೊನ್ನಬ್ಬರು ಪ್ರೀತಿಸುತ್ತಿದ್ದೇವೆಂಬ ಅರಿವಾಯಿತು. ಮದುವೆಯಾಗಬೇಕೆಂದು ತೀರ್ಮಾನಿಸಿದರು... ಸೀಮಾ ಅವನನ್ನು ತನ್ನ ತಂದೆ ತಾಯಿಯರಿಗೆ ಪರಿಚಯ ಮಾಡಿಕೊಟ್ಟಳು. ಅವರಿಬ್ಬರ ಸಲುಗೆಯನ್ನು ಕಂಡ ತಾಯಿ, ಅವರಿಬ್ಬರ ಮದುವೆಗೆ ಒಪ್ಪಿಗೆ ಕೊಟ್ಟಳು. ತಂದೆಯನ್ನು ಒಪ್ಪಿಸಿದಳು. ಕೈ ಕೈ ಹಿಡಿದು ಓಡಾಡಿದ್ದರು. ಸಿನೆಮಾಗೆ ಹೋಗುತ್ತಿದ್ದರು. ಡಿನ್ನರ್‌ಗೆ ಕರೆದು ಕೊಂಡು ಹೋಗುತ್ತಿದ್ದ. ಒಮ್ಮೊಮ್ಮೆ ಅತಿ ಸಲುಗೆಯಿಂದ ಕೆನ್ನೆಯನ್ನು ಚಿವುಟುತ್ತಿದ್ದ.... ಕೆನ್ನೆಗಳನ್ನು ಚುಂಬಿಸುತ್ತಿದ್ದ.... ತಬ್ಬಿಕೊಳ್ಳುತ್ತಿದ್ದ. ಆದರೆ ಅದಕ್ಕಿಂತ ಮುಂದೆ ಮುಂದುವರೆದಿರಲಿಲ್ಲ.... ಆದರೆ ಈ ದಿನ.... ಅದಕ್ಕೆ ಇವಳೇ ಕಾರಣ... ಅವನ ಸಾಮೀಪ್ಯ ಇವಳನ್ನು ಪುಳಕಗೊಳಿಸುತ್ತಿತ್ತು.

ಅವನು ತನ್ನೊಡನೆ ಚೆಲ್ಲಾಟವಾಡಲಿ ಎಂದು ಮನಸ್ಸು ಬಯಸುತ್ತಿತ್ತು. ಅವನ ಮೈಗೆ ಮೈ ತಗುಲಿಸುತ್ತಿದ್ದಳು. ಅವನ ಕೈಯನ್ನು ತನ್ನ ಎದೆಯ ಮೇಲೆ ಇರಿಸಿಕೊಳ್ಳುತ್ತಿದ್ದಳು. ಆದರೂ... ಅವನು ಸಂಯಮದಿಂದ ಇರುತ್ತಿದ್ದ. ಆದರೆ ಈ ದಿನ ಅವನು ಅವಳ ಆಸೆಗಳಿಗೆ ಸ್ಪಂದಿಸಿದ್ದ.... ಅವಳಿಗೆ ಯಾವ ಪಶ್ಚಾತ್ತಾಪವೂ ಇರಲಿಲ್ಲ. ಅವನೇ ನಂತರ "ಸಾರೀ.... ಸೀಮಾ..." ಎಂದಿದ್ದ ತಪ್ಪು ಮಾಡಿದವನಂತೆ.

"ಸಾರಿ ಯಾಕೆ ಗೌತಮ್.... ಐ ಎಂಜಾಯ್ಡ್ ಇಟ್.... ಯು ಆರ್ ಎ ಸ್ವೀಟ್ ಬಾಯ್...." ಎಂದು ಅವನ ಗಲ್ಲವನ್ನು ಚುಂಬಿಸಿದಳು.

"ನೀನು ಇಷ್ಟು ಬೋಲ್ಡ್ ಎಂದು ನಂಗೆ ಗೊತ್ತೇ ಇರಲಿಲ್ಲ" ಎಂದ.

"ನನ್ನ ಬೋಲ್ಡ್‌ನೆಸ್‌ನಿಂದ ನಿಂಗೂ ಖುಷಿಯಾಗಿದೆ ಅಲ್ವಾ...?"

"ಎಸ್.... ಇವತ್ತು ರಾತ್ರಿ ನೀನು ಇಲ್ಲೇ ಇದ್ಬಿಡು. ಸೀಮಾ.... ರಾತ್ರಿಯನ್ನು ಹೀಗೇ ಒಟ್ಟಿಗೆ ಕಳೆಯೋಣ...." ಆಸೆಯನ್ನು ಪ್ರಕಟಿಸಿದ.

"ಇವತ್ತು ಬೇಡ ಗೌತಮ್.... ಡ್ಯಾಡಿ ಊರಿನಲ್ಲಿಲ್ಲ. ಅಮ್ಮ, ಸೋನಿ ಇಬ್ಬರೇ ಮನೆಯಲ್ಲಿ. ಅಮ್ಮಂಗೆ ಟೆನ್ಷನ್ ಆಗುತ್ತೆ...."

"ಹಾಗಾದ್ರೆ ನಾನೇ ಬರ್‍ಲಾ ನಿನ್ನ ಮನೆಗೆ...."

"ಆಸೆ ನೋಡು... ಇದುವರೆಗೂ ಸನ್ಯಾಸಿಯ ಥರ, ಮುಟ್ಟಿದರೆ ಎಲ್ಲಿ ಮೈಲ್ಗೆ ಆಗಿಬಿಡುತ್ತೋ ಅನ್ನೋ ಥರ ಇದ್ದೆ.... ಈ ಬೆಂಕಿಯನ್ನು ಹೊತ್ತಿಸಿದವಳು ನಾನೇ... ತಿಳೀತಾ ಮರೀ..." ಮೂಗು ಹಿಂಡಿದಳು.

"ನನ್ನ ಬ್ರಹ್ಮಚರ್ಯವನ್ನು ಕೆಡಿಸಿರುವ ಮೇನಕೆ ನೀನು... ನಾನೇಕೆ ಸನ್ಯಾಸಿಯ ಥರ ಇರ್ಬೇಕು?" ಅವನೂ ತಮಾಷೆ ಮಾಡಿದ.

"ಓ.... ಕೆ.... ನಿನ್ನ ಪೇರೆಂಟ್ಸ್ ವಾಪಸ್ಸು ಬರುವವರೆಗೂ, ನಾನು ನಿನ್ನ

ಜೊತೇಲಿ. ಮತ್ತೆ ನಾನು ಬರ್ತೀನಿ. ಆದರೆ ನಾನು ಮನೆಗೆ ಹೋಗಲೇ ಬೇಕು. ಆದಷ್ಟು ಬೇಗ ಮದುವೆಯಾಗಿಬಿಡೋಣ... ಆಮೇಲೆ ಸದಾ ಇಲ್ಲಿಯೇ ಇರ್ತೀನಿ... ಈಗ ಹೋಗ್ಲಾ? ಬೇಜಾರು ಮಾಡ್ಕೋ ಬೇಡ.... " ಎಂದು ಹೇಳಿ ಅಲ್ಲಿಂದ ಹೊರಟಳು. ಆದಷ್ಟು ಬೇಗ ನಾವಿಬ್ಬರೂ ಮದುವೆಯಾಗಿ ಬಿಡಬೇಕು. ಹೀಗೆ ನಾವಿಬ್ಬರೂ ದೂರ ದೂರ ಇರುವುದು ಒಳ್ಳೆಯದಲ್ಲ. ನಾನೇನೋ ನನ್ನ ಪೇರೆಂಟ್ಸ್‌ನ ಒಪ್ಪಿಸಿದೀನಿ. ಇವನು ಏನು ಮಾಡಿದಾನೋ? ಅವರು ಒಪ್ಪದಿದ್ದರೂ ನಿನ್ನನ್ನು ಮದುವೆಯಾಗ್ತೀನಿ...ನಿನ್ನ ಮನೇಲೇ ಬಂದು ಇದ್ದು ಬಿಡ್ತೀನಿ ಅಂತ ಹೇಳಿದ್ದ. ಇದುವರೆಗೂ ಒಂದು ದಿನವೂ ತನ್ನ ತಾಯಿಗೆ ತನ್ನ ಪರಿಚಯ ಮಾಡಿಕೊಟ್ಟಿಲ್ಲ. ತಂದೆ ಬಿಜಿನೆಸ್ ವ್ಯವಹಾರದ ಮೇಲೆ ಅಲ್ಲಿ ಇಲ್ಲಿ ಓಡಾಡ್ತಾನೇ ಇರ್ತಾರೆ ಅಂತಂದಿದ್ದ.

ಆದರೆ ಈಗ....? ತಮಾಷೆ ಮಾಡಿದ್ನೋ.... ಸುಳ್ಳು ಹೇಳಿದ್ನೋ... ಶಶಾಂಕ ಇವನ ಕಸಿನ್ ಅಂತ ಹೇಳಿದ್ದ. ರೇಣುಕಾ ಶಶಾಂಕನಿಗೆ ಗೊತ್ತಾಗಿದ್ದ ಹುಡುಗಿ. ಸದ್ಯದಲ್ಲೇ ಮದುವೆಯಾಗಲಿದ್ದವರು... ಅಷ್ಟರಲ್ಲಿ ಏನಾಯಿತು? ಅದಕ್ಕೆ ಇವನ್ಯಾಕೆ ಹೆದರಿದ್ದಾನೆ....? ಏನಾಗಿದೆ ಅಂತ ತಾನು ತಿಳಿದುಕೊಳ್ಳಲೇಬೇಕು ಅಂತ ಅಂದುಕೊಂಡು, ಮತ್ತೊಮ್ಮೆ ಅವನ ಫೋನಿಗೆ ಕರೆ ಮಾಡಿದಳು. ಆದರೆ ಕರೆ ಹೋಗಲೇ ಇಲ್ಲ. ಸ್ವಿಚ್ ಆಫ್ ಆಗಿತ್ತು....

*****

ಬೆಳಿಗ್ಗೆ ಎಂದಿನಂತೆ, ಕೆಲಸಕ್ಕೆ ಹೋಗಲು ಸಿದ್ಧಳಾಗಿದ್ದಳು. ಮನೆಯ ಮುಂದೆ ಕ್ಯಾಬ್ ಬಂದು ನಿಂತಿತ್ತು.

"ಸೀಮಾ ಡಬ್ಬಿ, ನೀರು ಎಲ್ಲಾ ರೆಡಿ ಮಾಡಿದೀನಿ. ಮರೀ ಬೇಡ.... ನಾನು ಸ್ನಾನಕ್ಕೆ ಹೋಗ್ತೀನಿ" ಎಂದು ತಾಯಿ ಹೇಳಿದ್ದು ಅವಳಿಗೆ ಕೇಳಿಸಿತ್ತು. ತಂಗಿ ಎದ್ದು ಕುಳಿತು ಓದಿಕೊಳ್ಳುತ್ತಿದ್ದಳು.

"ಡ್ಯಾಡಿ ಬಂದ್ರೂಂತ ಕಾಣುತ್ತೆ.... ಗಾಡಿ ನಿಂತ ಸದ್ದಾಯ್ತು.... " ತಂಗಿ ಎದ್ದು ಕಿಟಕಿಯ ಬಳಿ ಹೋಗಿ ಪರದೆಯನ್ನು ಸರಿಸಿದಳು... ತಕ್ಷಣವೇ ಪರದೆಯನ್ನು ಹಿಂದಕ್ಕೆಳೆದು ಗಾಬರಿಯಿಂದ "ಸೀಮಾ... ಸೀಮಾ... ಬೇಗ.... ಬಾ...." ಎಂದು ಕರೆದಳು.

"ಏನೇ ಯಾಕೆ ಹಾಗೆ ಕಿರುಚ್ಕೋತೀಯ...?"

"ಶ್... ನಾನೇನೂ ಕಿರುಚಿಲ್ಲ... ಮನೆ ಮುಂದೆ ಪೋಲೀಸ್ ಜೀಪ್ ನಿಂತಿದೆ. ಭಯ ಆಗ್ತಿದೆ ಕಣೇ..."

"ಪೋಲೀಸ್ ಜೀಪಾ...!" ಅವಳೂ ತಟಸ್ಥಳಾದಳು. ಅಷ್ಟರಲ್ಲಿ ಕಾಲಿಂಗ್

ಬೆಲ್ ಸದ್ದಾಗಿತ್ತು... ಸೋನಿ, ಅಕ್ಕನ ಕೈ ಹಿಡಿದಳು. ಇವಳ ಕೈ ಸಹ ಬೆವತಿತ್ತು. ಇಬ್ಬರು ಮೌನವಾಗಿ ಒಬ್ಬರನ್ನೊಬ್ಬರು ನೋಡಿದರು. ಮತ್ತೆ ಕಾಲಿಂಗ್ ಬೆಲ್ ಹೊಡೆದುಕೊಂಡಿತು.

"ಮಮ್ಮೀ... ಮಮ್ಮೀ..." ಎನ್ನುತ್ತಾ ಸೋನಿಯ ಕೈ ಹಿಡಿದು ಹೊರಗೆ ಬಂದಳು. ಸ್ನಾನಕ್ಕೆ ಹೊರಟಿದ್ದ ತಾಯಿಯೂ ಹಿಂದಕ್ಕೆ ಬಂದಳು.

"ಯಾರೋ ಬಂದಿದಾರೆ... ಬೆಲ್ ಮಾಡ್ತಿದಾರೆ... ಬಾಗಿಲನ್ನು ತೆಗೀಬಾರದಾ?" ಎನ್ನುತ್ತಾ ಸಂಧ್ಯಾ ಮುಂಬಾಗಿಲನ್ನು ತೆರೆದಳು. ಎದುರಿಗೆ ನಿಂತಿದ್ದ ಪೋಲೀಸು ಅಧಿಕಾರಿಗಳನ್ನು ಕಂಡು ಬೆದರಿದಳು.

"ಸೀಮಾ ಅನ್ನೋರು ಇದಾರಾ..." ಆ ಅಧಿಕಾರಿ ದರ್ಪದಿಂದ ಕೇಳಿದ.

"ಯಾಕೆ...?" ಸಂಧ್ಯಾಳ ದನಿ ನಡುಗಿತ್ತು.

"ಕೇಳಿದಷ್ಟಕ್ಕೆ ಉತ್ತರ ಹೇಳ್ರೀ... ಕರೀರಿ ಅವರನ್ನ..." ಅಷ್ಟರಲ್ಲಿ ಸೀಮಾ ಹಿಂದೆ ಬಂದು ನಿಂತಿದ್ದಳು. ಆ ವ್ಯಕ್ತಿಯ ನೋಟ ಅವಳತ್ತ ತಿರುಗಿತು.

"ನಾನೇ... ಸೀಮಾ..." ಎಂದಳು ಸ್ವಲ್ಪ ಧೈರ್ಯವನ್ನು ತಂದುಕೊಂಡು.

ಆತ ಒಳಗೆ ಬಂದು, ಮನೆಯ ಸುತ್ತಲೂ ಕಣ್ಣಾಡಿಸಿದ. ಸುಸಜ್ಜಿತವಾಗಿ ಅಲಂಕೃತಗೊಂಡಿದ್ದ ಮನೆ. ಆ ಸಮಯದಲ್ಲಿ ಆತನ ಮುಃಖದಲ್ಲಿ ಸಣ್ಣಗೆ ಮುಗುಳ್ನಗು ಮಿನುಗಿತು.

"ಗೌತಮ್ ಬಂದಿದಾರಾ ಇಲ್ಲಿಗೆ..." ನೇರವಾಗಿ ಕೇಳಿದ.

"ಅವನು ಇಲ್ಲಿಲ್ಲ..." ಸಂಧ್ಯಾ ತಟ್ಟನೆ ನುಡಿದಳು. ಅವನು ತೀಕ್ಷ್ಣವಾಗಿ ಅವಳ ಕಡೆ ನೋಡಿದ.

"ಇಲ್ಲ ಸಾರ್... ಅವನು ಇಲ್ಲಿಲ್ಲ... ಅವನ ಮನೇಲಿರಬಹುದು. ಯಾಕೆ ಅಂತ ಕೇಳಬಹುದಾ...?"

"ನಾವೊಮ್ಮೆ ಮನೆಯೊಳಗೆ ನೋಡಬಹುದಾ...! ಮನೇಲಿ ಯಾರ್‍ಯಾರು ಇದ್ದೀರಿ?"

"ನಾನು, ನನ್ನ ತಾಯಿ ಹಾಗೂ ನನ್ನ ತಂಗಿ...ನಮ್ಮ ತಂದೆ ಹೊರಗೆ ಹೋಗಿದಾರೆ..."

"ಮನೇಲಿ ಬೇರೆ ಯಾರೂ ಇಲ್ವಾ?"

"ಇಲ್ಲ ಸಾರ್... ಸಧ್ಯಕ್ಕೆ ನಾವು ಮೂವರೇ..." ಅಷ್ಟರಲ್ಲಿ ಸೀಮಾಳ ಮೊಬೈಲ್ ಫೋನು ರಿಂಗಾಗಿತ್ತು. ಅವಳು ತೆಗೆದುಕೊಂಡು ನೋಡುವ ಮೊದಲೇ, ಪೋಲೀಸ್ ಅಧಿಕಾರಿ ಅತ್ತ ಕೈ ಚಾಚಿದ. ಸೀಮಾ ಅವನ ಕೈಗೆ ಫೋನನ್ನು ಕೊಟ್ಟಳು. ಅತ್ತಲಿಂದ ಕ್ಯಾಬ್ ಡ್ರೈವರ್ ಫೋನು ಮಾಡಿದ್ದ. "ಕ್ಯಾಬ್ ಡ್ರೈವರ್ ಸಾರ್...

ನಂಗೋಸ್ಕರ ಗಾಡಿ ಕಾಯ್ತಾ ಇದೆ..."

"ಸರಿ ಮಾತಾಡಿ." ಮತ್ತೆ ಕೊಟ್ಟ.

"ರಾಜೂ... ನಾನು ಸ್ವಲ್ಪ ಲೇಟಾಗಿ ಬರ್ತೀನಿ" ಎಂದಳು. ಅಧಿಕಾರಿ ಮುಗುಳ್ನಕ್ಕ.

"ಓ... ಕೇ... ನಾನು ನಿಮ್ಮ ಹತ್ರ ಕೆಲವು ಪ್ರಶ್ನೆಗಳನ್ನು ಕೇಳಬಹುದಾ...?"

"ಷೂರ್... ಕೇಳಿ ಸಾರ್... ಕೂತ್ಕೊಳ್ಳಿ." ಅವಳು ವಿನಯದಿಂದ ಹೇಳಿದಾಗ ಅವನು ಉಳಿದಿಬ್ಬರ ಕಡೆ ತಿರುಗಿದ.

"ನೀವಿಬ್ರೂ ಸ್ವಲ್ಪ ಒಳಗಿರ್ತೀರಾ... ಒಬ್ಬೊಬ್ಬರನ್ನೇ ಕರೆದು ಪ್ರಶ್ನೆಗಳನ್ನು ಕೇಳ್ತೀನಿ." ಅವರಿಬ್ಬರೂ ತಲೆಯಾಡಿಸಿದರು.

ಸಂಧ್ಯಾ ಮಗಳ ಕಡೆ ಆತಂಕದಿಂದ ನೋಡಿ ಎಚ್ಚರಿಸಿ, ಧೈರ್ಯವಾಗಿರು ಎಂದು ಹೇಳಿ, ಸೋನಿಯನ್ನು ಕರೆದುಕೊಂಡು ಒಳಗಿನ ರೂಮಿಗೆ ಹೋದಳು. ಪೋಲೀಸ್ ಅಧಿಕಾರಿ ತಾನೂ ಕುಳಿತು, ಅವಳಿಗೂ ಕುಳಿತುಕೊಳ್ಳುವಂತೆ ಹೇಳಿದ.

"ನಾವು ಒಂದು ಕೊಲೆಯ ಕೇಸಿನ ಬಗ್ಗೆ ತನಿಖೆ ನಡೆಸುತ್ತಿದ್ದೇವೆ. ಅದಕ್ಕೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳನ್ನು ಕೇಳ್ತೀವಿ. ಮುಚ್ಚು ಮರೆ ಇಲ್ಲದೆ ಉತ್ತರಗಳನ್ನು ಹೇಳ್ತೀರಿ ಅಂತ ಅಂದ್ಕೊಂಡಿದೀನಿ."

"ಕೇಳಿ ಸಾರ್. ನನಗೆ ಗೊತ್ತಿರುವುದನ್ನು ಹೇಳ್ತೀನಿ." ಅವಳು ಧೈರ್ಯವಾಗಿ ಇದ್ದುದ್ದನ್ನು ಅವನು ಗಮನಿಸಿದ.

"ಗುಡ್... ನಿಮ್ಮ ಕೋ ಆಪರೇಷನ್ ಚೆನ್ನಾಗಿದೆ... ಗೌತಮ್, ನಿಮ್ಮ ಕಲೀಗ್ ಅಂತ ತಿಳೀತು. ಹಾಗೆ ನೀವಿಬ್ರೂ ಸ್ನೇಹಿತರು ಅಂತ ಸಹ ತಿಳೀತು... ನಿಮ್ಮಿಬ್ಬರಿಗೂ ಎಷ್ಟು ವರ್ಷದಿಂದ ಸ್ನೇಹ? ಹಾಗೇ... ನಿಮ್ಮಿಬ್ಬರ ನಡುವೆ..." ಪ್ರಶ್ನಾರ್ಥಕವಾಗಿ ನೋಡಿದ.

"ಸಾರೀ... ಸರ್... ಅದು ನನ್ನ ಪರ್ಸನಲ್ ವಿಷಯ."

"ಓ.ಕೇ... ಈಗ ಬೇಡ ಬಿಡಿ. ಗೌತಮ್ ಬಗ್ಗೆ ಹೇಳಿ...."

"ನಾನೂ, ಅವನೂ ಇಬ್ಬರೂ ಕಲೀಗ್ಸ್. ಮೂರು ವರ್ಷದ ಕೆಳಗೆ ನಾನು ಈಗ ಕೆಲಸ ಮಾಡುತ್ತಿರುವ ಕಂಪೆನಿಗೆ ಸೇರಿಕೊಂಡಾಗ ಅವನ ಪರಿಚಯವಾಯಿತು. ಸ್ನೇಹಿತರಾದೆವು... ಒಟ್ಟೊಟ್ಟಿಗೇ ಕೆಲಸ ಮಾಡಿದ್ದೇವೆ. ಒಟ್ಟೊಟ್ಟಿಗೇ ಓಡಾಡಿದ್ದೇವೆ."

"ಅಷ್ಟೇನಾ...? ಮದುವೆ ಗಿದುವೆ ಆಗುವ ವಿಷಯ?"

"ಆ ಬಗ್ಗೆ ಇನ್ನೂ ಯೋಚಿಸಿರಲಿಲ್ಲ..." ತಲೆ ತಗ್ಗಿಸಿದಳು.

"ಸುಳ್ಳು ಹೇಳ್ಬೇಡಿ ಮೇಡಂ... ಮದುವೆ ಬಗ್ಗೆ ಮಾತಾಡಿದ್ರಿ ಅಂತ ನಮಗೆ ತಿಳಿದಿದೆ..."

"ಒಂದು ವಿಷಯ ಸಾರ್..."

"ನಿಮ್ಮ ಬಗ್ಗೆ ಇಷ್ಟಲ್ಲಾ ನನಗೆ ಹೇಗೆ ತಿಳೀತು ಅಂತ ತಾನೇ.....ನೆನ್ನೆ ರಾತ್ರಿ ರೇಣುಕಾ ಅನ್ನುವ ಹುಡುಗಿಯ ಕೊಲೆ ಆಗಿದೆ. ಕೊಲೆಯಾದ ಸ್ಥಳದಲ್ಲಿ ಗೌತಮ್ ಇದ್ದರು ಅನ್ನುವ ವಿಷಯ ತಿಳಿದಿದೆ... ಗೌತಮ್ ನಿಮ್ಮ ಆಪ್ತ ಸ್ನೇಹಿತರು ಅನ್ನುವ ವಿಷಯ ತಿಳಿದು ಇಲ್ಲಿಗೆ ಬಂದಿದೀವಿ... ರೇಣುಕಾ ಗೊತ್ತಿರಬಹುದು ಅಲ್ವಾ?"

"ಹೂಂ ರೇಣುಕಾ ಗೊತ್ತು... ಶಶಾಂಕನ ಪತ್ನಿಯಾಗಲಿದ್ದವಳು. ಶಶಾಂಕ ಗೌತಮನ ಕಸಿನ್... ಆದರೆ ಅದಕ್ಕೂ ಈ ಕೊಲೆಗೂ ಏನು ಸಂಬಂಧ?"

"ಕೊಲೆಯಾಗಿರುವ ವಿಷಯ ನಿಮಗೆ ಈಗಾಗ್ಲೇ ತಿಳಿದಿದೆ ಅಂತ ನಿಮ್ಮ ಧ್ವನಿಯಿಂದಲೇ ಗೊತ್ತಾಗ್ತಿದೆ. ಹೌದಾ ಮೇಡಂ.....?"

"ಹೌದು..." ನಿಧಾನವಾಗಿ ಮೆಲುದನಿಯಲ್ಲಿ ಹೇಳಿದಳು. "ನೆನ್ನೆ ರಾತ್ರಿ ಸುಮಾರು ಹನ್ನೆರಡು ಮುಕ್ಕಾಲು ಗಂಟೆಯ ಸಮಯದಲ್ಲಿ ಗೌತಮ್‌ನಿಂದ ನನಗೆ ಫೋನು ಬಂದಿತ್ತು... ರೇಣುಕಾಳ ಕೊಲೆಯಾಗಿರುವ ವಿಷಯವನ್ನು ತಿಳಿಸಿದ. ಹಾಗೇ ಶಶಾಂಕ ಕೊಲೆಗಾರನಾಗಿರಬಹುದು ಅಂತಲೂ ತಿಳಿಸಿದ..."

"ಸರಿ... ಮತ್ತೇನು ಮಾತಾಡಿದ?"

'ಪೋಲೀಸರು ನನ್ನನ್ನು ಹುಡುಕುತ್ತಿದ್ದಾರೆ... ನನ್ನ ಬಗ್ಗೆ ಕೇಳಿದರೆ, ನಂಗೆ ಏನೂ ಗೊತ್ತಿಲ್ಲ ಅಂತ ಹೇಳು. ನಾನು ತಲೆ ಮರೆಸಿಕೊಂಡು ಹೋಗ್ತಿದೀನಿ' ಅಂತ ಹೇಳಿದ...

"ನಿಜವಾಗಿಯೂ...? ಆಶ್ಚರ್ಯ ಆಗ್ತಿದೆ. ಹಾಗಾದ್ರೆ ಇಲ್ಲಿ ನಿಮ್ಮ ಮನೆಯಲ್ಲಿ ಅಡಗಿರಬಹುದಾ...?"

"ಇಲ್ಲ ಸಾರ್... ಅವನು ಇಲ್ಲಿಗೆ ಬಂದಿಲ್ಲ..." ಭಯದಿಂದ ಹೇಳಿದಳು.

"ಆದರೂ, ನಾವು ಒಂದು ಸಾರಿ, ಮನೆಯೊಳಗೆ ನೋಡಿದರೆ ನಿಮ್ಮ ಅಭ್ಯಂತರ ಏನೂ ಇಲ್ಲ ಅಂತ ಅಂದ್ಕೊಳ್ತೀನಿ..."

"ಇಲ್ಲ, ನೋಡಬಹುದು" ಎಂದು ಒಪ್ಪಿಗೆಯನ್ನು ಕೊಟ್ಟಳು. ಅಧಿಕಾರಿಯೊಂದಿಗೆ ಬಂದಿದ್ದ ಸಹಾಯಕರು, ಮನೆಯೊಳಗೆ ಓಡಾಡಿ, ಯಾರೂ ಇಲ್ಲ ಎನ್ನುವುದನ್ನು ಖಚಿತಪಡಿಸಿಕೊಂಡು ಬಂದು ತಿಳಿಸಿದರು.

"ಓ.ಕೇ... ಥ್ಯಾಂಕ್ಸ್ ಮೇಡಂ. ನಿಮ್ಮ ಕೋ ಆಪರೇಷನ್‌ಗಾಗಿ... ನಾವು ಮತ್ತೆ ಬಂದು ಎನ್‌ಕ್ವೈರಿ ಮಾಡ್ತೀವಿ. ಅಷ್ಟರೊಳಗೆ, ಗೌತಮ್ ಬಗ್ಗೆ ನಿಮಗೆ ಏನೇ ವಿಷಯ ತಿಳಿದರೂ ನಮಗೆ ತಿಳಿಸ್ಬೇಕು. ಬೈದಿವೆ... ನಿಮ್ಮ ಮೊಬೈಲ್‌ನ ನಾವು ನಮ್ಮ ಕಸ್ಟಡಿಗೆ ತಗೊಂಡಿರ್ತೀವಿ..."

"ನನಗೆ ತೊಂದರೆ ಆಗುತ್ತಲ್ಲ ಸರ್... ನನ್ನನ್ನು ಆಫೀಸಿನವರು ಈ ನಂಬರ್‌ಗೇ

ಕಾಂಟಾಕ್ಟ್ ಮಾಡೋದು."

"ಓಕೇ... ಹಾಗಾದ್ರೆ ಇಟ್ಕೊಳ್ಳಿ. ಆದರೆ ನೆನಪಿರಲಿ... ಗೌತಮ್ ಬಗ್ಗೆ ಎಚ್ಚರದಿಂದಿರಿ. ಅವನು ಕ್ರಿಮಿನಲ್..." ಅವಳ ಮುಖ ಅವಮಾನದಿಂದ ಕೆಂಪಾಗಿತ್ತು. "ಸಾರೀ ಮೇಡಂ... ಗೌತಮನಿಂದಾಗಿ ನೀವು ಈ ಇಂಟರಾಗೇಷನ್‌ಗೆ ಹೆಲ್ಪ್ ಮಾಡಬೇಕಾಗಿ ಬಂತು... ನಾವಿನ್ನು ಬರ್ತೀವಿ."

"ಸಾರ್... ಒಂದು ವಿಷಯ... ನಿಮಗೆ ಕಂಪ್ಲೇಂಟ್ ಕೊಟ್ಟೋರು ಯಾರು?"

"ಶಶಾಂಕ್... ತನ್ನ ವುಡ್ ಬಿ ಯ ಕೊಲೆಯಾಗಿದೆ ಅಂತ ಫೋನಿನಲ್ಲಿ ತಿಳಿಸಿದ. ಗೌತಮನ ಮನೆ ಅಡ್ರೆಸ್ ಕೊಟ್ಟೋನೂ ಅವನೇ..."

"ಏನೂ? ರೇಣುಕಾಳ ಕೊಲೆ ನಡೆದದ್ದು ಗೌತಮನ ಮನೇಲಾ...?"

"ಹೌದು... ಗೌತಮ್ ಹೇಳಲಿಲ್ವಾ?"

"ಇಲ್ಲ. ಗಾಬರಿಯಲ್ಲಿ ನಾನೂ ಕೇಳಲಿಲ್ಲ. ಈಗ ಶಶಾಂಕ್ ಎಲ್ಲಿದ್ದಾನೆ?"

"ನಮ್ಮ ಕಸ್ಟಡೀಲೇ ಇದಾನೆ... ಅವನನ್ನು ವಿಚಾರಣೆ ಮಾಡ್ತೀವಿ... ಕೋರ್ಟಿಗೆ ಹಾಜರು ಪಡಿಸುವವರೆಗೂ ಲಾಕಪ್‌ನಲ್ಲಿ ಇರ್ತಾನೆ....."

"ಅಯ್ಯೋ ದೇವರೇ... ಅವನೇ ಕೊಲೆ ಮಾಡಿರಬಹುದು ಅಂತೀರಾ...?"

"ಅದೆಲ್ಲಾ ವಿಚಾರಣೆ ನಡೆದ ನಂತರ ತಿಳಿಯುತ್ತೆ. ಅವನು ನಮಗೆ ವಿಷಯ ತಿಳಿಸಿ, ತನ್ನ ಮನೆಗೆ ಹೊರಟು ಹೋಗಿದ್ದ. ಅಲ್ಲಿ ಅವನನ್ನು ಹಿಡಿದೆವು... ಅವನ ತಂದೆ ತಾಯಿಗೆ ಷಾಕ್... ಏನು ವಿಷಯ! ಯಾರು ಮಾಡಿದ್ದು! ಯಾಕೆ ಮಾಡಿದ್ದು ಎಲ್ಲಾ ವಿಷಯವೂ ಹೊರಗೆ ಬೀಳುತ್ತೆ... ನಾವು ಯಾರನ್ನೂ ಬಿಡುವುದಿಲ್ಲ. ತಪ್ಪಿತಸ್ಥರಿಗೆ ಶಿಕ್ಷೆ ಆಗಲೇ ಬೇಕು... " ಹೂಂಕರಿಸಿ ಹೊರ ನಡೆದ.

ಅವರುಗಳು ಅತ್ತ ಹೋದ ಕೂಡಲೇ, ಸಂಧ್ಯಾ ಹಾಗೂ ಸೋನಿ ಹೊರಗೆ ಬಂದರು. "ಗೌತಮ್‌ನ ಕೇಳ್ಕೊಂಡು ಬಂದಿದ್ದರು ಅಲ್ವಾ... ? ಏನಾಯ್ತಂತೆ?" ತಾಯಿ ಕೇಳಿದಾಗ, ಇವಳು ಮುಖ ಸಿಂಡರಿಸಿದಳು.

"ನಂಗೂ ಸರಿಯಾಗಿ ಗೊತ್ತಿಲ್ಲಮ್ಮ... ರೇಣುಕಾ ಅನ್ನೋಳನ್ನು ಯಾರೋ ಕೊಂದು ಹಾಕಿದಾರಂತೆ..."

"ನಿನ್ನನ್ನು ಕೇಳೋಕೆ ಪೋಲಿಸ್ನೋರು ಬಂದಿದ್ದರು.....ಅವರಿಗೆ ಉತ್ತರ ಹೇಳಿದೀಯಾ... ನಂಗೆ ಹೇಳೋಕೆ ಏನು ಧಾಡಿಯಾಗಿತ್ತೇ..."

"ನಿನ್ನ ಹತ್ರ ಆಮೇಲೆ ಮಾತಾಡ್ತೀನಿ... ಈಗ ನಂಗೆ ಆಫೀಸ್ಗೆ ಹೊತ್ತಾಯ್ತು ಹೋಗ್ಬೇಕು, ತಿಳೀತಾ?"

"ಇವತ್ತು ರಜಾ ಹಾಕು ಸೀಮಾ... ಯಾಕೋ ಹೊರಟ ಘಳಿಗೆ ಚೆನ್ನಾಗಿಲ್ಲ. ಹಾಗೇ ನಿನ್ನ ಡ್ಯಾಡಿಗೆ ಫೋನು ಮಾಡು ಬೇಗ್ಬನ್ನಿ ಅಂತ..."

"ಡ್ಯಾಡಿ ಬೇಗ್ಬಂದು ಏನ್ಮಾಡ್ತಾರೆ? ಅಲ್ಲದೇ ನಾನು ಏನು ಅಪರಾಧ ಮಾಡಿಲ್ಲ ಹೆದರುಕ್ಕೆ. ನಾನು ಕೆಲಸಕ್ಕೆ ಹೋಗದಿದ್ದರೆ ಎಲ್ಲರಿಗೂ ಅನುಮಾನ ಬರುತ್ತೆ. ನೀನು ರೆಡಿಯಾಗೇ ಸೋನಿ, ನಿನ್ನನ್ನು ಹಾಗೇ ಕಾಲೇಜಿಗೆ ಡ್ರಾಪ್ ಮಾಡ್ತೀನಿ."

"ನಂಗೆ ಒಬ್ಬಳಿಗೇ ಮನೇಲಿರಕ್ಕೆ ಭಯ ಆಗುತ್ತೆ... ಮತ್ತೆ ಪೋಲೀಸ್ನೋರು ಬಂದರೆ... ಅಥವಾ ಗೌತಮ್ ಬಂದ್ರೆ....?"

"ಯಾರೂ ಬರೋಲ್ಲ... ಬೇಕಾದ್ರೆ ನೀನೂ ನಿನ್ನ ಅಣ್ಣನ ಮನೆಗೆ ಹೋಗು. ಸಾಯಂಕಾಲ ನಾನೇ ಬಂದು ಕರ್ಕೊಂಡು ಬರ್ತೀನಿ..."

"ಸರಿ, ಹಾಗೇ ಮಾಡ್ತೀನಿ." ಮೂವರೂ ಸಿದ್ಧರಾದರು. ಸೀಮಾ ಟ್ಯಾಕ್ಸಿಗೆ ಫೋನು ಮಾಡಿದಳು.

******

ಸೀಮಾ, ತನ್ನ ಟೇಬಲ್ಲಿಗೆ ಬರುತ್ತಿದ್ದಂತೆ, ಅವಳನ್ನು ಕಂಡ ಕೆಲವು ಸಹೋದ್ಯೋಗಿಗಳು ಅವಳನ್ನು ಸುತ್ತುವರೆದರು. ಇವಳು ಪೆಚ್ಚು ನಗೆಯನ್ನು ನಕ್ಕಳು.

"ಸಾರೀ ಸೀಮಾ... ಪೇಪರ್ನಲ್ಲಿ ನ್ಯೂಸ್ ಓದಿದೆವು..."

"ನೋ ಕಾಮೆಂಟ್ಸ್ ಪ್ಲೀಸ್..."

"ಪೋಲೀಸ್ ಇನ್ಸ್ಪೆಕ್ಟರ್ ಬಂದು ಬಾಸ್ ಹತ್ತಿರ ಮಾತಾಡಿ ಹೋದ್ರು... ನೀನು ಬಂದ ಮೇಲೆ ಅವರನ್ನು ಕಳಿಸಿ ಅಂತ ಹೇಳಿದಾರೆ..." ಸ್ನೇಹಿತೆ ನುಡಿದಳು.

"ಸರಿ... ಹೋಗ್ತೀನಿ..."

"ನಾನೂ ನಿನ್ನ ಜೊತೆ ಬರ್ತೀನಿ ಬೇಕಾದ್ರೆ..."

"ನಂಗೆ ಏನೂ ಭಯವಿಲ್ಲ ವಾಣೀ... ಕೇಳಿದ್ದಕ್ಕೆ ಸರಿಯಾಗಿ ಉತ್ತರ ಕೊಡ್ತೀನಿ. ನಿಮಗೆ ಆಸಕ್ತಿ ಇದ್ದರೆ ಬನ್ನಿ. ಪರವಾಗಿಲ್ಲ."

"ಹಾಗಲ್ಲ ಸೀಮಾ... ನನ್ನ ಮಾರಲ್ ಸಪೋರ್ಟ್... "

"ಬನ್ನಿ ಅಂದ್ನಲ್ಲ... ನಂಗೆ ಯಾವ ಹೆಸಿಟೇಷನ್ ಇಲ್ಲ..." ಎನ್ನುತ್ತಾ ಬಾಸ್‌ನ ಛೇಂಬರ್ ಕಡೆ ನಡೆದಳು. ವಾಣಿ ಅವಳ ಹಿಂದೆ ನಡೆದಳು. ಗಾಜಿನ ಬಾಗಿಲನ್ನು ತಳ್ಳಿ "ಮೇ ಐ ಕಮಿನ್ ಸಾರ್..." ಎಂದು ವಿನಯದಿಂದ ಕೇಳಿದಳು.

"ಬನ್ನಿ" ಎಂದು ಕಣ್ಣು ಸಂಜ್ಞೆಯಲ್ಲಿ ಕರೆದು ಕುಳಿತುಕೊಳ್ಳಿ ಎಂದು ಕುರ್ಚಿಯ ಕಡೆ ಕೈ ಮಾಡಿ ಹೇಳಿದ. ಇಬ್ಬರೂ ನಿಂತೇ ಇದ್ದರು... "ಇದೆಲ್ಲಾ ಏನ್ರೀ ಸೀಮಾ... ಗೌತಮ್‌ನ ಹುಡುಕ್ಕೊಂಡು ಪೋಲೀಸ್ನೋರು ನಿಮ್ಮ ಮನೆಗೆ ಬಂದಿದ್ರಂತೆ... ಇಲ್ಲಿಗೂ ಬಂದಿದ್ರು.. ನಿಮಗೂ ಅವನಿಗೂ ತುಂಬಾ ಸ್ನೇಹವಂತೆ..."

ಅವಳ ಮುಖ ಕೆಂಪಾಯಿತು. ಉತ್ತರಿಸಲಿಲ್ಲ..."ಹೋಗ್ಲಿ ಬಿಡಿ... "ಅದು

ನಿಮ್ಮ ಪರ್ಸನಲ್ ವಿಷಯ... ಆದರೆ ಒಂದು ಮಾತು ಹೇಳ್ತೀನಿ... ಅವನು ಕ್ರೈಂ ಮಾಡಿ ನಾಪತ್ತೆಯಾಗಿದಾನೆ. ನೀವು ಹುಷಾರಾಗಿರಿ... ಇದರಲ್ಲೆಲ್ಲಾ ಇನ್ವಾಲ್ವ್ ಆಗ್ಬೇಡಿ... ಇದರಿಂದ ನಿಮ್ಮ ಕೆಲಸಕ್ಕೆ ತೊಂದರೆ ಆಗುತ್ತೆ..."

"ಇಲ್ಲ ಸಾರ್... ನನಗೆ ಯಾವ ವಿಷಯವೂ ಗೊತ್ತಿಲ್ಲ..."

"ನಿಮಗೆ ಫೋನು ಮಾಡಿದ್ದ ಅಂಥ ಪೋಲೀಸರಿಗೆ ಹೇಳಿದ್ರಂತೆ. ಯಾಕೆ?"

"ನಿಜಾನ ಹೇಳ್ದೆ ಸಾರ್... ಆದರೆ ಅವನು ಎಲ್ಲಿಗೆ ಹೋಗಿದಾನೆ? ಏನು ಮಾಡಿದ ಅಂಥ ನನಗೆ ಖಂಡಿತಾ ಗೊತ್ತಿರ್ಲಿಲ್ಲ."

"ನೋಡಿ, ಎಂತೆಂಥ ಸ್ನೇಹಿತರು ಇರ್ತಾರೆ ಅಂತ... ಇನ್ನಾದರೂ ಎಚ್ಚರ ದಿಂದಿರಿ. ಪೋಲೀಸರು ನಿಮ್ಮನ್ನು ವಾಚ್ ಮಾಡ್ತಾನೇ ಇರ್ತಾರೆ... ಏನು ಮಾಡ್ತೀರಿ ...? ಗೌತಮ್ ಮತ್ತೇನಾದರೂ ಫೋನ್ ಮಾಡಿದ್ರೆ, ಎಲ್ಲಿದ್ದಾನೆ ಅಂತ ತಿಳ್ಕೊಂಡು ಪೋಲೀಸರಿಗೆ ತಿಳಿಸಿ... ಅವರು ವಿಚಾರಿಸಿಕೊಳ್ಳಲಿ. ನಿಜ ಏನೂಂತ ಹೊರಗೆ ಬರುತ್ತೆ... ಅದ್ಸರಿ, ಗೌತಮ್ ಅಂಥೋನು ಅಂತ ಅನ್ಸುತ್ತಾ?"

"ಇಲ್ಲ ಸಾರ್. ಗೌತಮ್ ಅಂಥೋನಲ್ಲ... ಅಲ್ಲದೆ ಕೊಲೆಯಾದವಳು ಅವನ ಕಸಿನ್ ಶಶಾಂಕನ [illegible] ಬೀ... ಅವಳೇಕೆ ಇವನ ಮನೆಗೆ ಬಂದಳು...! ಕೊಲೆ ಹೇಗಾಯ್ತು ಒಂದೂ ಅರ್ಥ ಆಗ್ತಿಲ್ಲ."

"ಅದನ್ನೆಲ್ಲ ಗೌತಮನೇ ಹೇಳ್ಬೇಕು... ಶಶಾಂಕ ಅನ್ನೋರು ಎಲ್ಲಿದ್ದಾರೆ...! ಕಂಪ್ಲೆಂಟ್ ಕೊಟ್ಟವರು ಯಾರು...?"

"ಕಂಪ್ಲೆಂಟ್ ಕೊಟ್ಟಿರೋದು ಶಶಾಂಕನೇ. ಅವನು ಪೋಲೀಸರ ಕಸ್ಟಡೀಲೇ ಇದಾನಂತೆ. ಹಾಗಂತ ಪೋಲೀಸ್ ಇನ್ಸ್‌ಪೆಕ್ಟರರೇ ಹೇಳಿದ್ರು."

"ಹೌದು ನಂಗೂ ಹೇಳಿದ್ರು... ಈಗ ನೆನಪಿಗೆ ಬಂತು. ನೀವು ಪೋಲೀಸರ ಬಳಿ ಎಚ್ಚರಿಕೆಯಿಂದ ಮಾತಾಡಿ... ಬೇಕಾದ್ರೆ ನಾಲ್ಕು ದಿನ ರಜೆ ಹಾಕಿ... ನಿಮ್ಮ ತಂದೆ ಏನಂತಾರೆ...? ಅವರಿಗೆ ಗೌತಮನ ಪರಿಚಯ ಇದೆಯಾ...!"

"ಇದೆ ಸಾರ್... ಗೌತಮ್ ಒಂದೆರಡು ಸಾರಿ ನಮ್ಮ ಮನೆಗೆ ಬಂದಿದ್ದ. ಈಗ ನಮ್ಮ ತಂದೆ ಊರಿನಲ್ಲಿಲ್ಲ. ನಾಳೆ ಬರಬಹುದು."

"ಏನೇ ವಿಷಯ ಇದ್ದರೂ ನಿಮ್ಮ ತಂದೆಯ ಬಳಿ ಮುಚ್ಚು ಮರೆ ಮಾಡ್ಬೇಡಿ. ನಿಮ್ಮಿಂದಾಗಿ, ಮನೆಯವರೆಲ್ಲ ಸಫರ್ ಮಾಡ್ಬಾರ್ದು. ಇದು ನನ್ನ ಅಡ್ವೈಸ್." ಆತ ಹೇಳಿದಾಗ, ಅವಳ ಮುಖದ ಕಳೆ ಕುಂದಿತು. "ಡೋಂಟ್ ವರೀ ಸೀಮಾ, ನಾವೆಲ್ಲಾ ನಿಮ್ಮ ಜೊತೆಗಿದ್ದೇವೆ. ಗೌತಮನ ತಪ್ಪು ಏನೂ ಇಲ್ಲದೇ ಇರಬಹುದು, ಯಾರಾದರೂ [illegible] ಹೆದರಿಸಿರಬಹುದು. ಎವ್ವೆರಿ ಥಿಂಗ್ ವಿಲ್ ಬಿ ಆಲ್ ರೈಟ್... ಹೋಪ್ ದಿ ಬೆಸ್ಟ್." ಎಂದ

"ಥ್ಯಾಂಕ್ ಯೂ ಸರ್..." ಎಂದು ಹೇಳಿ ಹೊರಗೆ ಬಂದಳು. ಅವಳ ಮನಸ್ಸು ಗೊಂದಲಮಯವಾಗಿತ್ತು.

"ವಾಣೀ, ನನ್ನ ಮೂಡ್ ಚೆನ್ನಾಗಿಲ್ಲ. ನಾನು ಮನೆಗೆ ಹೋಗ್ತೀನಿ." ಎಂದು ಹೇಳಿ ಹೊರಡಲು ಸಿದ್ಧಳಾದಳು.

"ಹಾಗೇ ಮಾಡು ಸೀಮಾ, ನಾಲ್ಕು ದಿನ ರಜಾ ಹಾಕು. ಬಾಸ್ ಹೇಳಿದ್ದು ನೆನಪಿದೆ ತಾನೇ... ಗೌತಮ್ ತಪ್ಪು ಮಾಡಿದ್ದಾನೋ ಇಲ್ಲವೋ ಅದು ಅವನಿಗೇ ಗೊತ್ತು. ನೀನು ಮಾತ್ರ ಯಾವುದಕ್ಕೂ ಸಿಕ್ಕಿ ಹಾಕಿಕೊಳ್ಳಬೇಡ... ನಿಂಗೆ ಏನೇ ಹೆಲ್ಪ್ ಬೇಕಿದ್ದರೂ ಫೋನು ಮಾಡು. ನಾವುಗಳು ಮಾಡ್ತೀವಿ..." ಅವಳು ವಿಶ್ವಾಸದಿಂದ ಹೇಳಿದಾಗ ತಲೆಯಾಡಿಸಿದಳು.

"ನಾನು ಮೊದಲು ಶಶಾಂಕನನ್ನು ನೋಡ್ಬೇಕು. ಅವನ ಹತ್ರ ಮಾತಾಡ್ಬೇಕು. ಪೋಲೀಸ್ನೋರು ಏನಂತಾರೋ? ನನ್ನ ತಂದೆ ಬಿಡ್ತಾರೊ ಇಲ್ವೋ.. .." ಅನುಮಾನ ವನ್ನು ವ್ಯಕ್ತಪಡಿಸಿದಳು.

"ಶಶಾಂಕನ ತಂದೆ ಅವನ ಬೇಲ್‌ಗೆ ಟ್ರೈ ಮಾಡಿರಬಹುದು... ಅವನು ಹೊರಗೆ ಬಂದ ಮೇಲೆ ಮಾತಾಡುವಂತೆ..."

"ರೇಣುಕಾ, ಒಬ್ಬರ ಮನೇಲಿ ಪೇಯಿಂಗ್ ಗೆಸ್ಟ್ ಆಗಿದ್ದಳು. ಅವಳ ರೂಂ ಮೇಟ್ ಒಬ್ಬಳಿದ್ದಳು. ಅವಳ ಹತ್ರ ಮಾತಾಡ್ಬೇಕು. ಅವಳಿಗ ಏನಾದರೂ ವಿಷಯ ಗೊತ್ತಿದ್ದರೂ ಗೊತ್ತಿರಬಹುದು."

"ಹಾಗೇ ಮಾಡು ಸೀಮಾ... ಬೇಕಾದರೆ ನಾನೂ ನಿನ್ನ ಜೊತೇಲಿ ಬರ್ತೀನಿ... ಇಂಥಾ ದುರಂತ ನಡೆಯಬಾರದಾಗಿತ್ತು. ನಿಜ ಏನು ಅಂತ ಪತ್ತೆ ಹಚ್ಚಿ ಅಪರಾಧಿ ಯಾರು ಅಂಥ ಕಂಡು ಹಿಡಿಯಲೇಬೇಕು."

"ಗೌತಮ್ ಅಪರಾಧ ಮಾಡಿಲ್ಲದೇ ಇರಲಿ ಅಂತ ಹಾರೈಸ್ತೀನಿ... ಬಿಕಾಸ್ ಐ ಲವ್ ಹಿಮ್ ವೆರಿ ಮಚ್... ಅವನು ನನ್ನ ಲೈಫನ್ನು ಹಾಳು ಮಾಡಲ್ಲ ಅಂಥ ಅಂದ್ಕೋತೀನಿ..." ಸೀಮಾಳ ಧ್ವನಿ ದಪ್ಪಗಾಗಿತ್ತು.

"ಡೋಂಟ್ ವರೀ ಸೀಮಾ... ಧೈರ್ಯವಾಗಿರು... ದೇವರನ್ನು ನಂಬು..." ವಾಣಿ ವಿಶ್ವಾಸದಿಂದ ಅವಳ ಭುಜವನ್ನು ಒತ್ತಿದಳು. ಸೀಮಾ ತನ್ನ ಹ್ಯಾಂಡ್ ಬ್ಯಾಗನ್ನೆತ್ತಿಕೊಂಡು ಅಲ್ಲಿಂದ ಹೊರಬಿದ್ದಳು.

ಮನೆಯ ಮುಂದೆ ಕಾರು ನಿಂತಿರುವುದನ್ನು ಕಂಡು ಅನುಮಾನಿಸುತ್ತಾ ಒಳಗೆ ಬಂದಳು. ತಂದೆ ಬಂದಿರಬಹುದೇ... ಅವರು ಏನು ಕೇಳಿ ಬಿಡುವರೋ ಎಂದು ಅಂಜುತ್ತಾ ಹಿಂಬಾಗಿಲ ಬಳಿಗೆ ಬಂದು, ಮೆಲ್ಲನೆ ಬೆರಳಿನಿಂದ ಬಾಗಿಲನ್ನು ಬಡಿದಳು.

ತಾಯಿ ಬಂದು ಬಾಗಿಲನ್ನು ತೆರೆದಳು, "ಸೀಮಾ, ಅದ್ಯಾಕೆ ಇಷ್ಟು ಬೇಗ ವಾಪಸ್ಸು ಬಂದ್ಬಿಟ್ಟೆ? ಯಾರಾದ್ರೂ ಏನಾದ್ರೂ ಅಂದ್ರೇನೇ?" ಗಾಬರಿಯಿಂದ ಕೇಳಿದಳು.

ಸೀಮಾ ಒಳಗೆ ಬಂದಳು, "ಯಾರು ಬಂದಿದಾರೆ? ಡ್ಯಾಡಿ ಊರಿಗೆ ಬಂದ್ರಾ?"

"ಡ್ಯಾಡಿ ಬರೋ ಹೊತ್ತಿಗೆ ನಾನೂ ಬಂದ್ಬಿಟ್ಟೆ... ಗೌತಮನ ತಂದೆ-ತಾಯಿ ಬಂದಿದಾರೆ. ಮಾತಾಡ್ತಿದಾರೆ... "

"ಡ್ಯಾಡಿ, ನಾಳೆ ಬರೋದು ಇದ್ರಲ್ಲವಾ?"

"ಗೌತಮ್ ಫೋನ್ ಮಾಡಿದ್ನಂತೆ... ಅರ್ಜೆಂಟು ಬೇಗ ಬನ್ನಿ ಅಂತ ಹೇಳಿದ್ನಂತೆ. [illegible] ಡ್ಯಾಡಿ ತಕ್ಷಣ ನನಗೆ ಫೋನು ಮಾಡಿದರು.....ನಾನು ಕೆಲವು ವಿಷ[illegible]ಬೇಕಾಯ್ತು.....ತಕ್ಷಣವೇ ಹೊರಟು ಬಂದು ಬಿಟ್ಟಿದ್ದಾರೆ."

"ಸರಿ, ಅವನ ತಂದೆ-ತಾಯಿ ಯಾಕೆ ಬಂದಿದಾರ?"

"ಅವನು, ಅವರಿಗೂ ಫೋನು ಮಾಡಿ, ತನ್ನ ಮೇಲೆ ಕೊಲೆ ಆಪಾದನೆ ಬಂದಿದೆ... ನಾನು ಸಧ್ಯಕ್ಕೆ ಅವಿತಿಟ್ಟುಕೊಂಡಿದೀನಿ... ನಿನ್ನ ಡ್ಯಾಡಿಯ ಹತ್ತಿರ ಮಾತನಾಡಿ ಅಂತ ಹೇಳಿದ್ನಂತೆ... ಅದಕ್ಕೇ ಬಂದಿದಾರೆ..."

"ಡ್ಯಾಡಿ ಏನು ಮಾಡಕ್ಕೆ ಸಾಧ್ಯ? ಹಾಗಂತ ಹೇಳಲಿ...!"

"ನೋಡೋಣ... ಅವರೇ ಮಾತನಾಡಿಕೊಳ್ತಿದಾರೆ... ನಿನ್ನ ಆಫೀಸ್ನೋರಿಗೂ ವಿಷಯ ಗೊತ್ತಾಗಿರಬಹುದು..."

"ಹ್ಞೂಂನಮ್ಮಾ... ಪೋಲೀಸ್ನೋರು ಅಲ್ಲಿಗೂ ಬಂದಿದ್ರಂತೆ... ಗೌತಮನ್ನ ಸೀರಿಯಸ್ಸಾಗಿ ಹುಡುಕ್ತಿದಾರ..."

"ಅವನು ಕೊಲೆ ಮಾಡಿರಬಹುದು ಅಂಥ ಅನ್ಸುತ್ತಾ ಸೀಮಾ... ನಿಂಗೆ ಅವನು ಚೆನ್ನಾಗಿ ಗೊತ್ತಲ್ಲಾ..." ಸೀಮಾ ಓರೆಗಣ್ಣಿನಿಂದ ತಾಯಿಯ ಕಡೆ ನೋಡಿದಳು.

"ಅವನು ಅಂಥೋನಲ್ಲ. ಆದರೂ ಹೆದರಿದಾನೆ. ಏನೋ ನಡೆದಿದೆ. ಅದನ್ನು ಅವನೇ ಹೇಳ್ಬೇಕು... ನನಗೂ ಶಶಾಂಕನ ಮೇಲೆ ಸ್ವಲ್ಪ ಅನುಮಾನ ಇದೆ."

"ಆದರೆ ಅವನ ಮನೇಲೇ ಈ ಘಟನೆ ನಡೆದಿದೆಯಂತಲ್ಲ. ಅವರು ಊರಿನಲ್ಲಿರಲಿಲ್ಲ. ಗೌತಮನ ಫೋನು ಬಂದ ಮೇಲೆ ಊರಿಗೆ ವಾಪಸ್ಸು ಬಂದಿದಾರೆ. ಆದರೆ ಅವರ ಮನೆಗೆ ಹೋಗುವಂತಿಲ್ಲ. ಸೀಜ್ ಮಾಡಿದಾರಂತೆ. ಹೋಟೆಲ್ಲಿನಲ್ಲಿ ಉಳಿದುಕೊಂಡಿದಾರಂತೆ... ಇದೆಲ್ಲಾ ಏನು? ಎಲ್ಲಿಗೆ ಹೋಗಿ ಮುಟ್ಟುತ್ತೋ..." ತಾಯಿ ನಿಟ್ಟುಸಿರು ಬಿಟ್ಟಳು.

ಸೀಮಾ ತನ್ನ ರೂಮಿಗೆ ಹೋಗಿ, ಮುಖ ತೊಳೆದು, ಬಟ್ಟೆ ಬದಲಾಯಿಸಿ

ಮಂಚದ ಮೇಲೆ ಮಲಗಿದಳು.

ತಾಯಿ ತಿಂಡಿ, ಕಾಫಿಯನ್ನು ಅಲ್ಲಿಗೇ ತಂದಿತ್ತಳು. "ಅವರು ಹೊರಡ್ತಾರಂತೆ ಸೀಮಾ... ಅದಕ್ಕೆ ಮುಂಚೆ ನಿನ್ನ ಹತ್ರ ಮಾತಾಡ್ಬೇಕು ಅಂತ ಇದಾರೆ... ಬರಕ್ಕೆ ಇಷ್ಟವಿದ್ದರೆ ಬಾ... ಇಲ್ಲದಿದ್ರೆ ನಿಂಗೆ ಮಾತಾಡಕ್ಕೆ ಇಷ್ಟವಿಲ್ಲ ಅಂತ ಹೇಳಿಬಿಡ್ತೀನಿ."

"ಇಲ್ಲಮ್ಮ, ನಾನು ಅವರ ಹತ್ರ ಮಾತಾಡ್ತೀನಿ. ತಿಂಡೀನ ಆಮೇಲೆ ತಿಂತೀನಿ." ಎಂದು ಹೇಳಿ ಕಾಫಿಯನ್ನು ಕುಡಿದು ಎದ್ದು ಹೊರಕ್ಕೆ ಬಂದಳು.

ಗೌತಮನ ತಂದೆ-ತಾಯಿ ಅವಳನ್ನೇ ದಿಟ್ಟಿಸಿದರು, "ಹಲೋ ಸೀಮಾ... ಹೇಗಿದ್ದೀಯಾಮ್ಮಾ" ಅಂತ ಆಕೆ ಕೇಳಿದಾಗ ಇವಳಿಗೆ ಕೃತಕ ಎನಿಸಿತು. ಸುಮ್ಮನೆ ಕೈ ಮುಗಿದಳು. ಕೂತ್ಕೋ ಎಂದು ಹೇಳಿ ಆಕೆ ಅವಳನ್ನು ತನ್ನ ಪಕ್ಕದಲ್ಲಿ ಕೂರಿಸಿಕೊಂಡಳು. ಆಫೀಸ್ಗೆ ಹೋಗಿದ್ದೆಯಂತೆ... ಆಕೆ ಕೇಳಿದಾಗ, ಇವಳು ಸುಮ್ಮನೇ ದಿಟ್ಟಿಸಿದಳು.

ಸೀಮಾಳ ತಂದೆ-ತಾಯಿ ಒಳಗೆ ಎದ್ದು ಹೋಗಿದ್ದರು. ಆಕೆ, ಮೆಲ್ಲನೆ ಇವಳ ಕೈ ಹಿಡಿದುಕೊಂಡಳು. "ಗೌತಮ ತುಂಬಾ ಹೆದರಿಕೊಂಡಿದ್ದಾನೆ. ಈಗ ನೀನೇ ಏನಾದರೂ ಮಾಡ್ಬೇಕು. ಇಲ್ಲದಿದ್ರೆ ಅವನು ವಾಪಸ್ಸು ಬರೋದೇ ಇಲ್ಲ."

"ಅವನು ಎಲ್ಲಿದ್ದಾನಂತೆ?" ಸೀಮಾ ಕೈ ಬಿಡಿಸಿಕೊಂಡು ಕೇಳಿದಳು.

"ಗೊತ್ತಿಲ್ಲ. ಗಾಬರಿಯಲ್ಲಿ ನಾವೂ ಕೇಳಲಿಲ್ಲ. ಇದೇ ಊರಿನಲ್ಲಿರಬಹುದು ಅಂತ ಅಂದ್ಕೊಂಡೆವು. ಮನೆಗೆ ಬೀಗ ಹಾಕಿದೆ. ಅಕ್ಕಪಕ್ಕದವರು ಏನೇನೋ ಕೇಳಿದ್ರು, ಈಗ ಹೋಟೇಲಿನಲ್ಲಿ ಉಳಿದುಕೊಂಡಿದೀವಿ....."

"ಶಶಾಂಕನ ಮನೆಗೆ ಹೋಗಬಹುದಾಗಿತ್ತಲ್ವಾ! ಅವರು ನಿಮ್ಮ ಹತ್ತಿರದ ಸಂಬಂಧಿಗಳು ಅಲ್ವಾ?"

ಅವರುಗಳು ಈಗ ನಮ್ಮನ್ನು ಹತ್ತಿರಕ್ಕೆ ಸೇರಿಸ್ತಾರೇನಮ್ಮಾ... ಕೊಲೆಯಾಗಿರುವವಳು ಅವರ ಭಾವೀ ಸೊಸೆ ರೇಣುಕಾ... ಶಶಾಂಕ ಲಾಕಪ್ಪಿನಲ್ಲಿದ್ದಾನಂತೆ... ನಮಗಂತೂ ಒಂದೂ ಅರ್ಥ ಆಗ್ತಿಲ್ಲ. ಯಾರೋ ನಮಗೆ ಆಗದವರು ಈ ಕೃತ್ಯವನ್ನು ಮಾಡಿ, ಇವರಿಬ್ಬರಿಗೂ ಕೆಟ್ಟ ಹೆಸರು ತರುಕ್ಕೆ ಪ್ರಯತ್ನ ಮಾಡಿದ್ದಾರೆ."

"ರೇಣುಕಾಳ ತಂದೆ--ತಾಯಿ ಬಂದ್ರಾ..! ಅವರು ಏನಂತಾರೆ...?"

"ನಾವು ಅವರನ್ನು ಭೇಟಿಯಾಗಲೇ ಇಲ್ಲ. ಅವರುಗಳು ಸರ್ಕಾರಿ ಆಸ್ಪತ್ರೆಗೆ ಹೋಗಿರಬಹುದು ಅಂತ ಅಂದ್ಕೊಂಡ್ವು."

"ಮತ್ತೆ ಗೌತಮನ ಫೋನು ಬಂದರೆ ನನಗೆ ತಿಳಿಸಿ... ನಾನು ಅವನ ಹತ್ರ ಮಾತಾಡ್ಬೇಕು. ಫೋನು ನಂಬರನ್ನು ಮರೆಯದೇ ತಗೊಳ್ಳಿ...."

"ನಿನಗೇ ಫೋನು ಮಾಡುವಂತೆ ತಿಳಿಸ್ತೀನಿ."

"ಬೇಡ, ಪೋಲೀಸರು ಈಗಾಗಲೇ ಒಂದು ಸಾರಿ ಬಂದು ವಿಚಾರಣೆ ಮಾಡಿ ಹೋಗಿದಾರೆ. ನನ್ನ ಫೋನಿಗೆ ಅವನ ಕಾಲ್ ಬರುವುದು ಬೇಡ... ಹಾಗಂತ ಹೇಳಿ... ನಮ್ಮ ತಾಯಿಯ ಮೊಬೈಲ್ ನಂಬರನ್ನು ನಿಮಗೆ ಕೊಡ್ತೀನಿ... ನೀವು ಮೇಸೇಜ್ ಬಿಟ್ಟರೆ ಸಾಕು. ನಾನೇ ನಿಮಗೆ ಕಾಲ್ ಮಾಡ್ತೀನಿ..."

"ಸರಿ ಸೀಮಾ... ನಿನಗೆ ತುಂಬಾ ಬೇಸರ ಆಗಿರಬಹುದು ಅಲ್ವಾ..? ನಮ್ಮ ಗೌತಮ ಅಂಥೋನಲ್ಲ ಅಂತ ನಿನಗೇ ಗೊತ್ತು... ಏನೋ ವಿಷ ಘಳಿಗೆ. ಅವನ ಗ್ರಹಚಾರ, ಎಲ್ಲಾ ಸರಿ ಹೋದ ಕೂಡಲೇ ನಿಮ್ಮಿಬ್ಬರ ಮದುವೆ ಮಾಡಿಸಿ ಬಿಡ್ತೀವಿ..."

ಸೀಮಾ ನಕ್ಕಂತೆ ಮಾಡಿದಳು. 'ಬಹುಶಃ ಇದೇ ಮೊದಲ ಸಲ ನನ್ನನ್ನು ನೋಡಿರುವುದು, ಇದ್ದಕ್ಕಿದ್ದಂತೆ ಇಷ್ಟು ಆಸಕ್ತಿ... ಎಲ್ಲಾ ಮಗನಿಗಾಗಿ, ಎಷ್ಟು ಸ್ವಾರ್ಥಿಗಳು' ಎಂದು ತನ್ನಲ್ಲೇ ನುಡಿದುಕೊಂಡಳು. ತಾಯಿಯ ನಂಬರನ್ನು ಬರೆದು ಕೊಟ್ಟಳು. ಇಬ್ಬರೂ ಎದ್ದರು.

"ರೇಣುಕಾ, ಪೇಯಿಂಗ್ ಗೆಸ್ಟ್ ಆಗಿದ್ದ ಆ ಅಡ್ರೆಸ್ ನಿಮಗೆ ಗೊತ್ತಿದ್ದರೆ ಕೊಡಿ... ನಾನು ಅವಳ ರೂಂಮೇಟ್ ಹತ್ರ ಮಾತಾಡ್ತೀನಿ... ಅವಳಿಗೆ ಏನಾದರೂ ವಿಷಯ ಗೊತ್ತಿರಲೇ ಬೇಕು."

"ಸರಿ, ನೋಟ್ ಮಾಡ್ಕೋ... ನಂಗೂ ಸರಿಯಾಗಿ ನೆನಪಿಲ್ಲ." ಎಂದು ಹೇಳಿ, ಏರಿಯಾ, ಕ್ರಾಸ್ ಹಾಗೂ ಮನೆಯ ಒಡತಿಯ ಹೆಸರನ್ನು ತಿಳಿಸಿದಳು. "ಪೇಯಿಂಗ್ ಗೆಸ್ಟ್ ನಡೆಸ್ತಾರಲ್ಲಾ ಅವರ ಮನೆ ಅಂತ ಕೇಳಿದ್ರೆ ಯಾರಾದ್ರೂ ತಿಳಿಸ್ತಾರೆ, ಅವಳ ಹತ್ರ ಮಾತಾಡಿದ್ಮೇಲೆ ನಂಗೆ ತಿಳಿಸು. ಇದರಿಂದ ಗೌತಮನಿಗೆ ಏನಾದರೂ ಉಪಯೋಗವಾಗಬಹುದು."

"ಸರಿ, ತಿಳಿಸ್ತೀನಿ." ಎಂದಳು. ಅವರುಗಳು ಮತ್ತೊಮ್ಮೆ ಹೇಳಿದರು...

"ನಿಮ್ಮ ತಂದೆಗೆ ಕೆಲವು ಪೋಲೀಸ್ ಅಧಿಕಾರಿಗಳ ಪರಿಚಯ ಇದೆಯಂತೆ. ಹಾಗೇ, ಒಬ್ಬ ಒಳ್ಳೆಯ ಲಾಯರನ್ನು ಗೊತ್ತು ಮಾಡಿಕೊಟ್ಟರೆ, ಗೌತಮನಿಗೆ ಏನೂ ತೊಂದರೆ ಆಗುವುದಿಲ್ಲ. ಇಷ್ಟನ್ನು ನಿಮ್ಮ ತಂದೆ ಮಾಡಿದರೆ ಸಾಕು... ನೀನೂ ಸ್ವಲ್ಪ ಹೇಳಮ್ಮ... ಇದರಿಂದ ನಿನಗೇ ಒಳ್ಳೆಯದು" ಎಂದು ಹೇಳಿ, ಅಲ್ಲಿಂದ ಹೊರಟರು. ಅವರುಗಳು ಗೇಟನ್ನು ತಲುಪಿದ ಕೂಡಲೇ ತಂದೆ ಸಂಜೀವಯ್ಯ ಮಗಳ ಕಡೆ ನೋಡಿ ಗುಡುಗಿದರು. "ಏನಿದೆಲ್ಲಾ ಸೀಮಾ... ಗೌತಮನ್ನ ಹುಡುಕ್ಕೊಂಡು ಪೋಲೀಸ್ನೋರು ನಮ್ಮ ಮನೆಗೆ ಬರ್ತಾರೆ... ನಾನು ಊರ್ನಲ್ಲಿಲ್ಲದಾಗ ಏನೇನು ನಡೀತು...? ಅವನು ನಿಂಗೆ ಏನು ಹೇಳಿದಾನೆ?"

"ಪೋಲೀಸ್ನೋರು ನನ್ನನ್ನು ಹುಡುಕ್ತಿದಾರೆ ಅಂತ ಹೇಳ್ದ... ಆದರೆ ಎಲ್ಲಿದಾನೆ, ಏನು ಮಾಡಿದಾನೆ, ಅಂತ ನನಗೆ ಏನೂ ಗೊತ್ತಿಲ್ಲ... ಪೋಲೀಸ್ನೋರ್ಗೂ ಇಷ್ಟನ್ನೇ ಹೇಳಿದೀನಿ."

"ಇನ್ನು ಅವನ ಸಹವಾಸ ಸಾಕು. ಅವನ ಹತ್ರ ಯಾವುದೇ ಕಾಂಟ್ಯಾಕ್ಟ್ ಇಟ್ಕೋಬೇಡ. ಅವನೇ ಪೋನು ಮಾಡಿದ್ರೂ ಮಾತಾಡ್ಬೇಡ. ನಮಗೆ ಅವನಿಂದ ಏನೂ ಆಗಬೇಕಾಗಿಲ್ಲ."

"ಇವರಿಬ್ಬರ ಮದುವೆಗೆ ನೀವು ಒಪ್ಪಿಗೆ ಕೊಟ್ಟಿದ್ದೀರಿ... ಈಗ ಹೀಗೇಕೆ ಮಾತಾಡ್ತೀರಿ?" ಸಂಧ್ಯ ಮಧ್ಯೆ ಬಾಯಿ ಹಾಕಿದಳು.

"ನೀನು ಸುಮ್ನಿರು ಸಂಧ್ಯ, ಮಧ್ಯೆ ಮಾತಾಡ್ಬೇಡ... ಮೊದಲ್ನಿಂದಲೂ ನನಗೆ ಅವನ ಬಗ್ಗೆ ಒಳ್ಳೆಯ ಭಾವನೆಗಳಿರಲಿಲ್ಲ. ಅವನೇ ಆಗ್ಬೇಕು ಅಂತ ಏನಿಲ್ಲವಲ್ಲ.... ಇವಳಿಗೆ ಒಳ್ಳೆಯ ಗಂಡನ್ನು ಹುಡುಕೋಣ. ನನ್ನ ಮಗಳ ಬಗ್ಗೆ ನನಗೂ ಜವಾಬ್ದಾರಿಗಳಿವೆ."

"ಅಮ್ಮ ಸುಮ್ನಿರಮ್ಮ. ನನ್ನ ಮದುವೆ ಬಗ್ಗೆ ನೀವಿಬ್ಬರೂ ಚರ್ಚೆ ಮಾಡ್ಬೇಡಿ... ಅದು ನನಗೆ ಸಂಬಂಧಿಸಿದ ವಿಷಯ..."

"ಏನು ಹಾಗಂದ್ರೇ...! ಆ ಅಪರಾಧೀನೇ ಮದುವೆ ಮಾಡ್ಕೋತೀಯಾ...?"

"ಅವನು ಅಪರಾಧ ಮಾಡಿಲ್ಲದೆ ಇದ್ದರೆ ಮಾಡ್ಕೋತೀನಿ. ಇಲ್ಲದಿದ್ದರೆ ಬಿಡ್ತೀನಿ. ಅದ್ಯಾವ ದೊಡ್ಡ ವಿಷಯ?"

"ನೋಡಿದ್ಯಾ ನಿನ್ನ ಮಗಳನ್ನ! ಇಂಜಿನಿಯರಿಂಗ್ ಓದಿಸ್ದೆ. ಕೆಲಸಕ್ಕೆ ಹೋಗ್ತಾಳೆ, ಸಂಪಾದಿಸ್ತಾಳೆ, ಆ ಧಿಮಾಕು ಅವಳಿಗೆ... ಗೌತಮನ ಜೊತೆ ಸ್ನೇಹ ಇಟ್ಕೋ ಅಂತ ಯಾರು ಹೇಳಿದ್ರು...! ನಿನಗಾದ್ರು ಗೊತ್ತಾಗಬೇಡ್ವಾ...? ಎರಡು ಮಕ್ಕಳ ತಾಯಿಯಾಗಿದೀಯ... ಅವನನ್ನು ನೀನೂ ಮೆಚ್ಕೊಂಡಿದೀಯಲ್ಲ."

"ಸರಿ ಈಗ್ಯಾಕೆ ಕೂಗಾಡ್ತೀರಿ...? ಅವನು ಅಪರಾಧಿ ಹೌದೋ ಅಲ್ಲವೋ ಅನ್ನೋದನ್ನು ಕೋರ್ಟು ತೀರ್ಮಾನ ಮಾಡುತ್ತೆ. ಮುಂದೆ ಯೋಚಿಸಿದ್ರಾಯ್ತು..."

"ಮೊದಲು ಅವನು ಎಲ್ಲಿದಾನೆ ಅಂತ ಪತ್ತೆಯಾಗಲಿ... ಕೈ ಕಾಲು ಮುರಿದು ಒಳಗೆ ಹಾಕಿಸ್ತೀನಿ..."

"ಅವನ್ಮೇಲ್ಯಾಕೆ ಅಷ್ಟು ಕೋಪ...? ನಿಜ ಏನೂಂತ ಗೊತ್ತಿಲ್ಲವಲ್ಲ..."

"ನೀನು ತೆಪ್ಪಗಿರು ಸಂಧ್ಯಾ...ಅವನು ಏನೂ ತಪ್ಪು ಮಾಡಿಲ್ದೇ ಇದ್ಮೇಲೆ ಪೋಲೀಸ್ನೋರಿಗೆ ಹೆದರ್ಕೊಂಡು ಓಡಿ ಯಾಕೆ ಹೋಗಿದಾನೆ...ಏನು ನಡೀತು ಅಂತ ಹೇಳುವ ಧೈರ್ಯ ಯಾಕಿಲ್ಲ ಅವನಿಗೆ?"

ಸಂಧ್ಯ ಸುಮ್ಮನಾದಳು. ಸೀಮಾ ಒಳಗೆ ಹೊರಟಳು. ತಂದೆ ತಡೆದರು.

"ನಿಂತ್ಕೋ, ನಾಳೆಯಿಂದ ನೀನು ಕೆಲಸಕ್ಕೆ ಹೋಗಬೇಡ. ರಿಸೈನ್ ಮಾಡಿಬಿಡು."

"ಡ್ಯಾಡಿ ಏನು ಹೇಳ್ತಿದೀರಿ...? ರಿಸೈನ್ ಮಾಡಿದರೆ ಎಲ್ಲರಿಗೂ ನನ್ನ ಮೇಲೇ ಅನುಮಾನ ಬರುತ್ತೆ. ನಾನೂ ಶಾಮೀಲಾಗಿದೀನಂತ ಅಂದ್ಕೋತಾರೆ ಅಷ್ಟೇ."

"ಯಾರೂ ಏನೂ ಅಂದ್ಕೊಳ್ಳಲ್ಲ. ಆದಷ್ಟು ಬೇಗ ಮದುವೆ ಮಾಡಿ ಬಿಡ್ತೀನಿ. ಇಬ್ಬರನ್ನೂ ಫಾರಿನ್ನಿಗೆ ಕಳಿಸ್ತೀನಿ."

"ಅದ್ಹೇಗೆ ಮಾಡ್ತೀರಿ. ನನಗೆ ಇಷ್ಟವಿಲ್ಲದ ಮದುವೇನಾ?" ಅವಳು ಸವಾಲೆಸೆದಳು.

"ಮುಚ್ಚು ಬಾಯಿ... [illegible] ಆ ಲೋಫರ್‌ಗಾಗಿ ಕಾಯ್ತಾ ಕೂತ್ಕೋತೀಯಾ... ? ಅಪರಾಧಿ ಅಂತಂದ್ರೆ ಜೈಲಿಗೆ ಹೋಗ್ತಾನೆ... ಶಿಕ್ಷೆ ಅನುಭವಿಸ್ತಾನೆ. ಅಂಥೋನು ನನ್ನ ಅಳಿಯ ಆಗ್ಲಿ ಅಂತ ನಾನು ಖಂಡಿತಾ ಇಷ್ಟ ಪಡಲ್ಲ."

"ನನಗೆ ಈಗ ಮದುವೆಗೆ ಅವಸರವೂ ಇಲ್ಲ. ಕೆಲಸವನ್ನೂ ಬಿಡುವುದಿಲ್ಲ. ಗೌತಮ ಎಲ್ಲಿದ್ದಾನೆ ಅಂತ ತಿಳಿದ್ರೆ ಪೋಲೀಸರಿಗೆ ಸುಳಿವು ಕೊಡುವುದಕ್ಕೂ ನಾನು ಹಿಂಜರಿಯುವುದಿಲ್ಲ... ಮೊದಲು ಇದೆಲ್ಲಾ ಕ್ಲಿಯರ್ ಆಗ್ಲಿ. ಆಮೇಲೆ ನನ್ನ ನಿರ್ಧಾರ ಏನೂಂತ ತಿಳಿಸ್ತೀನಿ..."

"ಯಾಕೆ ನಿನ್ನದೇ ನಿನಗೆ ಹಠ?" ತಾಯಿ ಕೇಳಿದಳು.

"ಇಲ್ಲಮ್ಮ ಹಠ ಅಲ್ಲ... ಗೌತಮನ್ನ ಪ್ರೀತಿಸಿದೆ ನಿಜ... ಆದರೆ ಬಿಡುವುದಿಲ್ಲ. ಅವನಿಗೆ ಶಿಕ್ಷೆಯಾಗುವಂತೆ ಮಾಡ್ತೀನಿ...ಆ ಕಾರಣದಿಂದಲಾದರೂ ಈಗ ಗೌತಮನ ಹತ್ರ ಸಮಾಧಾನವಾಗಿ ಮಾತನಾಡಲೇ ಬೇಕು."

"ಏನೋಮ್ಮ ನಂಗಿದೆಲ್ಲ ಅರ್ಥವಾಗೋಲ್ಲ. ನಿನ್ನ ಮೇಲೆ ಅಪವಾದ ಬಂದರೆ?" ಎಂದು ಕೇಳಿದರು.

"ನಾನು ಯಾವ ತಪ್ಪನ್ನೂ ಮಾಡಿಲ್ಲ. ಯಾವ ಅಪವಾದವೂ ನನ್ನ ಮೇಲೆ ಬರುವುದಿಲ್ಲ. ನಾನು ಧೈರ್ಯದಿಂದ ಇದೀನಿ. ನೀವೂ ಧೈರ್ಯವಾಗಿರಿ ಡ್ಯಾಡಿ... ಈಗ ನಿಮ್ಮ ಕೋ ಆಪರೇಷನ್ ಮುಖ್ಯ. ನನ್ನನ್ನು ವಿದ್ಯಾವಂತೆಯನ್ನಾಗಿ ಮಾಡಿದೀರಿ... ವಿದ್ಯಾವಂತೆಯಂತೆ ವರ್ತಿಸಲು ಅವಕಾಶ ಮಾಡಿಕೊಡಿ... ನಿಮಗೆ ಅವಮಾನವಾಗುವಂತಹ ಯಾವ ಕೆಲಸವನ್ನೂ ನಾನು ಮಾಡುವುದಿಲ್ಲ. ನಿಮಗೆ ಭಾಷೆ ಕೊಡ್ತೀನಿ."

ಸಂಜೀವಯ್ಯ ಉತ್ತರಿಸದೇ, ಒಳಗಿನ ರೂಮಿಗೆ ಹೊರಟು ಹೋದರು. ಸಂಧ್ಯಾ ಮಗಳ ಬಳಿಗೆ ಬಂದಳು. "ಆಯ್ತು ಸೀಮಾ, ನನ್ನ ಸಪೋರ್ಟ್ ನಿನಗಿದೆ... ಆದರೆ ಎಚ್ಚರವಾಗಿರು... ಗೌತಮನಿಂದ ತೊಂದರೆ ಒದಗೀತು."

"ಆಯ್ತಮ್ಮಾ... ನಿಂಗೆ ಥ್ಯಾಂಕ್ಸ್... " ಎಂದು ಹೇಳಿ ತನ್ನ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಮಂಚದ ಮೇಲೆ ಕುಳಿತಳು. ಅಳು ಬರುವಂತಾಗಿತ್ತು. ಕಷ್ಟಪಟ್ಟು ತಡೆದುಕೊಂಡಳು. ದುಃಖ ಕೋಪಕ್ಕೆ ತಿರುಗಿತು... 'ಹೀಗ್ಯಾಕೆ ಮಾಡಿದೆ ಗೌತಮ್... ರೇಣುಕಾ ಏನು ಮಾಡಿದಳು? ಅವಳನ್ನೇಕೆ ಬಲಿ ತೆಗೆದುಕೊಂಡೆ?... ಶಶಾಂಕನ ಮೇಲೆ ಏನು ದ್ವೇಷ?... ಇವೆಲ್ಲಾ ನಿಜಾನಾ ಅಥವಾ ಸುಳ್ಳಾ... ನೀನೇ ನಂಗೆ ಹೇಳಬೇಕು. ಹೇಳುವಂತೆ ಮಾಡ್ತೀನಿ...' ಎಂದು ದೃಢವಾಗಿ ಹೇಳಿಕೊಂಡಳು.

*******

"ಸೀಮಾ ನಿನ್ನನ್ನು ಕೇಳ್ಕೊಂಡು ಯಾರೋ ಬಂದಿದಾರೆ." ತಂಗಿ ಸೋನಿ ಬಂದು ಹೇಳಿದಾಗ ಬೇಸರದಿಂದ ಎದ್ದಳು.

"ಯಾರೇ...? ಯ್ಯಾರು ಅಂತ ಕೇಳಲಿಲ್ವಾ?... ವಾಣೀನಾ?"

"ವಾಣೀ ಅಲ್ಲ. ಯಾರೋ ನಂಗೊತ್ತಿಲ್ಲ. ನೀನೇ ಬಂದು ನೋಡು. ಅಮ್ಮ ಅವರ ಹತ್ರ ಮಾತಾಡ್ತಿದಾಳೆ." ಸೀಮಾ ಎದ್ದು ಕಣ್ಣುಜ್ಜಿಕೊಂಡು, ಕನ್ನಡಿಯ ಮುಂದೆ ನಿಂತು ಮುಂಗೂದಲನ್ನು ಸರಿಪಡಿಸಿಕೊಂಡು ಹೊರಬಂದಳು.

"ಸೀಮಾ ಬಂದ್ಲು..." ತಾಯಿ ಹೇಳಿದ್ದು ಕೇಳಿಸಿತ್ತು.

"ಹಲೋ ಸೀಮಾರವರೇ... ತೊಂದರೆ ಆಯ್ತೇನೋ ನಿಮಗೆ... ಸಾರೀ..." ಆ ಯುವತಿ ಹೇಳಿದಳು.

"ಪರವಾಗಿಲ್ಲ ಹೇಳಿ... ನೀವ್ಯಾರೋ ಗೊತ್ತಾಗಲಿಲ್ಲ...."

"ನನ್ನ ಹೆಸರು ಅಂಜಲಿ... ಇವರು ಜಾನಕಮ್ಮ... ಇವರು ನಮ್ಮ ಮನೆಯ ಓನರ್...ನಾನು ರೇಣುಕಾಳ ರೂಂಮೇಟ್..." ಸೀಮಾಳ ಮುಖ ಬಿಗಿಯಿತು... ಇವರಾಗಿಯೇ ಯಾಕೆ ಬಂದರೋ... ಎಂದು ಸಂದೇಹಗೊಂಡಳು.

"ಎಂಥಾ ದುರಂತ ನಡೆದು ಹೋಯ್ತು ನೋಡಮ್ಮ... ರೇಣುಕಾ ತುಂಬಾ ಒಳ್ಳೆಯ ಹುಡುಗಿ. ಅವಳಿಗೆ ಹೀಗಾಗಬಾರದಾಗಿತ್ತು... "

"ಹೌದು ಸೀಮಾ... ಅವಳಿಗೆ ಹೀಗಾಗಬಾರದಾಗಿತ್ತು... ಅವಳಿಗೆ ಮದುವೆ ಗೊತ್ತಾಗಿತ್ತು...ಅವಳ ತಂದೆ ತಾಯಿಯಂತೂ ವಿಪರೀತ ಕುಗ್ಗಿ ಹೋಗಿದಾರೆ..."

"ಹೌದು ಎಂಥಾ ಟ್ರಾಜಿಡಿ...! ಹೀಗಾಗಬಾರದಾಗಿತ್ತು... ಅವಳ ತಂದೆ ತಾಯಿ ಬಂದ್ರಾ? ಪೋಸ್ಟ್ ಮಾರ್ಟಂ ರಿಪೋರ್ಟ್ ಬಂತಾ?"

"ರಿಪೋರ್ಟ್ ಇನ್ನೂ ಸಿಕ್ಕಿಲ್ಲ. ಶಶಾಂಕ ಒಂದು ಸಾರಿ ಬಾಡೀನ ನೋಡ್ಬೇಕು ಅಂತ ಅಂದ್ನಂತೆ. ಆದರೆ ಅದಕ್ಕೆ ಪೋಲೀಸ್ನೋರು ಒಪ್ಪಿಗೆ ಕೊಟ್ಟಿಲ್ಲ.... ರೇಣುಕಾಳ ತಂದೆ ತಾಯಿ ಸಹ ಒಪ್ಪಿಲ್ಲವಂತೆ."

"ಯಾಕೆ?... ಶಶಾಂಕನ ಜೊತೆ ಎಂಗೇಜ್‌ಮೆಂಟ್ ಆಗಿತ್ತಲ್ಲ..."

"ಹೌದು ಸೀಮಾ... ಆದರೆ ಅವನೀಗ ಲಾಕಪ್‌ನಲ್ಲಿದ್ದಾನಲ್ಲ. ಅವನೇ ರೇಪ್ ಮಾಡಿ, ಕೊಲೆ ಮಾಡಿರಬಹುದು ಅಂತ ಆರೋಪ ಅವನ ಮೇಲಿದೆಯಲ್ಲ..."

"ಏನು! ರೇಪಾ... ?" ಸೀಮಾ ಷಾಕ್ ಹೊಡೆದವಳಂತೆ ಕೇಳಿದಳು.

"ಹ್ಞೂಂ... ರೇಣುಕಾನ ಯಾರೋ ರೇಪ್ ಮಾಡಿದಾರಂತೆ... ಹಾಗಂತ ದೇಹವನ್ನು ಪರೀಕ್ಷಿಸಿದ ಡಾಕ್ಟರ್ ಹೇಳಿದಾರಂತೆ..."

ಸೀಮಾ ಮೌನಿಯಾದಳು. ಇದನ್ನು ಅವಳು ಊಹಿಸಿರಲಿಲ್ಲ. "ಮೊದಲೇ ರೇಣುಕಾ ಯಾಕೆ ಗೌತಮನ ಮನೆಗೆ ಬಂದಿದ್ದಳು. ಯಾಕೆ ಕೊಲೆಯಾಗಿದ್ದಳು ಅನ್ನೋದೇ ನಿಗೂಢವಾಗಿರುವಾಗ ಈಗ ಈ ಸುದ್ದಿ.....ರೇಪ್ ಮಾಡಿರೋರು ಯಾರು?... ಗೌತಮನೇ? ಛೇ... ಇರಲಾರದು... ಅವನು ಹಾಗೆ ಮಾಡಿರಬಹುದು ಅಂತ ಊಹಿಸೋಕೂ ಸಾಧ್ಯವಿಲ್ಲ. ಶಶಾಂಕನೇ ಯಾಕೆ ಮಾಡಿರಬಾರದು!... ರೇಪ್ ಅಲ್ಲದಿದ್ದರೂ, ಪ್ರೀತಿಯಿಂದ ಒಂದಾಗಿರಬಹುದು... ಇದನ್ನು ರೇಪ್ ಅಂತ ಭಾವಿಸಿರಬಹುದು..."

"ಶಶಾಂಕ ಹಾಗೆ ಮಾಡಲು ಸಾಧ್ಯವೇ ಇಲ್ಲ. ಸೀಮಾ... ಅವನು ಅಂಥವನಲ್ಲ. ಅಲ್ಲದೇ ಸಧ್ಯದಲ್ಲೇ ಮದುವೆಯಾಗಲಿದ್ದರು..."

"ಇಬ್ಬರು ಒಟ್ಟೊಟ್ಟಿಗೇ ಓಡಾಡುತ್ತಿದ್ದರು ಅಲ್ವಾ?"...

"ಎಷ್ಟೋ ಸಾರಿ ಓಡಾಡಿದಾರೆ...ಆದರೆ ಎಂದೂ, ಯಾವ ರಾತ್ರಿಯೂ ಶಶಾಂಕನೊಂದಿಗೆ ಅವಳು ಕಾಲ ಕಳೆದಿಲ್ಲ.....ಎಲ್ಲೇ ಇದ್ದರೂ ರಾತ್ರಿ ಮನೆಗೆ ಬಂದುಬಿಡುತ್ತಿದ್ದಳು." ಈಗ ಜಾನಕಮ್ಮ ನುಡಿದಳು.

"ಆವತ್ತು ಆ ಸಮಯದಲ್ಲಿ ಶಶಾಂಕ ಎಲ್ಲಿದ್ದ ಅಂತ ನಿಮಗೆ ಗೊತ್ತಾ...?"

"ಎಲ್ಲಿದ್ದನೋ ಗೊತ್ತಿಲ್ಲ.... ಆದರೆ ಇದೆಲ್ಲಾ ನಡೆಯೋಕೆ ಮುಂಚೆ ಶಶಾಂಕ ನಿಂದ ರೇಣುಕಾಳಿಗೆ ಕಾಲ್ ಬಂದಿತ್ತಂತೆ..."

"ಕಾಲ್ ಬಂದಿತ್ತಂತಾ? ನಿಮಗೆ ಹೇಗೆ ಗೊತ್ತು?"

"ಹೊರಡುವ ಮೊದಲು ಹೇಳಿದ್ಲು, ಷಾಪಿಂಗ್ ಮುಗಿಸ್ಕೊಂಡು ಊಟದ ಹೊತ್ತಿಗೆ ಬಂದು ಬಿಡ್ತೀನಿ ಅಂತ... ಬರ್ಲೇ ಇಲ್ಲ." ಜಾನಕಮ್ಮ ವ್ಯಥೆಯ ಧ್ವನಿ ಮಾಡಿದಳು.

"ಶಶಾಂಕ್‌ಗೆ ಏನು ಹೇಳಿದ್ಲು, ಎಲ್ಲಿ ಅವರು ಮೀಟ್ ಮಾಡಿದ್ರು ಅಂತ ಗೊತ್ತಾಗ್ಲೇ ಇಲ್ವ ಹಾಗಿದ್ರೆ..."

"ಇಲ್ಲ ಅವಳು ಎಷ್ಟು ಹೊತ್ತಾದ್ರೂ ಫೋನೂ ಮಾಡ್ಲಿಲ್ಲ, ಬರಲೂ ಇಲ್ಲ. ಆಗ ಗಾಬರಿಯಾಗಿ ಅವಳಿಗೆ ಫೋನು ಮಾಡಿದರೆ, ಅವಳು ಫೋನನ್ನೇ

ತೆಗೆದುಕೊಂಡು ಹೋಗಿರ್ಲಿಲ್ಲ. ಮನೆಯಲ್ಲೇ ಬಿಟ್ಟು ಹೊರಟು ಹೋಗಿದ್ಲು...."

"ಹೌದಾ? ಯಾಕೆ ಹಾಗೆ ಮಾಡಿದ್ಲು...?"

"ಜಾರ್ಜ್ ಮಾಡೋಕೆ ಅಂತ ಹಾಕಿದ್ದೋಳು, ಹಾಗೇ ಬಿಟ್ಟು ಹೊರಟು ಹೋಗಿ ಬಿಟ್ಟಿದ್ದಾಳೆ. ಆಮೇಲ ಗೊತ್ತಾಯ್ತು... ಅದು ಸ್ವಿಚ್ ಆಫ್ ಆಗಿ ಹೋಗಿತ್ತು. ಹಾಗಂತ ಅಂಜಲಿ ಹೇಳಿದ್ಲು."

"ಪೋಲೀಸ್ನೋರಿಗೆ ಹೇಳಿದ್ರಾ....?"

"ಇಲ್ಲ, ಹೇಳಬೇಕೋ, ಬೇಡ್ವೋ ಗೊತ್ತಾಗ್ಲಿಲ್ಲ. ಅಲ್ಲದೇ ಅವಳ ತಂದೆ-ತಾಯಿ ಸಹ, ಅವಳ ಫೋನು ಸ್ವಿಚ್ ಆಫ್ ಆಗಿತ್ತು... ಕಳೆದು ಹೋಗಿದೆ ಅಂತ ಹೇಳಿದಾರಂತೆ..."

"ಈಗ ಯಾರ ಹತ್ರ ಇದೆ?"

"ನನ್ನ ಹತ್ರ ಇದೆ. ಸ್ವಿಚ್ ಆಫ್ ಆಗಿದೆ. ಏನ್ಮಾಡ್ಬೇಕು ಅಂತ ಗೊತ್ತಾಗಿಲ್ಲ. ಅವಳ ಬಟ್ಟೆ, ಪುಸ್ತಕ ಇತ್ಯಾದಿ ಎಲ್ಲಾ ಹಾಗೇ ಇದೆ... ಅವಳ ತಂದೆ-ತಾಯಿ ಪ್ಯಾಕ್ ಮಾಡ್ಕೊಂಡು ತಗೊಂಡು ಹೋಗ್ತಾರಂತೆ... ಅವರಿಗೇ ಕೊಟ್ಟು ಬಿಡೋದಾ...?"

"ಹ್ಞೂಂ. ಅವಳ ವಸ್ತುಗಳೆಲ್ಲಾ ಅವರಿಗೇ ತಾನೇ ಸೇರಬೇಕು... ಶಶಾಂಕನ ತಂದೆ-ತಾಯಿ ಏನಂತಾರೆ.....? ರೇಣುಕಾಳ ತಂದೆ-ತಾಯಿ ಹತ್ರ ಮಾತಾಡಿದ್ರ..?"

"ಏನೋ ಗೊತ್ತಿಲ್ಲ. ಅವರಿಗೂ ಬೇಸರವಾಗದೇ ಇರುತ್ತಾ...? ಭಾವೀ ಸೊಸೆಯ ಕೊಲೆ ಆಗಿದೆ. ಮಗ ಲಾಕಪ್‌ನಲ್ಲಿದ್ದಾನೆ... ಷಾಕ್ ಆಗದೇ ಇರುತ್ತಾ...? ಅವನಿಗೆ ಎಷ್ಟು ವರ್ಷ ಶಿಕ್ಷೆ ಆಗುತ್ತೋ... ಮುಂದೆ ಅವನ ಗತಿ ಏನು ಅಂತ ಚಿಂತೆ ಆಗದೇ ಇರುತ್ತಾ...? ಪೋಲೀಸರು ಅವನನ್ನು ಅರೆಸ್ಟ್ ಮಾಡಿರೋದು ಸರಿ ಅಂತೀರಾ?"

"ಸರಿಯೋ ತಪ್ಪೋ ನಾನ್ಹೇಗೆ ಹೇಳ್ಲೀ? ವಿಚಾರಣೆ ಮಾಡ್ತಾ ಇರೋರು ಅವರು ಅವರನ್ನೇ ಕೇಳಿ. ಅವನು ತಪ್ಪು ಮಾಡಿದ್ದರೆ ಅವನಿಗೆ ಶಿಕ್ಷೆ ಖಂಡಿತಾ....."

"ಅವನ್ಯಾಕೆ ಕೊಲೆ ಮಾಡ್ತಾನೆ... ಸೀಮಾರವರೇ... ಮದುವೆಯಾಗಲಿದ್ದವಳನ್ನು ರೇಪ್ ಮಾಡ್ತಾನಾ? ಕೊಲೆ ಮಾಡ್ತಾನಾ...? ಅದೂ ಗೌತಮ್ ಅನ್ನೋನ ಮನೇಲಿ... ಬೇರೆ ಯಾರದ್ದೋ ಕೈವಾಡ ಇರಬಹುದು ಅಂತ ಅನುಮಾನ... ಗೌತಮ್ ಹೆದರ್ಕೊಂಡು ಹೋಗದೇ ಇದ್ದಿದ್ದರೆ, ನಿಜ ಏನೂಂತ ಗೊತ್ತಾಗ್ತಿತ್ತು..."

ಸೀಮಾ ಪೆಚ್ಚಾದಳು. ಇವರು ಹೇಳೋದೂ ಸರಿ. ಶಶಾಂಕ, ರೇಣುಕಾ ಸಧ್ಯದಲ್ಲೇ ಮದುವೆಯಾಗಲಿದ್ದವರು. ಇಬ್ಬರ ಮೇಲೆ ಒಬ್ಬರನ್ನೊಬ್ಬರು ಬಯಸಿದ್ದರೆ, ರೇಪ್ ಮಾಡುವ ಅಗತ್ಯವೇನಿತ್ತು... ಕೊಲೆ ಮಾಡುವ ಉದ್ದೇಶ ಏನಿತ್ತು...?

ಇಲ್ಲಿ ಗೌತಮನ ಕೈವಾಡ ಇರಬಹುದೇ? ಅವಳ ಎದೆ ನಡುಗಿತು... ಗೌತಮನನ್ನು ತಾನು ಎರಡು ವರ್ಷಗಳಿಂದ ಬಹಳ ಹತ್ತಿರದಿಂದ ಬಲ್ಲವಳು... ಅವನು ತನ್ನೊಂದಿಗೆ ಸರಸವಾಡುತ್ತಿದ್ದನೇ ಹೊರತು ದೇಹ ಸಂಬಂಧಕ್ಕೆ ಎಂದೂ ಹಾತೊರೆದಿರಲಿಲ್ಲ... ತಾನೇ ಲಜ್ಜೆಗೆಟ್ಟವಳಂತೆ, ಅವನನ್ನು ತನ್ನ ಬಳಿಗೆ ಸೆಳೆದವಳು... ಹೀಗಿರುವಾಗ ಅವನನ್ನು ಕೆಟ್ಟವನು ಎಂದು ಹೇಗೆ ಹೇಳಲಿ...? ಗೌತಮ, ಶಶಾಂಕನಲ್ಲದೇ ಬೇರೆ ಇನ್ಯಾರಾದ್ರೂ ಇದ್ದಿರಬಹುದೇ... ಶಶಾಂಕನೊಂದಿಗೆ ಷಾಪಿಂಗ್ ಹೋಗುತ್ತಿದ್ದೇನೆಂದು ಹೇಳಿದವಳು ಗೌತಮನ ಮನೆಗ್ಯಾಕೆ ಹೋದಳು...? ಇದನ್ನು ಹೇಳುವವರ್‍ಯಾರು...? ಶಶಾಂಕನದಲ್ಲದೇ ಬೇರೆ ಇನ್ಯಾರದ್ದಾದರೂ ಕಾಲ್ ಬಂದಿರಬಹುದೇ...! ಅದನ್ನು ಕಂಡು ಹಿಡಿಯುವುದು ಹೇಗೆ...? ಪೋಲೀಸರೇ ಕಂಡು ಹಿಡಿಯಬೇಕು. ಕಾಲ್ ಮಾಡಿದ ನಂಬರುಗಳನ್ನು ಅವರು ಪತ್ತೆ ಹಚ್ಚುತ್ತಾರೆ. ಅದೇ ಸರಿ ಎಂದುಕೊಂಡಳು.

ಅವರಿಬ್ಬರೂ ಹೊರಡಲು ಎದ್ದು ನಿಂತರು. "ಅಂಜಲೀ, ನೀವು ರೇಣುಕಾಳ ಮೊಬೈಲ್ ಫೋನನ್ನು ಪೋಲೀಸ್ನೋರಿಗೆ ಕೊಡಿ. ಇದರಿಂದ ಶಶಾಂಕನಿಗೆ ಬಿಡುಗಡೆಯಾಗಬಹುದು. ಗೌತಮ ಎಲ್ಲಿದ್ದಾನೆ ಅಂತ ಪತ್ತೆಯಾಗಬಹುದು... ಹಾಗೇ ಬೇರೆ ಇನ್ಯಾರದ್ದೋ ಕೈವಾಡ ಇದ್ದರೂ ಇರಬಹುದು..."

"ಪೋಲೀಸರ ಬಳಿಗೆ ಹೋಗಲು ನಮಗೆ ಭಯ ಆಗುತ್ತೆ ಸೀಮಾ... ನೀವು ಧೈರ್ಯವಂತರು, ನೀವು ಕೊಡೋದಾದ್ರೆ..."

"ಸರಿ ಕೊಡಿ. ನಾನೇ ಪೋಲೀಸರಿಗೆ ತಲುಪಿಸ್ತೀನಿ" ಎಂದು ಹೇಳಿ ಅಂಜಲಿಯ ಬಳಿ ಇದ್ದ ಮೊಬೈಲ್ ಫೋನನ್ನು ತೆಗೆದಿಟ್ಟುಕೊಂಡಳು. ರಾತ್ರಿ ಮಲಗುವ ವೇಳೆಯಲ್ಲಿ ನಂಬರುಗಳನ್ನು ನೋಡಬೇಕೆಂದುಕೊಂಡಳು. ಅವರುಗಳು ಹೊರಟು ಹೋಗಿದ್ದರು.

ತಂದೆ ಮನೆಗೆ ಬರುವ ಹೊತ್ತಿಗೆ ಅಕ್ಕ ತಂಗಿಯರಿಬ್ಬರೂ ಊಟವನ್ನು ಮುಗಿಸಿ, ತಮ್ಮ ರೂಮನ್ನು ಸೇರಿಕೊಂಡಿದ್ದರು. ತಂಗಿ ಸೋನಿ, ಓದಲು ಕುಳಿತಾಗ, ಇವಳು ರೇಣುಕಾಳ ಮೊಬೈಲನ್ನು ತೆಗೆದಿಟ್ಟುಕೊಂಡು, ಫೋನ್ ನಂಬರ್‍ಗಳನ್ನು ಚೆಕ್ ಮಾಡತೊಡಗಿದಳು. ಅದರಲ್ಲಿ ಶಶಾಂಕನ ಹಾಗೂ ರೇಣುಕಾಳ ತಂದೆಯ ನಂಬರನ್ನು ಬರೆದಿಟ್ಟುಕೊಂಡಳು.

ರೇಣುಕಾಳನ್ನು ಅವಳು ಕೊಲೆಯಾದ ದಿನ ಕಾಂಟ್ಯಾಕ್ಟ್ ಮಾಡಿದ ನಂಬರ್‍ಗಳನ್ನು ಚೆಕ್ ಮಾಡಿದಳು. ಅದರಲ್ಲಿ ಕಡೆಯದಾಗಿ, ಶಶಾಂಕನಿಂದ ಬಂದ ಮಿಸ್ ಕಾಲ್‌ಗಳಿದ್ದವು. ಅದಕ್ಕೆ ಮೊದಲು ಅವಳಿಗೆ ಬಂದ ಒಂದು ನಂಬರನ್ನು ಕುತೂಹಲದಿಂದ ಬರೆದಿಟ್ಟುಕೊಂಡಳು... ಅದು ಯಾರದ್ದೆಂದು ತಿಳಿಯುವಂತೆ

ಇರಲಿಲ್ಲ. ಯಾವುದೋ ಹೊಸ ನಂಬರ್ರು ಇರಬೇಕು... ಈ ಕಾಲ್ ಯಾವ ಫೋನಿನಿಂದ ಬಂದಿದೆ ಅಂತ ತಿಳಿದರೆ... ಎಂದುಕೊಂಡು ಗೌತಮನ ನಂಬರ್ರು ಅಲ್ಲ ಎನ್ನುವುದನ್ನು ಖಚಿತ ಪಡಿಸಿಕೊಂಡಳು. ಈ ವ್ಯಕ್ತಿ ಯಾರೋ ಹೊಸ ವ್ಯಕ್ತಿ. ಅವನೇ ಈ ಅಪರಾಧವನ್ನು ಮಾಡಿರಬಹುದು... ಅವನು ಗೌತಮನಿಗೆ ಪರಿಚಯವಿರಬಹುದೇ... ತಿಳಿದುಕೊಳ್ಳುವುದು ಹೇಗೆ ಎಂದು ಬಹಳ ಹೊತ್ತು ಚಿಂತಿಸಿದಳು. ಕಡೆಗೆ ನೆನಪಾದವಳಂತೆ ವಾಣಿಗೆ ಫೋನ್ ಮಾಡಿದಳು.

"ನಾಳೆ ಬೆಳಿಗ್ಗೆ ಹತ್ತು ಗಂಟೆಯ ಹೊತ್ತಿಗೆ ನಮ್ಮ ಮನೆಗೆ ಬರೋಕೆ ಆಗುತ್ತಾ! ಅರ್ಧ ಧಿನ ರಜ ಹಾಕಿ ಬನ್ನಿ... ಪೋಲೀಸ್ ಸ್ಟೇಷನ್‌ಗೆ ಹೋಗ್ಬೇಕು. ನನಗೆ ನಿಮ್ಮ ಜೊತೆ ಬೇಕು."

"ವಾಣಿ 'ಬರ್ತೀನಿ' ಎಂದ ಮೇಲೆ, ಸಮಾಧಾನದ ನಿಟ್ಟುಸಿರನ್ನು ಬಿಟ್ಟು ಹಾಸಿಗೆಯ ಮೇಲೆ ಮಲಗಿದಳು. ಚೆನ್ನಾಗಿ ನಿದ್ರಿಸಬೇಕೆಂದೆನಿಸಿತ್ತು. "ಸೋನಿ, ದೀಪ ಆರಿಸೇ... ನಿದ್ದೇನೇ ಬರ್ತಿಲ್ಲ..."

"ಹತ್ತು ನಿಮಿಷ... ಈ ಚಾಪ್ಟರ್ ಮುಗಿಸಿ, ನಾನೂ ಮಲಕ್ಕೋತೀನಿ..." ಎಂದು ತಂಗಿ ಹೇಳಿದಾಗ ಕೋಪದಿಂದ ಮುಸುಕೆಳೆದು ಮಲಗಿದಳು.

******

"ನಮಸ್ಕಾರ ಸಾರ್... ನಾನು ಸೀಮಾ ಅಂತ... ಬರ್ತೀನಿ ಅಂತ ಫೋನು ಮಾಡಿದ್ದೆ." ಇನ್ಸ್‌ಪೆಕ್ಟರ್ ಬಲರಾಜ್‌ನ ಎದುರಿಗೆ ನಿಂತು ಕೈ ಮುಗಿದಳು.

"ನೀವು ವಿಸಿಟರ್ಸ್ ರೂಂನಲ್ಲಿ ಕೂತಿರಿ. ನಾನು ಈಗ ಬಂದೆ... ಪಾಲ್... ಇವರಿಬ್ಬರನ್ನೂ ವಿಸಿಟರ್ಸ್ ರೂಂನಲ್ಲಿ ಕೂರಿಸು. ಹಾಗೇ ಆರೆಂಜ್ ಜ್ಯೂಸ್ ತಂದುಕೊಡು." ಎಂದು ಹೇಳಿ, ತನ್ನ ಕೆಲಸದಲ್ಲಿ ಮಗ್ನನಾದ. ಇವರಿಬ್ಬರೂ ಆ ಪೇದೆಯೊಡನೆ ನಡೆದರು. ಅವನು ಹೇಳಿದ ಕಡೆ ಕುಳಿತರು. ಅವನು ಕೆಲವೇ ಕ್ಷಣಗಳಲ್ಲಿ ಜ್ಯೂಸ್ ತುಂಬಿಸಿದ ಲೋಟಗಳನ್ನು ತಂದಿತ್ತ. ಇವರಿಬ್ಬರೂ ಅನುಮಾನಿಸುತ್ತಾ ಕುಡಿದರು. ಅಷ್ಟರಲ್ಲಿ ಇನ್ಸ್‌ಪೆಕ್ಟರ್ ಒಳಗೆ ಬಂದ. ಇವರ ಕಡೆ ನೋಡಿ ಮುಗುಳ್ನಕ್ಕು, ತನ್ನ ಟೇಬಲ್ಲಿನ ಬಳಿಗೆ ಬರುವಂತೆ ಕರೆದ. ವಾಣಿಯ ಕಡೆ ತಿರುಗಿದ, "ಇವರು ಯಾರೋ ಗೊತ್ತಾಗ್ಲಿಲ್ಲ." ಎಂದ

"ಇವರು ವಾಣೀ ಅಂತ, ನನ್ನ ಕಲೀಗ್....." ವಾಣಿ ಕೈಮುಗಿದು ನಮಸ್ಕಾರ ಎಂದಳು. ಸೀಮಾ ತನ್ನ ಹ್ಯಾಂಡ್ ಬ್ಯಾಗ್‌ನಿಂದ ರೇಣುಕಾಳ ಮೊಬೈಲ್ ಫೋನನ್ನು ತೆಗೆದು ಟೇಬಲ್ ಮೇಲಿಟ್ಟಳು. "ಇದು ರೇಣುಕಾಳ ಮೊಬೈಲ್ ಫೋನು... ಅವರು ಇದ್ದ ರೂಮಿನಲ್ಲಿ ಇತ್ತು. ಸ್ವಿಚ್ ಆಫ್ ಆಗಿದೆ. ಇದನ್ನು ಅವಳ ರೂಂಮೇಟ್ ನನ್ನ ಕೈಗೆ ತಂದುಕೊಟ್ಟರು."

"ಆವತ್ತು ಹೋಗಿ ಮಾತನಾಡಿದಾಗ, ಇದರ ಬಗ್ಗೆ ಏನನ್ನೂ ಹೇಳಿರಲಿಲ್ಲವಲ್ಲ ... ಎಲ್ಲೋ ಕಳೆದುಹೋಗಿದೆ ಅಂತಂದುಕೊಂಡೆವು... ಕೆಲವು ನಂಬರುಗಳನ್ನು, ಮೆಸೇಜ್‌ಗಳನ್ನು ಡಿಲೀಟ್ ಮಾಡಿದ್ದರೇ..." ಅನುಮಾನವನ್ನು ವ್ಯಕ್ತ ಪಡಿಸಿದ.

"ಏನೋ ಗೊತ್ತಿಲ್ಲ ಸಾರ್... ಇದರಿಂದ ಅಪರಾಧಿಯ ಬಗ್ಗೆ ಕ್ಲೂ ಸಿಗಬಹುದು ಅಂತ ಅನ್ನಿಸ್ತು..."

"ಎಸ್... ಸಿಕ್ಕರೂ ಸಿಗಬಹುದು..." ಎನ್ನುತ್ತಾ, ಪೇದೆಯನ್ನು ಕರೆದು, ಒಂದು ಕವರಿಗೆ ಹಾಕಿ ಕೊಡುವಂತೆ ಹೇಳಿದ.

"ಸಾರ್... ನಾನು ಶಶಾಂಕನ ಹತ್ತಿರ ಮಾತನಾಡಬಹುದಾ? ಪರ್ಮಿಷನ್ ಸಿಗುತ್ತಾ?" ಕೇಳಿದಳು

"ಇಲ್ಲಮ್ಮ, ಆರೋಪಿಗಳ ಹತ್ತಿಗ ಹಾಗೆಲ್ಲ ಮಾತಾಡುವಂತಿಲ್ಲ. ಅವನ ತಂದೆ-ತಾಯಿ ಬೇಲ್‌ಗೆ ಅಪ್ಲೈ ಮಾಡಿದಾರೆ. ಅವನ ಕಡೆಯ ಲಾಯರ್ರು ಸಾಕ್ಷ್ಯಾಧಾರ ಗಳನ್ನು ಪ್ರೊಡ್ಯೂಸ್ ಮಾಡುತ್ತಾರೆ. ಆಮೇಲೆ ಮಾತನಾಡೋರಂತೆ..."

"ಅವನ ಮೊಬೈಲ್ ಫೋನ್‌ಗೆ ರೇಣುಕಾಳ ಫೋನು ಬಂದಿತ್ತು. ಹಾಗೇ ಶಶಾಂಕ ಫೋನು ಮಾಡಿದ್ದ ಅನ್ನೋ ವಿಷಯವನ್ನು ಅವಳ ರೂಂಮೇಟ್ ತಿಳಿಸಿದ್ರು. ಅದು ನಿಜಾನ ಅಂತ ತಿಳ್ಕೋಬೇಕಾಗಿತ್ತು."

"ಅದನ್ನೆಲ್ಲ ವಿಚಾರಿಸೋಕೆ ನಾವು ಇದೀವಿ. ಲಾಯರ್ರುಗಳಿದ್ದಾರೆ... ಈ ವಿಷಯಗಳನ್ನೆಲ್ಲ ಹಾಗೆ ಡಿಸ್ಕಸ್ ಮಾಡೋಕ್ಕಾಗೋಲ್ಲ. ನೀವು ಇನ್ನು ಹೋಗ ಬಹುದು."

ಅವನು ಕಟುವಾಗಿ ಹೇಳಿದಾಗ ಇಬ್ಬರೂ ಎದ್ದರು... ಹ್ಞಾಂ ಒಂದು ವಿಷಯ... ನಿಮ್ಮ ಸ್ನೇಹಿತ ಗೌತಮನ ಫೋನು ಬಂದರಾಗಲೀ, ಅವನು

ಎಲ್ಲಿದ್ದಾನೆ ಅನ್ನೋ ವಿಷಯ ತಿಳಿದರೆ ಆಗಲಿ, ತಕ್ಷಣವೇ ನಮಗೆ ಇನ್‌ಫಾರ್ಮ್ ಮಾಡ್ಬೇಕು, ನೆನಪಿದೆ ತಾನೇ?"

"ಹ್ಞೂಂ ಸಾರ್..." ಸೀಮಾ ಉಗುಳು ನುಂಗಿ ನುಡಿದಳು. ಅವರಿಬ್ಬರೂ ಹೊರಕ್ಕೆ ಬರುತ್ತಿದ್ದಂತೆಯೇ, ಒಬ್ಬ ಲಾಯರ್‌ನೊಂದಿಗೆ, ಶಶಾಂಕನ ತಂದೆ-ತಾಯಿಯರು ಪೋಲೀಸ್ ಸ್ಟೇಷನ್ನಿನ ಒಳಕ್ಕೆ ಬಂದರು. ವಾಣೀ, ಸೀಮಾಳ ಮೊಣಕೈ ತಿವಿದು ಎಚ್ಚರಿಸಿ, ಸಂಜ್ಞೆ ಮಾಡಿದಳು. ಸೀಮಾ ಅತ್ತ ತಿರುಗಿದಳು.

"ಇವರು ಶಶಾಂಕನ ತಂದೆ-ತಾಯಿ ಅಥವಾ ಗೌತಮನ ತಂದೆ-ತಾಯಿ ಇರಬಹುದು... ಮಾತನಾಡಿಸೋಣ್ವಾ?"

"ಗೌತಮನ ತಂದೆ-ತಾಯಿ ಅಲ್ಲ. ನಾನು ಅವರಿಬ್ಬರನ್ನೂ ನೋಡಿದೀನಿ. ಶಶಾಂಕನ ತಂದೆ-ತಾಯಿ ಇದ್ದರೂ ಇರಬಹುದು. ಆದರೆ ನನಗೆ ಅವರ

ಪರಿಚಯವಿಲ್ಲ."

"ನಾವೇ ಮಾತನಾಡಿಸಿ ಪರಿಚಯ ಹೇಳಿಕೊಂಡ್ರೆ?"

"ಬೇಡ ವಾಣಿ, ಅವರು ಅಪಾರ್ಥ ಮಾಡಿಕೊಳ್ಳಬಹುದು... ಇನ್ಸ್‌ಪೆಕ್ಟರ್‌ಗೆ ಸರಿ ಹೋಗದೇ ಇರಬಹುದು. ಇವತ್ತೋ ನಾಳೆಯೋ ಬೇಲ್ ಸಿಗುತ್ತೆ ಅಂತ ಕಾಣುತ್ತೆ... ಆಮೇಲೆ ನಾನೇ ಮೀಟ್ ಮಾಡ್ತೀನಿ..."

"ಹೇಗೆ ಮಾಡ್ತೀಯಾ ಸೀಮಾ! ಅವನ ಅಡ್ರೆಸ್ ಗೊತ್ತಾ...? ಫೋನು ನಂಬರ್ರು ಗೊತ್ತಾ...? ಗೊತ್ತಿದ್ದರೂ ಮಾತನಾಡಕ್ಕೆ ಆಗುತ್ತಾ...? ಪೋಲೀಸರು ಮಾತನಾಡಕ್ಕೆ ಬಿಡದೇ ಇರಬಹುದು. ಕಣ್ಣು ಇಡಬಹುದು..."

"ಅದಕ್ಕೆ..."

"ಇವರ್‍ಯಾರು ಅಂತ ತಿಳ್ಕೊಂಡು, ಪರಿಚಯ ಮಾಡಿಕೊಳ್ಳೋಣ... ನಾನು ಆಕೆಯ ಹತ್ತಿರ ಮಾತಾಡ್ತೀನಿ... ನೀನು ಇಲ್ಲೇ ಇರು" ಎಂದು ಹೇಳಿ, ಅವಳನ್ನು ಅಲ್ಲಿಯೇ ನಿಲ್ಲಿಸಿ ತಾನು ಒಳಗೆ ಬಂದಳು. ಲಾಯರ್ರು ಹಾಗೂ ಶಶಾಂಕನ ತಂದೆ ಒಳಗಿನ ಕೋಣೆಯಲ್ಲಿ ಇನ್ಸ್‌ಪೆಕ್ಟರ್‌ನೊಂದಿಗೆ ಮಾತನಾಡುತ್ತಿದ್ದರು. ಅವನ ತಾಯಿ, ಕಿಟಕಿಯ ಬಳಿ ನಿಂತು, ಹೊರಗೆ ಏನನ್ನೋ ನೋಡುತ್ತಾ ನಿಂತಿದ್ದಳು. "ಎಕ್ಸ್‌ಕ್ಯೂಸ್ ಮಿ..." ಇವಳು ಹಿಂದೆ ನಿಂತು ಹೇಳಿದೊಡನೆ, ಆಕೆ ಬೆಚ್ಚಿ ಹಿಂತಿರುಗಿದಳು.

"ನೀವು ಶಶಾಂಕನ ತಾಯಿ ಅಲ್ವಾ?" ಧೈರ್ಯವಾಗಿ ಕೇಳಿದಳು.

"ನೀವ್ಯಾರೋ ಗೊತ್ತಾಗ್ಲಿಲ್ಲ" ಆಕೆ ಅನುಮಾನವನ್ನು ಪ್ರಕಟಿಸಿದಳು.

"ನಾನು ರೇಣುಕಾಳ ಫ್ರೆಂಡ್..."

"ಇಲ್ಲಿ ಏನ್ಮಾಡ್ತಿದೀಯಾ...? ಯಾರನ್ನು ಕೇಳಿ ಇಲ್ಲಿಗೆ ಬಂದೆ...?" ಆಕೆ ಸಿಡುಕಿದಾಗ ಇವಳು ಹೆದರಿದಳು.

"ನಾನು ಶಶಾಂಕನ ಹತ್ತಿರ ಮಾತನಾಡೋಣ ಅಂತ ಬಂದೆ...ಆದರೆ ಅದು ಸಾಧ್ಯವಾಗಲಿಲ್ಲ."

"ಅವನ ಹತ್ರ ಏನು ಮಾತು...! ಈಗ ಏನು ಉಳಿದಿದೆ...?"

"ಸಾರೀ ಆಂಟೀ... ಒಂದು ಮುಖ್ಯವಾದ ವಿಷಯವನ್ನು ತಿಳಿಸ್ಬೇಕಾಗಿತ್ತು. ನಿಮಗೆ ಬೇಸರವಾಗಿದೆ; ಹೋಗ್ಲಿಬಿಡಿ..." ಅವಳಿಗೆ ಬೆನ್ನು ಮಾಡಿದಳು.

"ನಿಂತ್ಕೋ... ಅದೇನು ವಿಷಯವ್ವೋ ಅದನ್ನು ನಮ್ಮ ಲಾಯರ್ ಹತ್ರ ಹೇಳು... ಅದು ಸರಿ, ನಾನು ಶಶಾಂಕನ ತಾಯಿ ಅಂತ ನಿಂಗೆ ಹೇಗೆ ಗೊತ್ತಾಯ್ತು....?"

"ಎಂಗೇಜ್‌ಮೆಂಟ್ ಸಮಯದ ವೀಡಿಯೋ ಟೇಪ್ ನೋಡಿದ್ದೆ..

ಪರವಾಗಿಲ್ಲ ಬಿಡಿ. ನಾನು ಮತ್ತೆಂದಾದ್ರೂ ಮಾತಾಡ್ತೀನಿ."

"ಲಾಯರ್ರು ಮಾತು ಮುಗಿಸಿ ಬರೋವರ್ಗೂ ತಡೀ... ಹೋಗ್ಬೇಡ."

"ಹೊತ್ತಾಗುತ್ತೆ ಆಂಟಿ... ಹೊರಗೆ ನನ್ನ ಫ್ರೆಂಡ್ ನಂಗೋಸ್ಕರ ಕಾಯ್ತಾ ಇದಾಳೆ. ಒಂದು ಫೇವರ್ ಮಾಡಿ ಆಂಟೀ... ಇದು ನನ್ನ ಫೋನು ನಂಬರ್ರು... ಇದನ್ನು ಶಶಾಂಕನಿಗೆ ಕೊಡಿ... ಅವನಿಗೆ ಮನಸ್ಸಿದ್ದರೆ ನನ್ನ ಹತ್ತಿರ ಮಾತಾಡಲಿ... ನಮಗೆ ಶಶಾಂಕನ ಬಗ್ಗೆ ಸಿಂಪತಿ ಇದೆ..." ಎಂದು ಹೇಳಿ ಸರಸರನೆ ಒಂದು ಕಾಗದದ ತುಂಡಿನ ಮೇಲೆ, ಸೀಮಾಳ ಫೋನು ನಂಬರ್ರನ್ನು ಬರೆದು, ವಾಣೀ ಎಂದು ಹೆಸರನ್ನು ಬರೆದು ಕೊಟ್ಟಳು...

"ನಮಗೆ ರೇಣುಕಾಳ ಪರಿಚಯದ ಯಾರ ಹತ್ತಿರವೂ ಸಂಬಂಧ ಇಟ್ಟುಕೊಳ್ಳೋಕೆ ಇಷ್ಟವಿಲ್ಲ. ಈಗ ಆಗಿರುವ ಅವಮಾನವೇ ಸಾಕಾಗಿದೆ... ಅವಳಿಂದಾಗಿ ಅವನು, ಪೋಲೀಸ್ ಸ್ಟೇಷನ್‌ನಲ್ಲಿ ಬಂಧಿಯಾಗಬೇಕಾಯ್ತು."

"ಇದರಲ್ಲಿ ರೇಣುಕಾಳ ತಪ್ಪು ಏನಿದೆ ಆಂಟಿ...? ಅವಳು ಬಲಿ ಆದಳು. ಅವಳ ತಂದೆ ತಾಯಿಗಳಿಗೆ ಎಷ್ಟು ದುಃಖ ಆಗಿರಬಹುದು ಅಲ್ವಾ...?"

"ಶಶಾಂಕನ ತಪ್ಪು ಏನೂ ಇರ್ಲಿಲ್ಲವಲ್ಲ. ಅವನಿಗ್ಯಾಕೆ ಈ ಶಿಕ್ಷೆ...? ಗೌತಮನ ಮನೆಗೆ ಇವಳ್ಯಾಕೆ ಹೋಗ್ಬೇಕಾಗಿತ್ತು? ಅದೂ ಅವನೊಬ್ಬನೇ ಇದ್ದ ಸಮಯದಲ್ಲಿ? ಅವನಿಗೂ ಇವಳಿಗೂ ಮೊದಲ್ನಿಂದ ಸ್ನೇಹ ಇತ್ತೂಂತ ಕಾಣುತ್ತೆ... ಒಟ್ನಲ್ಲಿ ನಮ್ಮ ಶಶಾಂಕನ ನೆಮ್ಮದಿ ಹಾಳಾಯ್ತು... ಗೌತಮನ್ನ ಪತ್ತೆ ಮಾಡದೇ ಬಿಡೋದಿಲ್ಲ... ಅವರಿಗೆ ಶಿಕ್ಷೆ ಸಿಗುವ ಹಾಗೆ ಮಾಡೇ ಮಾಡ್ತೀನಿ. ಈ ಗೌತಮ ಆ ಹುಡುಗಿ ಸೀಮಾ ಅನ್ನೋಳ್ಗೂ ಮೋಸ ಮಾಡಿದ. ಪಾಪ... ಮುಂದೆ ಆ ಹುಡುಗಿಯ ಗತಿ ಏನೋ... ?"

"ಹೌದು ಆಂಟಿ... ಗೌತಮ ಎಲ್ರಿಗೂ ಮೋಸ ಮಾಡಿದ. ತಂದೆ ತಾಯಿಯರಿಗೆ, ಸೀಮಾಳಿಗೆ, ಶಶಾಂಕನಿಗೆ... ಅವನಿಗೆ ಖಂಡಿತಾ ಕ್ಷಮೆ ಇಲ್ಲ... ಅವನಿಗೆ ಶಿಕ್ಷೆ ಆಗಲೇಬೇಕು... ಎರಡು ಮೂರು ದಿನಗಳಾದ್ರೂ ಅವನು ತಪ್ಪಿಸ್ಕೊಂಡು ತಿರುಗಾಡ್ತಾನೇ ಇದಾನೆ. ಪೋಲೀಸ್ನೋರು ಹುಡುಕ್ತಿದೀವಿ ಅಂತ ಹೇಳಿದ್ರು... ಸಿಗ್ತಾನೇ ಇಲ್ಲ... ಸಿಗ್ತಾನೋ ಸಿಗೋದೇ ಇಲ್ವೋ..."

"ಯಾಕೆ ಸಿಗೋಲ್ಲ...! ಎಲ್ಲೇ ಅಡಗಿದ್ರೂ ಪೋಲೀಸ್ನೋರು ಪತ್ತೆ ಹಚ್ತಾರೆ... ಸೀಮಾಗೆ ಫೋನು ಮಾಡಿದ್ರೂ ಅವಳು ಹೇಳ್ತಾಳೋ ಇಲ್ಲವೋ... ಎಷ್ಟಾಗಲೀ ಗೌತಮ ಅವಳ ಪ್ರೇಮಿ..."

"ಇಲ್ಲ ಆಂಟಿ, ಯಾರೇ ಆಗಲಿ ಪ್ರೀತಿಸಿದವನು ದ್ರೋಹ ಮಾಡಿದರೆ, ಅವನನ್ನು ಖಂಡಿತಾ ಕ್ಷಮಿಸೋಲ್ಲಾ... ಗೌತಮ ತಪ್ಪು ಮಾಡಿದ್ರೆ ಅವನನ್ನು

ಹೇಗೆ ಕ್ಷಮಿಸ್ತಾಳೆ ನೀವೇ ಹೇಳಿ..."

"ಹೌದು... ನೀನು ಹೇಳೋದೂ ನಿಜ... ಪಾಪ ಆ ಹುಡುಗಿಗೂ ಅನ್ಯಾಯ ಆಗಿದೆ. ಶಶಾಂಕನ ಬಿಡುಗಡೆಯಾದ ಕೂಡ್ಲೇ ಅವಳನ್ನು ನೋಡುವಂತೆ ನಾನೇ ಹೇಳ್ತೀನಿ. ಅವಳ ಅಡ್ರೆಸ್, ಫೋನು ನಂಬರ್ರು ಯಾವುದೂ ಗೊತ್ತಿಲ್ಲವಲ್ಲ... ಗೌತಮ ಕೆಲಸ ಮಾಡುತ್ತಿದ್ದ ಕಂಪೆನಿಯಲ್ಲೇ ಅವಳೂ

ಕೆಲಸದಲ್ಲಿದ್ದಳು ಅಂತ ಶಶಾಂಕ ಹೇಳಿದ್ದ. ಅಲ್ಲಿಗೇ ಹೋಗಿ ಮಾತಾಡ್ತಾನೆ....."

"ಸರಿ ಹಾಗೇ ಮಾಡಲಿ. ನನ್ನ ನಂಬರ್‌ಗೂ ಫೋನು ಮಾಡಲಿ. ನಾನೂ ಮಾತಾಡ್ತೀನಿ... ನನ್ನ ಮೇಲೆ ನಿಮಗೆ ಯಾವ ಕೋಪವೂ ಇಲ್ಲವಲ್ಲ... ಕೊಡ್ತೀರಿ ತಾನೇ...?" ಅವಳು ಮುಗುಳ್ನಕ್ಕು ಹೇಳಿದಾಗ ಆಕೆ ಗಲಿಬಿಲಿಗೊಂಡಳು.

"ಯಾರ ಮೇಲೆ ಕೋಪ ಮಾಡಿಕೊಂಡರೆ ಏನು ಪ್ರಯೋಜನ? ಶಶಾಂಕನ ಗ್ರಹಚಾರ ಕೆಟ್ಟಿತ್ತು. ಆ ಹುಡುಗಿಯ ಹಣೆಬರಹ ಚೆನ್ನಾಗಿಲ್ಲ... ಈಗ ಎಲ್ಲರೂ ಸೇರಿ ನಿಜವಾದ ಅಪರಾಧಿಗೆ ಶಿಕ್ಷೆ ಕೊಡಿಸಲೇಬೇಕು. ಇಲ್ಲದಿದ್ದರೆ, ಸಮಾಜದಲ್ಲಿ ಮತ್ತೆ ಮತ್ತೆ ಇಂಥಾ ಅನ್ಯಾಯಗಳು ಜರುಗುತ್ತಲೇ ಇರುತ್ತವೆ.

"ಹೌದು ಆಂಟಿ... ನಾವೆಲ್ಲಾ ನಿಮ್ಮೊಂದಿಗೆ ಇದ್ದೇವೆ. ನಾನಿನ್ನು ಬರ್ಲಾ?" ಎಂದು ಹೇಳಿ ಕೈ ಮುಗಿದು ಅಲ್ಲಿಂದ ಸರಸರನೆ ನಡೆದು ಸೀಮಾಳ ಬಳಿಗೆ ಬಂದಳು. "ಅವರು ಶಶಾಂಕನ ತಾಯಿನೇ. ಮೊದ ಮೊದಲು ಚೆನ್ನಾಗಿ ಮಾತಾಡ್ಲಿಲ್ಲ. ಏನೇನೋ ಅಂದ್ರು, ಆದರೂ ನಾನು ನಿನ್ನ ಮೊಬೈಲ್ ನಂಬರನ್ನು ಕೊಟ್ಟಿದ್ದೀನಿ... ಶಶಾಂಕನಿಗೆ ಬೇಲ್ ಸಿಕ್ಕಿ ಹೊರಬಂದ ಮೇಲೆ ನಿನಗೆ ಫೋನು ಮಾಡ್ತಾನೆ."

"ಅಷ್ಟರೊಳಗೆ ಗೌತಮನ ಪತ್ತೆ ಆಗಿಬಿಟ್ಟರೆ ಸಾಕಾಗಿದೆ... ಶಶಾಂಕನೂ ನನ್ನ ಬಗ್ಗೆ ತಪ್ಪು ತಿಳ್ಕೋಬಾರ್ದು."

"ಗೌತಮ ಒಂದು ವೇಳೆ ಜೈಲಿಗೆ ಹೋಗಬೇಕಾದ ಪರಿಸ್ಥಿತಿ ಬಂದು ಒದಗಿದರೆ, ನಿನಗೆ ಏನೂ ಅನ್ನಿಸೋಲ್ವಾ ಸೀಮಾ..."

"ಬೇಸರ ಏನೋ ಆಗುತ್ತೆ. ಆದರೆ ಅವನು ಅಪರಾಧಿ ಆಗಿದ್ದ ಪಕ್ಷದಲ್ಲಿ ನಾನು ಅವನನ್ನು ಸಪೋರ್ಟ್ ಮಾಡೋಕೆ ಹೇಗೆ ಸಾಧ್ಯ...! ಅಪರಾಧ ಅಪರಾಧವೇ... ಯಾರು ಮಾಡಿದರೂ ಅಪರಾಧವೇ..."

"ಒಂದು ವೇಳೆ ಅವನು ಅಪರಾಧಿ ಆಗಿಲ್ಲದೇ ಇದ್ದರೇ..."

"ಅದನ್ನು ಅವನು ಸಾಬೀತು ಪಡಿಸಲಿ... ಎಲ್ಲೋ ಬಚ್ಚಿಟ್ಟುಕೊಂಡಿದ್ದರೆ ಅವನು ಅಪರಾಧಿ ಅನ್ನೋ ಅನುಮಾನ ಯಾರಿಗಾದ್ರೂ ಬಂದೇ ಬರುತ್ತೆ. ನಾನು ಚೆನ್ನಾಗಿ ಛೀಮಾರಿ ಹಾಕದೇ ಬಿಡೋಳಲ್ಲ."

"ನನಗೆ ನಿನ್ನ ಬಗ್ಗೆ ಆಶ್ಚರ್ಯ ಆಗ್ತಿದೆ ಸೀಮಾ... ಅವನು ನಿನ್ನ ಸ್ನೇಹಿತ...

ತುಂಬಾ ಕ್ಲೋಸ್ ಆಗಿಯೂ ಇದೀರಿ. ನೀವಿಬ್ರೂ ಮದುವೆ ಮಾಡಿಕೊಳ್ಳಬಹುದು ಅನ್ನುವ ರೂಮರ್ ಸಹ ಇದೆ. ಅವನ ಫ್ಯೂಚರ್ ಈಗ ನಿನ್ನ ಕೈಲಿದೆ ಅಲ್ವಾ..?"

"ಹೌದು, ಆದರೆ ಒಂದು ಸಾರಿ ಸಂಶಯದ ಹುಳು ಹೊಕ್ಕಿತೆಂದರೆ ನಂಬಿಕೆಯ ಬುಡವೇ ಅಲುಗಾಡುತ್ತೆ... ಅವನು ನಿರಪರಾಧಿ ಆಗಿದ್ದರೆ, ಹೀಗೆ ಓಡಿ ಹೋಗುವ ಪ್ರಮೇಯ ಏನಿತ್ತು...! ಒಂದು ವೇಳೆ ಅವನು ಜೈಲು ಶಿಕ್ಷೆ ಪಡೆಯುವಷ್ಟು ಅಪರಾಧಿ ಆಗಿಲ್ಲದಿದ್ದರೂ, ಇನ್ನು ಮುಂದೆ ನನಗೆ ಅವನ ಸ್ನೇಹವೂ ಬೇಡ, ಸಹವಾಸವೂ ಬೇಡ... ಅವನಿಂದ ದೂರವೇ ಇರ್ತೀನಿ...ಸಾಕಷ್ಟು ಬೇಸರವಾಗಿದೆ ನನಗೆ..."

ವಾಣಿ ಸರ‍್ರನೆ ಅವಳ ಕಡೆ ನೋಡಿದಳು... "ಈ ಕಾರಣಗಳಿಂದ ಅವನ ಕೆಲಸ ಹೋಗಬಹುದು... ನಿನ್ನ ಸ್ನೇಹವನ್ನು ಕಳೆದುಕೊಳ್ಳುತ್ತಾನೆ... ಶಶಾಂಕನ ಸಂಬಂಧದಿಂದ ದೂರವಾಗುತ್ತಾನೆ... ಎಷ್ಟೋ ಅವಮಾನಕರ ಅಲ್ವಾ?"

"ಹೋಗಲಿ ಬಿಡಿ ವಾಣೀ... ಎಷ್ಟು ಮಾತನಾಡಿದರೂ ಇಷ್ಟೇ... ನಾನೇ ಯಾವುದಾದ್ರೂ ಬೇರೆ ಊರಿಗೆ ಹೊರಟು ಹೋಗೋಣ ಅಂತ ಅಂದ್ಕೊಂಡಿದೀನಿ. ಆದರೆ ನಮ್ಮ ತಂದೆ ಕಳಿಸಿಕೊಡಬೇಕಲ್ಲ... ಅವರಿಗೆ ನನ್ನ ಮೇಲೆ ಸಂದೇಹವಿರಬಹುದು. ನನ್ನ ಹಿಂದೆ, ನನ್ನ ಮೇಲೆ ಸ್ಪೈ ಮಾಡಕ್ಕೆ ಇಟ್ಟಿರಬಹುದು ಅನ್ನುವ ಅನುಮಾನವೂ ಕೂಡ ಬಂದಿದೆ..."

"ಛೇ... ಹಾಗ್ಯಾಕೆ ಅಂದ್ಕೋತೀಯಾ? ಯಾರಾದ್ರೂ ತಂದೆಯಾದವರು, ಮಗಳ ಮೇಲೆ ಗೂಢಚಾರರನ್ನು ನೇಮಕ ಮಾಡ್ತಾರಾ?"

"ಏನೋ ಯಾರಿಗೆ ಗೊತ್ತು! ಒಂದೊಂದು ಸಾರಿ, ನನಗೇ ನನ್ನ ಮೇಲೆ ಅನುಮಾನ ಬಂದು ಬಿಡುತ್ತೆ.......ಏನು ಆಡಿಬಿಡ್ತೀನೋ, ಏನು ಮಾಡಿಬಿಡ್ತೀನೋ ಅಂತ... ಅಷ್ಟು ಅಪ್ಸೆಟ್ ಆಗಿದೆ ನನಗೆ."

"ಬಿ ಕೂಲ್ ಸೀಮಾ... ಎವ್ವೆರಿಥಿಂಗ್ ವಿಲ್ ಬಿ ಆಲ್‌ರೈಟ್... ಸುಮ್ಮನೇ ಇದನ್ನೇ ಯೋಚನೆ ಮಾಡ್ಬೇಡಿ. ಮನಸ್ಸು ಕೆಡುತ್ತೆ... ರಜ ಕ್ಯಾನ್ಸಲ್ ಮಾಡಿ, ಕೆಲಸಕ್ಕೆ ಬನ್ನಿ. ಮನಸ್ಸು ಸರಿಹೋಗುತ್ತೆ."

"ನಾನೂ ಅದನ್ನೇ ಯೋಚಿಸ್ತಿದ್ದೆ ವಾಣೀ... ಶಶಾಂಕನ ಹತ್ತಿರ ಮಾತನಾಡಿ ಕೆಲವು ಸಂದೇಹಗಳನ್ನು ಕ್ಲಿಯರ್ ಮಾಡ್ಕೋಬೇಕು... ಆಮೇಲೆ ಕೆಲಸಕ್ಕೆ ಬರ್ತೀನಿ." ಇಬ್ಬರೂ ಮಾತನಾಡುತ್ತಾ ಆಟೋರಿಕ್ಷಾ ಸ್ಟ್ಯಾಂಡ್ ಕಡೆಗೆ ಹೆಜ್ಜೆ ಹಾಕಿದರು.

******

"ಅಮ್ಮಾ, ನಾನು ರೇಣುಕಾಳ ಊರಿಗೆ ಹೋಗಿ ಅವಳ ತಂದೆ-ತಾಯಿಯನ್ನು ಮಾತನಾಡಿಸಿಕೊಂಡು ಬರ್ತೀನಿ. ನೀನೂ ಬರೋದಾದ್ರೆ ಬಾ."

"ಇಲ್ಲ, ನಾನು ಬರಲ್ಲ. ನೀನೂ ಹೋಗ್ಬೇಕಾಗಿಲ್ಲ... ಸಧ್ಯ ಬಿಡುಗಡೆ ಆಯ್ತಲ್ಲ. ನಿನ್ನ ಬಿಡುಗಡೆ ಆದ್ರೆ ಅಭಿಷೇಕ ಮಾಡಿಸ್ತೀನಿ ಅಂತ ಗಣಪತಿ ದೇವಸ್ಥಾನದಲ್ಲಿ ಹರಕೆ ಮಾಡ್ಕೊಂಡಿದ್ದೆ..."

"ಯಾಕಮ್ಮ ಹೀಗೆ ಮಾತಾಡ್ತೀಯ? ರೇಣುಕಾ ನಿನ್ನ ಸೊಸೆಯಾಗ ಬೇಕಾಗಿದ್ದವಳು... ಅವಳ ತಂದೆ-ತಾಯಿ ನಿನಗೆ ಬೀಗರಾಗಬೇಕಾಗಿದ್ದವರು..."

"ಈಗ ಯಾವ ಸಂಬಂಧವೂ ಇಲ್ಲ. ಅವಳೇ ಇಲ್ಲದಿದ್ದ ಮೇಲೆ ಇನ್ನು ಏನಾಗಬೇಕಾಗಿದೆ...? ಎರಡು ದಿನ ಮನೆಯಲ್ಲಿ ರೆಸ್ಟ್ ತಗೋ... ಎಲ್ಲಿಗೂ ಹೋಗೋದು ಬೇಡ."

"ನನ್ನ ಮನಸ್ಸು ಇದಕ್ಕೆ ಒಪ್ಪಲ್ಲ. ನಾನು ರೇಣುಕಾಳ ಜೊತೆ ತಿರುಗಾಡಿದೀನಿ. ಸ್ನೇಹಿತರಂತೆ ಮಾತಾಡಿದೀವಿ... ಆತ್ಮೀಯ ಗೆಳತಿಯನ್ನು ಕಳೆದುಕೊಂಡವನು ನಾನು... ಅವರ ದುಃಖಕ್ಕೆ ಸಾಂತ್ವನ ಹೇಳಬೇಕಾದವನು ನಾನು. ಅದು ನನ್ನ ಕರ್ತವ್ಯ."

"ಏನು ಕರ್ತವ್ಯವೋ... ಅವರು... ನಿನ್ನ ರೇಣುಕಾಳ ತಂದೆ ತಾಯಿ... ? ನಿನ್ನ ಬಗ್ಗೆ ಅವರಿಗೆ ಮರುಕ ಇತ್ತಾ? ನೀನು ಹೇಗಿದೀಯ ಅಂಥ ವಿಚಾರಿಸಿದ್ರಾ...? ನಮ್ಮನ್ನು ಬಂದು ನೋಡುವಷ್ಟು ಸಹೃದಯ ಅವರಿಗಿರಲಿಲ್ಲ... ನಾವು ಏನೋ ಅಪರಾಧ ಮಾಡಿರುವಂತೆ ನಮ್ಮಿಂದ ದೂರವೇ ಇದ್ದರು. ಇನ್ನು ನಮಗೇನಾಗ್ಬೇಕು...?"

"ಅಲ್ಲಮ್ಮ... ಅವರೂ ಅವರ ಮಗಳನ್ನು ಕಳೆದುಕೊಂಡಿದಾರೆ. ಅವರ ದುಃಖ ದೊಡ್ಡದು... ನನಗೆ ನಿನ್ನ ಮಾತು ಸರಿಹೋಗ್ತಿಲ್ಲ. ನಿನ್ನ ಹಾಗೆ ನಾನೂ ಇರೋದಕ್ಕೂ ಆಗೋಲ್ಲ."

"ಸರಿ ಹೋಗು... ಹೋಗಿ ಅಲ್ಲೇ ಇರು. ನಿನಗೋಸ್ಕರ ಅನ್ನ, ನೀರು ಇಲ್ಲದೆ ಕಣ್ಣೀರು ಸುರಿಸುತ್ತಾ, ಮುಂದೆ ನಿನ್ನ ಗತಿ ಏನು ಅಂತ ಚಿಂತಿಸುತ್ತಾ ಕುಳಿತಿದ್ದ, ನಮಗಿಂತ ನಿನಗೆ ಅವರೇ ಹೆಚ್ಚು ಅಲ್ವಾ...?"

"ಹಾಗೆಲ್ಲಿ ಅಂದೆ ನಾನು! ಏನೇನೋ ಅರ್ಥ ಮಾಡ್ಬೇಡ... ಮನೇಲೇ ಕೂತಿದ್ರೆ ಮನಸ್ಸು ಕೆಟ್ಟು ಹೋಗುತ್ತೆ. ನಾನು ಹೊರಗೆ ತಿರುಗಾಡಿಕೊಂಡು ಬರ್ತೀನಿ. ಸ್ವಲ್ಪ ಆಫೀಸಿನ ಕಡೇನೂ ಹೋಗ್ಬೇಕಾಗಿತ್ತು."

"ಅವರೆಲ್ಲಾ ನಿನ್ನನ್ನು ವಿಚಿತ್ರವಾಗಿ ನೋಡ್ತಾರೆ. ನಿನ್ನ ಮನಸ್ಸು ಇನ್ನೂ ಕೆಡುತ್ತೆ..."

"ನೋಡಿದರೆ ನೋಡಲಿ. ನಾನು ಯಾವ ಅಪರಾಧವನ್ನೂ ಮಾಡಿಲ್ಲ. ನನ್ನದಾಗಲೀ, ರೇಣುಕಾದಾಗಲೀ ಏನೂ ತಪ್ಪಿಲ್ಲ... ಇದು ಸಧ್ಯದಲ್ಲೇ ಎಲ್ಲರಿಗೂ

ತಿಳಿಯುತ್ತೆ. ರೇಣುಕಾಳ ಪೋಸ್ಟ್ ಮಾರ್ಟ್‌ಂ ರಿಪೋರ್ಟ್ ಬಂತಂತಾ..? ನಿಂಗೇನಾದ್ರೂ ಗೊತ್ತಾ...?"

"ನಮಗೆ ಹೇಳೋರು ಯಾರು? ತಿಳಿದ್ಕೊಂಡು ಏನ್ಮಾಡ್ಬೇಕಾಗಿದೆ..?"

"ಏನಮ್ಮಾ ಹೀಗೆ ಹೇಳ್ತೀಯಾ...? ಕೊಲೆಗೆ ಕಾರಣ ಏನು...? ಹೇಗೆ ಆಗಿದೆ ಅನ್ನೋದು ಗೊತ್ತಾಗುತ್ತೆ. ಅವುಗಳು ಸಾಕ್ಷಿಯಾಗುತ್ತೆ. ಅದರಿಂದ ಅಪರಾಧಿ ಯಾರು ಅಂತ ಕಂಡು ಹಿಡಿಯಬಹುದು. ಹಾಗೇ ನಾನು ಅಪರಾಧಿ ಅಲ್ಲ, ಅನ್ನೋದೂ ಸಾಬೀತಾಗುತ್ತೆ...."

"ಅದು ಗೊತ್ತೇ ಇದೆಯಲ್ಲ...."

"ಅದು ನಂಗೆ, ನಿಂಗೆ ಗೊತ್ತಿದೆ... ಈಗ ನಾನು ಜಾಮೀನಿನ ಮೇಲೆ ಬಿಡುಗಡೆಯಾಗಿ ಬಂದಿದೀನಿ. ಕೇಸು ನಡೆಯುತ್ತೆ. ವಿಚಾರಣೆ ಆಗುತ್ತೆ. ಸಾಕ್ಷ್ಯಾಧಾರಗಳು, ಸಾಕ್ಷಿ ಎಲ್ಲವೂ ಬೇಕು.....ಆಗ ಅಪರಾಧಿ ಯಾರು ಅಂತ ಖಚಿತವಾಗಿ ಗೊತ್ತಾಗುತ್ತೆ...."

"ಇನ್ಯಾರು! ಆ ಗೌತಮನೇ ಇದನ್ನೆಲ್ಲಾ ಮಾಡಿರೋನು! ಇಂಥಾ ಕೇಡಿಗ ಅಂತ ನಂಗೆ ಗೊತ್ತಿರಲಿಲ್ಲ. ಅವನು ನನ್ನ ಅಣ್ಣನ ಮಗ ಅಂತ ಹೇಳಿಕೊಳ್ಳೋಕೆ ನಾಚಿಕೆ ಆಗುತ್ತೆ... ಅಲ್ಲ ಅವನಿಗೆ ನಿನ್ನ ಮೇಲೇನು ದ್ವೇಷ...? ಆ ಹುಡುಗಿ ಏನು ಮಾಡಿದ್ಲು...! ತಾನೇ ಅದ್ಯಾರೋ ಹುಡುಗಿ ಜೊತೆ ತಿರುಗಾಡ್ತಿದ್ದ. ಈಗ ನೋಡು, ಆ ಹುಡುಗಿಗೂ ಕೆಟ್ಟ ಹೆಸರು...! ಜನ ಆಡದೇ ಬಿಡ್ತಾರಾ...? ನೀನು ಆ ಹುಡುಗಿಯನ್ನು ನೋಡಿದ್ಯಾ.....?"

"ಹೂಂನಮ್ಮ ನೋಡಿದ್ದೆ....ಪರಿಚಯ ಮಾಡಿಕೊಟ್ಟಿದ್ದ."

"ಪಾಪ, ಆ ಹುಡುಗಿಯ ಕರ್ಮ ನೋಡು. ಈ ಅನ್ಯಾಯಗಾರನ ಸಹವಾಸ ಮಾಡಿದ್ದಕ್ಕೆ ಕಣ್ಣೀರು ಸುರಿಸ್ತಾ ಕೂತಿರಬಹುದು..."

"ಹಾಗ್ಯಾಕೆ ಅಂದ್ಕೋತೀಯ! ಓದಿದಾಳೆ, ಕೆಲಸಕ್ಕೆ ಹೋಗ್ತಾಳೆ... ಅವಳ ತಂದೆ ಅನುಕೂಲವಾಗಿದ್ದಾರೆ... ಅವನನ್ನು ಮರೆತು ಬೇರೆಯವರನ್ನು ಮದುವೆಯಾಗಿ ಸುಖವಾಗಿರ್ತಾಳೆ..."

"ಅದೂ ಸರಿಯೇ... ಅಂಥೋನಿಗಾಗಿ ಯಾಕೆ ಕೊರಗಬೇಕು...? ನಾನೊಂದ್ಸಾರಿ ಆ ಹುಡ್ಗೀನ ನೋಡಿ ಮಾತಾಡ್ಬೇಕು...ಅಂಥವನಿಗಾಗಿ ನಿನ್ನ ಜೀವನಾನ ಹಾಳು ಮಾಡ್ಕೋಬೇಡ ಅಂಥ ತಿಳುವಳಿಕೆ ಹೇಳ್ಬೇಕು... ಅವಳು ಗೌತಮನನ್ನು ದ್ವೇಷಿಸಬೇಕು... ಅವನಿಗೆ ಶಿಕ್ಷೆಯಾಗಬೇಕು. ಅವನ ಅಪ್ಪ ಅಮ್ಮನಿಗೆ ಬುದ್ಧಿ ಬರಬೇಕು." ಹಲ್ಲು ಕಡಿದಳು. ಶಶಾಂಕ ತಾಯಿಯನ್ನೇ ಸುಮ್ಮನೆ ದಿಟ್ಟಿಸಿದ. ತಾನೂ ಒಮ್ಮೆ ಸೀಮಾಳನ್ನು ಕಾಣಬೇಕು. ಅವಳೊಡನೆ ಮಾತಾಡಬೇಕು.

ಗೌತಮನ ಬಗ್ಗೆ ಏನಾದರೂ ಕ್ಲೂ ಸಿಗಬಹುದು... ಆದಷ್ಟು ಬೇಗ ಗೌತಮನನ್ನು ಪತ್ತೆ ಮಾಡಲೇಬೇಕು ಅಂತ ಅಂದ್ಕೊಂಡ.

"ಹ್ಞಾಂ... ನೋಡು, ಆ ಹುಡುಗಿಯ ವಿಷಯ ಬಂದಾಗ ನೆನಪಿಗೆ ಬಂತು, ಯಾರೋ ರೇಣುಕಾಳ ಸ್ನೇಹಿತೆ ಅಂತೆ... ವಾಣೀ ಅಂತ... ಪೋಲೀಸ್ ಸ್ಟೇಷನ್‌ನಲ್ಲಿ ಕೋರ್ಟಿಗೆ ಹೋಗುವ ಮೊದಲು ಸಿಕ್ಕಿದ್ಲು... ಫೋನು ನಂಬರು ನಿಮಗೆ ಕೊಟ್ಟಿದ್ದಾಳೆ."

"ಯಾರಮ್ಮ ವಾಣೀ...? ಆ ಹೆಸರನ್ನು ರೇಣುಕ ಹೇಳಿದ ನೆನಪಿಲ್ಲವಲ್ಲ."

"ಇನ್ನೇನು ನಾನು ಸೃಷ್ಟಿ ಮಾಡಿದೀನಾ! ಅವಳೇ ಬಂದು ಮಾತನಾಡಿಸಿದಳು. ಪೋಲೀಸ್ ಸ್ಟೇಷನ್‌ಗೆ ಯಾಕೆ ಬಂದಿದ್ಲೋ.....ಏನು ಹೇಳಿದ್ಲೋ.....ರೇಣುಕಾಳ ಫ್ರೆಂಡ್ ಅಂದ್ಮೇಲೆ, ನಿನ್ನ ಬಗ್ಗೆ ಈಗ ಯಾವ ಭಾವನೆ ಇದೆಯೋ....?"

"ಯಾವ ಭಾವನೆ ಇದ್ದರೆ ನನಗೇನು! ಮೊದಲು ಆ ವಾಣೀ ಯಾರು ಅಂತ ತಿಳ್ಕೋಬೇಕು... ಆ ಫೋನು ನಂಬರ್ರನ್ನು ಕೊಡ್ತೀಯಾ...!"

"ಮಾತಾಡ್ಲೇಬೇಕಾದ್ದು ಏನಿದೆ...? ಬಿಡು ಅತ್ಲಾಗೆ... ಎಲ್ಲಿ ಹಾಕಿದ್ನೋ...?"

"ಸರಿ, ನಾನೇ ಹುಡುಕ್ಕೋತೀನಿ. ನಿನ್ನ ಹ್ಯಾಂಡ್ ಬ್ಯಾಗ್ ಎಲ್ಲಿ..."

"ಆ ಹ್ಯಾಂಡ್ ಬ್ಯಾಗ್‌ನಲ್ಲಿ ನೂರೆಂಟು ಚೀಟಿಗಳಿವೆ... ಇದೆಯೋ ಕಳೆದೇ ಹೋಗಿದೆಯೋ ಯಾರಿಗೆ ಗೊತ್ತು...? ಸಿಗದಿದ್ದರೆ ನನ್ನನ್ನು ದೂಷಿಸಬೇಡ..." ಎನ್ನುತ್ತಾ ಹ್ಯಾಂಡ್ ಬ್ಯಾಗ್‌ನೊಳಗಿದ್ದುದ್ದನ್ನೆಲ್ಲಾ ಟೇಬಲ್ ಮೇಲೆ ಸುರಿದಳು... ಶಶಾಂಕ ತಾಯಿಯನ್ನೇ ದುರುದುರು ನೋಡುತ್ತಾ ಕೆದಕಲಾರಂಭಿಸಿದ. ಹುಡುಕಿ ಬೇಕಾದ ಚೀಟಿಯನ್ನು ಎತ್ತಿಕೊಳ್ಳುವಷ್ಟರಲ್ಲಿ ಸಾಕಷ್ಟು ಸಮಯ ಕಳೆದಿತ್ತು. ಉಳಿದುದನ್ನೆಲ್ಲ ಹ್ಯಾಂಡ್ ಬ್ಯಾಗ್‌ಗೇ ತುರುಕಿ, ವಾಣಿ ಬರೆದು ಕೊಟ್ಟಿದ್ದ ಚೀಟಿಯನ್ನೆತ್ತಿಕೊಂಡು, ಫೋನಿನ ಬಳಿಗೆ ಬಂದ.

"ಹಲೋ... ವಾಣಿಯವರಾ!... ನಾನು ಶಶಾಂಕ" ಎಂದು ಪರಿಚಯಿಸಿಕೊಂಡ.

"ನಾನು ಸೀಮಾ..." ಎಂದು ಅವಳು ಅತ್ತಲಿಂದ ನುಡಿದಾಗ ಅವನಿಗೆ ಸಂಶಯವುಂಟಾಯಿತು.

"ನಾನೇ ನಿಮ್ಮ ಹತ್ತಿರ ಮಾತಾಡಬೇಕಾಗಿತ್ತು... ವಾಣೀ, ನನ್ನ ಸ್ನೇಹಿತೆ, ಅವಳು ನನ್ನ ನಂಬರನ್ನು ನಿಮಗೆ ಕೊಟ್ಟಿದ್ದಾಳೆ" ಎಂದು ಹೇಳಿದಾಗ ಅಲ್ಲೇ ನಿಂತಿದ್ದ ತಾಯಿಯೆಡೆ ನೋಡಿದ.

*****

"ಸೀಮಾಳ ತಂದೆ, ನಿಮಗೆ ಸಹಾಯ ಮಾಡ್ತಾರೆ ಅಂತ ಗೌತಮ ಹೇಳಿದ್ದ. ಅವರೋ ಮತ್ತೆ ಆ ಬಗ್ಗೆ ಮಾತನ್ನೇ ಆಡಿಲ್ಲ... ನಿನ್ನ ಮಗನಿಂದಾಗಿ ಅವರಿವರ

ಕಾಲು ಹಿಡಿಯಬೇಕಾದ ಪರಿಸ್ಥಿತಿ ನಮಗೆ... ಹೇಡಿಯ ಹಾಗೆ ಎಲ್ಲಿ ಅಡಗಿ ಕುಳಿತಿದ್ದಾನೋ...?" ಗೌತಮನ ತಂದೆ ಶಿವರಾಮು ಕೋಪದಿಂದ ನುಡಿದಾಗ, ಸರಳ ನಿಟ್ಟುಸಿರು ಬಿಟ್ಟಳು.

"ಗೌತಮ ಎಲ್ಲಿದ್ದಾನೋ, ಹೇಗಿದಾನೋ... ದುಡ್ಡು ಕಾಸು ಕೂಡ ಇದೆಯೋ ಇಲ್ಲವೋ... ಇದೆಂಥಾ ಅವಸ್ಥೇನ ತಂದಿಟ್ಟುಕೊಂಡ... ಅವಳ್ಯಾಕೆ ನಮ್ಮ ಮನೆಗೆ ಬಂದಿದ್ದಳು... ಅದೂ ಒಬ್ಬಳೇ... ಅದೂ ಇವನೂ ಒಬ್ಬನೇ ಇದ್ದಾಗ... ಏನಾಯ್ತು, ಹೇಗಾಯ್ತು ಅಂತ ಸರಿಯಾಗಿ ಹೇಳೋರೂ ಸಹ ಇಲ್ಲವಲ್ಲ." ರೋಧಿಸಿದಳು.

"ಇನ್ನೇನು ಹೇಳೋದು ಬಾಕಿ ಇದೆ...ಇಬ್ಬರದ್ದೂ ತಪ್ಪಿರಬಹುದು. ಆದರೆ ಅವಳು ಸತ್ತಳು. ಇವನು ಓಡಿ ಹೋಗಿದಾನೆ. ಮಧ್ಯೆ ನಮಗೆ ಈ ಹಿಂಸೆ... ಶಶಾಂಕನ್ನ ಬೇಲ್ ಮೇಲೆ ಬಿಡುಗಡೆ ಮಾಡಿದಾರಂತೆ. ಅವನು ಸುಮ್ಮನೇ ಕೂತಿರ್ತಾನಾ...? ಪೋಲೀಸರ ಮೇಲೆ ಪ್ರೆಷರ್ ತಂದು, ಗೌತಮನ್ನ ಹುಡುಕಿಸಿಯೇ ಹುಡುಕಿಸ್ತಾರೆ... ಎಷ್ಟು ದಿನ ಅವಿತಿಟ್ಟುಕೊಂಡಿರ್ತಾನೆ? ಸಿಕ್ಕೇ ಸಿಗ್ತಾನೆ..."

"ಮುಂದೇನ್ರೀ ಗತಿ...?"

"ಏನ್ಗತಿ ಅಂತ ನನ್ನನ್ನು ಕೇಳಿದ್ರೆ...? ತಪ್ಪು ಮಾಡಿದ್ರೆ ಶಿಕ್ಷೆ ಅನುಭವಿಸ್ತಾನೆ." ಗಂಡನ ಕಡೆಗೆ ಅಸಹಾಯಕತೆಯ ನೋಟವನ್ನು ಬೀರಿದಳು.

"ಮಾಡ್ದೇ ಇದ್ದರೂ ಅನುಭವಿಸ್ತಾನೆ... ನಿಜ ಹೇಳೋ ಸಾಕ್ಷಿ ಯಾರಿದ್ದಾರೆ..?"

"ಇವನ ಪರವಾಗಿ ಆ ಹುಡುಗಿ ಸೀಮಾ, ಹಾಗೇ ಶಶಾಂಕ ಸರಿಯಾಗಿ ಸಾಕ್ಷಿ ಹೇಳಿದರೆ ನಿನ್ನ ಮಗನಿಗೆ ಶಿಕ್ಷೆ ಆಗದೇನೂ ಹೋಗಬಹುದು...ಆದರೆ ತಪ್ಪಿಸ್ಕೊಂಡು ಯಾಕೆ ತಿರುಗಾಡ್ತಿದಾನೆ ಅಂತ...ಮತ್ತೆ ಫೋನು ಮಾಡಿದ್ನಾ...?"

"ಇಲ್ಲಾ ರೀ... ಫೋನು ಮಾಡೋಕೂ ಹೆದರಿರಬಹುದು... ಎಲ್ಲೆಲ್ಲಿ ಮರೆಯಲ್ಲಿ ನಿಂತು ಹುಡುಕ್ತಿದಾರೋ... ನಮ್ಮ ಮನೆಗೆ ಸಹ ನಾವು ಹೋಗುವಂತಿಲ್ಲ. ನಮ್ಮ ಊರಿನಲ್ಲೇ ನಾವು ಅಪರಿಚಿತರಂತೆ, ಹೋಟೆಲ್ನಲ್ಲಿ ಯಾಕೆ ಇರಬೇಕು...? ಸುಧಾಮನ ಮನೆಗೆ ವಾಪಸ್ಸು ಹೋಗೋಣ."

"ಅವನನ್ನ, ಅವನ ಹೆಂಡ್ತೀನ ಈ ಹಗರಣದಲ್ಲಿ ಯಾಕೆ ಸಿಕ್ಕಿಸೋಣ... ಪೋಲೀಸ್ ಇನ್ಸ್‌ಪೆಕ್ಟರ್ ಹತ್ರ ಮಾತಾಡ್ತೀನಿ... ನಿನಗೆ ಇಲ್ಲಿ ಸರಿ ಹೋಗದಿದ್ದರೆ ನಿನ್ನ ಬಳಗದವರ ಮನೇಲಿ ಎಲ್ಲಾದ್ರೂ ಇರೋಣ....."

"ಬೇಡಾರೀ... ಯಾರ ಮನೆಯೂ ಬೇಡ... ಎಲ್ರೂ ವಿಚಿತ್ರವಾಗಿ ನೋಡ್ತಾರೆ. ಏನೇನೋ ಕೇಳ್ತಾರೆ...ಅವಮಾನ ಆಗುತ್ತೆ. ಇದರ ಬದಲು ನಾವೂ ತಲೆಮರೆಸಿ ಕೊಂಡು ದೇಶಾಂತರ ಹೊರಟು ಹೋಗೋಣ ಅಷ್ಟೇ.... ಇಲ್ಲೇ ಇದ್ದರೆ ನಮ್ಮಗಳನ್ನೇ ಅಪರಾಧಿಗಳನ್ನಾಗಿ ಮಾಡ್ತಾರೆ."

"ಗೌತಮ ಸಿಕ್ಕಿಬಿಟ್ಟರೆ, ಎಷ್ಟೋ ಪ್ರಶ್ನೆಗಳಿಗೆ ಉತ್ತರ ಸಿಗುತ್ತೆ. ಎಷ್ಟೋ ಸಮಸ್ಯೆಗಳು ಪರಿಹಾರವಾಗುತ್ತೆ. ಪೇಪರ್ನಲ್ಲಿ ಫೋಟೋ ಸಮೇತ ಪ್ರಕಟಣೆ ಹಾಕಿಸೋಣ... ಎಲ್ಲಿದ್ದರೂ ತಕ್ಷಣ ಬಾ... ಅಂತ. ನಮಗೋಸ್ಕರ ಬರಬಹುದು ಅಲ್ವಾ...?" ಅವಳು ಆಸೆಯ ಭಾವವನ್ನು ತೋರಿದಾಗ, ಆತನಿಗೂ ಆತಂಕವಾಗಿತ್ತು.

"ಒಂದ್ಸಾರಿ ನಿಮ್ಮಣ್ಣ ಅತ್ತಿಗೆ ಹತ್ತಿರ ಮಾತಾಡೋಣ. ಅವರ ಸಹಕಾರ ಇದ್ದರೆ, ಗೌತಮನಿಗೆ ಏನೂ ತೊಂದರೆ ಆಗುವುದಿಲ್ಲ... ಶಶಾಂಕ, ಗೌತಮ ಒಳ್ಳೆಯ ಸ್ನೇಹಿತರಂತೆ ಇದ್ದರು. ಶಶಾಂಕನಿಗೆ ಗೌತಮನ ಎಷ್ಟೋ ವಿಚಾರಗಳು ಗೊತ್ತಿರುತ್ತೆ, ಏನಂತೀಯಾ.....?"

"ಏನೂ ಬೇಡ... ಅವರಿಂದ ನಮಗೇನು ಸಹಾಯ ಆಗುತ್ತೆ...?"

"ಅವರು ಒಪ್ಪಿಕೊಂಡರೆ, ನಾವು ಅವರ ಮನೆಯಲ್ಲಾದರೂ ಇರಬಹುದು. ದಿಕ್ಕಿಲ್ಲದವರ ಥರ ಹೋಟೆಲ್ಲಿನಲ್ಲಿರೋಕೆ ನಂಗೆ ಮುಜುಗರವಾಗ್ತಿದೆ..."

"ನಾನೂ ಇಲ್ವಾ? ಏನು ನೀವು ಒಬ್ಬರೇ ಇದೀರಾ...? ಪೋಲೀಸ್ ಇನ್ಸ್‌ಪೆಕ್ಟರ್ ಹತ್ರ ಮಾತಾಡಿ... ಬೇಕಾದ್ರೆ ಆ ರೂಮಿಗೆ ಬೀಗ ಹಾಕಿಕೊಳ್ಳಲಿ... ಇಡೀ ಮನೆಗ್ಯಾಕೆ ಹಾಕ್ಬೇಕು...?"

"ಎಲ್ಲಾ ನಿನ್ನ ಮಗನಿಂದ ಆದದ್ದು... ಅವನು ತಲೆ ಮರೆಸಿಕೊಂಡು ಎಲ್ಲೋ ಅಡಗಿದಾನೆ. ಸುಧಾಮ... ತನ್ನ ಲೋಲಾಪ್ತಿಯಲ್ಲಿ ತಾನು ಇದಾನೆ... ನಾನೂ ಗೌರವದಿಂದ ಬಾಳಿದವನು. ನನಗ್ಯಾಕೆ ಇಂಥಾ ಶಿಕ್ಷೆ....?"

"ಇಷ್ಟಕ್ಕೆಲ್ಲಾ ಕಾರಣ ಆ ರೇಣುಕಾ... ಅವಳ್ಯಾಕೆ ಬಂದಿದ್ಲು ನಮ್ಮ ಮನೆಗೆ... ನನ್ನ ಮಗನನ್ನು ಅಪರಾಧಿ ಮಾಡೋಕೆ... ಶಶಾಂಕ ಅವಳ ಜೊತೇಲಿ ಯಾಕೆ ಬಂದಿರ್ಲಿಲ್ಲ. ಇದರಲ್ಲಿ ಏನೋ ರಹಸ್ಯ ಇದೆ... ಅದನ್ನು ತಿಳಿಸೋರು ಯಾರು?"

"ಸೀಮಾಗೆ ಗೊತ್ತಿದ್ರೂ ಗೊತ್ತಿರುತ್ತೆ... ಗೌತಮ ಹೇಳಿರಬಹುದು. ಅವಳ ಹತ್ತಿರ ಮಾತನಾಡಿದರೆ ವಿಷಯ ತಿಳಿಯುತ್ತೆ. ಗೌತಮ ಮತ್ತೆ ಅವಳನ್ನು ಕಾಂಟ್ಯಾಕ್ಟ್ ಮಾಡಿರಬಹುದು... ನಾವು ಗೌತಮನ ಆಫೀಸಿಗೆ ಹೋಗಿ ಮಾತನಾಡೋಣ..."

"ಈಗ ಆ ಹುಡುಗಿಗೆ ಗೌತಮನ ಬಗ್ಗೆ ವಿಶ್ವಾಸ ಹೋಗಿರಬಹುದು. ಯಾವ ಆಸಕ್ತಿ ಉಳಿದಿರುತ್ತೆ...! ಹೇಳ್ತಾಳೋ ಬಿಡ್ತಾಳೋ...?"

"ಉಪಾಯವಾಗಿ ಮಾತಾಡು... ಹೇಳುವಂತೆ ಒತ್ತಾಯ ಮಾಡು...! ಹೆದರಿಸು... ಬೆದರಿಸು... ಎಷ್ಟಾಗಲೀ ಹೆಣ್ಣು ಹುಡುಗಿ... ಗೌತಮನನ್ನು ಪ್ರೀತಿಸ್ತಾಳೆ... ಅವರಿಬ್ಬರೂ ಮದುವೆಯಾಗುವುದಕ್ಕೆ ರೆಡಿಯಾಗಿದ್ದರು ಅಂತ ನೀನೇ ಹೇಳಿದ್ದೆ... ಅವನ ಜೊತೆ ಓಡಾಡ್ತಿದ್ದೋಳನ್ನು ಬೇರೆ ಯಾರು ಮದುವೆಯಾಗ್ತಾರೆ? ಹಾಗಂತ ಹೇಳು...."

"ಅದೇನೋ ನಿಜ... ಈ ವಿಷಯ ತಿಳಿದ ಬೇರೆ ಯಾರೂ ಅವಳನ್ನು ಮದುವೆಯಾಗಲ್ಲ. ಗೌತಮನೇ ಅವಳಿಗೆ ಗತಿ... ಗೌತಮ ಏನಾದರೂ ಜೈಲಿಗೆ ಹೋಗುವ ಪರಿಸ್ಥಿತಿ ಒದಗಿದರೆ, ಅವಳೂ ಒಂಟಿಯಾಗಿ ಬದುಕಬೇಕು... ಹಾಗೆ ಮಾಡಿಬಿಡ್ತೀನಿ."

"ಆವೇಶದಲ್ಲಿ ಏನೇನೋ ಮಾತಾಡ್ಬೇಡ. ಬುದ್ಧೀನ ಸ್ಥಿಮಿತದಲ್ಲಿಟ್ಟುಕೊಂಡು ಮಾತಾಡು... ಇಲ್ದಿದ್ರೆ ಕೆಲಸ ಕೆಡುತ್ತೆ."

"ನನಗೆ ತಿಳುವಳಿಕೆ ಹೇಳೋದೇ ಆಗಿ ಹೋಯ್ತು. ನೀವು ಮಕ್ಕಳನ್ನು ಸರಿಯಾಗಿ ಸಾಕಿದ್ದಿದ್ರೆ ಹೀಗಾಗ್ತಿತ್ತಾ...?"

"ನಿನ್ನ ಮುದ್ದು ಇಬ್ಬರನ್ನೂ ಕೆಡಿಸಿದೆ. ಇದಕ್ಕೆ ನೀನೇ ಕಾರಣ."

"ಮಾತು ಮಾತಿಗೆ ನನ್ನನ್ನು ಅಂದರೆ, ನಾನು ಆತ್ಮಹತ್ಯೆ ಮಾಡಿಕೊಳ್ತೀನಿ ಅಷ್ಟೇ... ಒಬ್ಬರೇ ಬಿದ್ದಿರಿ."

"ನನ್ನ ಹಣೇಲಿ ಹಾಗೇ ಬರೆದಿದ್ದರೆ ಹಾಗೇ ಆಗುತ್ತೆ. ಫೋನು ರಿಂಗಾಗ್ತಿದೆ ತಗೋ... ಆಮೇಲೆ ಜಗಳ ಆಡೋವಂತೆ." ಅವಳು ಕಾತುರದಿಂದ ಮೊಬೈಲ್ ಫೋನನ್ನೆತ್ತಿಕೊಂಡಳು. ಅತ್ತಲಿಂದ ಮಗಳು ವಿಜಯ ಮಾತಾಡಿದ್ದಳು.

"ಅಮ್ಮ ಎಲ್ಲಿದ್ದೀಯಮ್ಮ... ಮನೆಗೆ ಫೋನು ಮಾಡಿದ್ದೆ... ರಿಂಗಾಗ್ತಾನೇ ಇದೆ. ಸುಧೀ ಹೇಳ್ದ. ನೀನು ಊರಿಗೆ ಹೋದೆ ಅಂತ." ಅವಳ ದನಿಯಲ್ಲಿ ಆತಂಕವಿತ್ತು.

"ಅವನು ಇನ್ನೇನು ಹೇಳ್ದ?"

"ಇನ್ನೂ ಏನೇನೋ ಹೇಳ್ದ. ಅದೆಲ್ಲಾ ನಿಜಾನೇನಮ್ಮ...?"

"ಹೂಂ ಪುಟ್ಟೀ... ಎಂಥಾ ಕೆಲಸ ಆಗಿ ಹೋಗಿದೆ ನೋಡು... ಮನೆ ಬಿಟ್ಟು ಹೋಗಿದಾನೆ. ಎಲ್ಲಿದ್ದಾನೆ ಅಂತ ಇನ್ನೂ ಪತ್ತೆ ಆಗಿಲ್ಲ...."

"ನಿಜವಾಗ್ಲೂ ಅವನು ಹಾಗೆ ಮಾಡಿರ್ತಾನೇನಮ್ಮ... ಅಥವಾ...."

"ಶಶಾಂಕನೇ ಮಾಡಿ, ಗೌತಮನ ಮೇಲೆ ಆರೋಪ ಹೊರಿಸಿರಬಹುದು ಅಂತ ನಂಗೆ ಅನುಮಾನ... ನಿನ್ನ ಅತ್ತೆ ಮನೆಯವರಿಗೂ ವಿಷಯ ತಿಳೀತಾ? ನಾಚಿಕೆಗೇಡು...."

"ಇಲ್ಲಮ್ಮ, ಅವರಿಗೆ ಹೇಗೆ ತಿಳಿಯುತ್ತೆ...? ಅವರು ಉತ್ತರ ಭಾರತದ ಪ್ರವಾಸದಿಂದ ಇನ್ನೂ ಹಿಂದಿರುಗಿಲ್ಲ. ಆದರೆ ನನ್ನ ಗಂಡನಿಗೆ ಗೊತ್ತಾಗಿದೆ."

"ಏನಂದ್ರು ಅಳಿಯಂದ್ರು?" ಗಂಡನ ಕಡೆ ನೋಡಿದಳು.

"ಗೌತಮ ಹೀಗೆ ಮಾಡಿದಾನೆ ಅಂತಂದ್ರೆ ನಂಬೋಕೇ ಆಗೋಲ್ಲ... ರೇಣುಕಾ ಯಾಕೆ ನಿಮ್ಮ ಮನೆಗೆ ಬಂದಿದ್ಲು ಅಂತ ಅನುಮಾನ ಪಟ್ಟರು."

"ಅದೇ ನಮಗೆ ಗೊತ್ತಿಲ್ಲ ಪುಟ್ಟಿ... ಅದನ್ನು ಹೇಳೋರು ಯಾರೂ ಇಲ್ಲ.

ಅವನೇ ಹೇಳ್ಬೇಕು... ಎಲ್ಲಿದಾನೋ ಹೇಗಿದಾನೋ ಅಂತ ಯೋಚಿಸಿದ್ರೆ ಭಯ ಆಗುತ್ತೆ ಪುಟ್ಟೀ... ನೀನಾದ್ರೂ ಅವನಿಗೆ ಫೋನು ಮಾಡಿ ಮಾತಾಡು... ಅಮ್ಮ ಆತಂಕಗೊಂಡಿದಾಳೆ, ತಕ್ಷಣ ಬಾ... ಅಂತ ಹೇಳ್ತೀಯಾ?" ಹೇಳುತ್ತಾ ಹೇಳುತ್ತಾ ಅವಳ ಧ್ವನಿ ಕಟ್ಟಿತು.

"ಪೇಪರ್ನಲ್ಲಿ ಹಾಕಿಸು... ಎಲ್ಲಿದ್ರೂ ಬರ್ತಾನೆ... ಎಷ್ಟು ದಿನಾಂತ ಎಲ್ಲೆಲ್ಲೋ ತಿರುಗಾಡಿಕೊಂಡು ಇರೋಕೆ ಆಗುತ್ತೆ. ಬಂದು ಪೋಲೀಸರಿಗೆ ಸರೆಂಡರ್ ಆಗಲಿ... ಆಮೇಲೆ ಜಾಮೀನಿನ ಮೇಲೆ ಹೊರಕ್ಕೆ ಬರ್ತಾನೆ. ನೀನು ಧೈರ್ಯವಾಗಿರು."

"ಪೋಲೀಸರು ಹೊಡೆದು ಬಡಿದು, ಏನೇನೋ ಹೇಳಿಸಿ, ಅಪರಾಧಿ ಅಂತ ಸಾಬೀತು ಮಾಡಿಬಿಟ್ಟರೆ, ಮುಂದೆ ಏನೇ ಗತಿ?"

"ಹಾಗಂತ ಎಲ್ಲೆಲ್ಲೋ ಹೇಗೆ ಇರ್ತಾನೆ...? ದುಡ್ಡು ಕಾಸು, ಬಟ್ಟೆ ಬರೆ ಏನನ್ನಾದ್ರೂ ತಗೊಂಡು ಹೋಗಿದಾನಾ?"

"ಏನೋ ಗೊತ್ತಿಲ್ಲ. ನಮ್ಮ ಮನೆಗೆ ನಾವು ಹೋಗಕ್ಕಾಗಲ್ಲ. ಪೋಲೀಸರು ತಮ್ಮ ವಶಕ್ಕೆ ತಗೊಂಡು ಬೀಗ ಹಾಕಿದಾರೆ. ನಾವು ಹೋಟೆಲ್ನಲ್ಲಿ ರೂಮು ಮಾಡಿಕೊಂಡು ಇದೀವಿ ಕಣೇ..." ಅವಳು ಅಳು ತಡೆಯಲಾರದೆ ಅಳಲಾರಂಭಿಸಿದಾಗ ಆತ ಫೋನನ್ನೆತ್ತಿಕೊಂಡರು.

"ಪುಟ್ಟೀ... ಒಂದೆರಡು ದಿನಗಳ ಮಟ್ಟಿಗೆ ಬಂದು ನಿಮ್ಮಮ್ಮನ ಜೊತೇಲಿ ಇರು. ಅವಳಿಗೆ ಆಘಾತವಾಗಿದೆ. ಸುಧಾಮ ಅವನ ಹೆಂಡತಿಯ ಹೆರಿಗೆಯಾಗುವವರೆಗೂ ಎಲ್ಲಿಗೂ ಬರಲ್ಲ ಅಂತ ಹೇಳ್ಬಿಟ್ಟ."

"ಸರೀಪ್ಪಾ...ಇವರನ್ನ ಕೇಳ್ತೀನಿ. ಹ್ಞೂಂ ಅಂತಂದ್ರೆ ನಾಳೇನೇ ಬರ್ತೀನಿ. ಅಮ್ಮನ್ನ ಚೆನ್ನಾಗಿ ನೋಡ್ಕೊಳ್ಳಿ ಅಪ್ಪಾ...ಶಶಾಂಕನ ಕತೆ ಏನು? ಅವನನ್ನು ಪೋಲೀಸರು ಅರೆಸ್ಟ್ ಮಾಡಿದಾರಂತೆ..."

"ಹ್ಞೂಂ, ಕಂಪ್ಲೇಂಟ್ ಕೊಟ್ಟವನು ಅವನೇ. ಅವನನ್ನೇ ಅನುಮಾನಿಸಿ, ಅರೆಸ್ಟ್ ಮಾಡಿದರು. ನಿನ್ನ ಮಾವ ಒಳ್ಳೇ ಲಾಯರನ್ನು ಹಿಡಿದು ಜಾಮೀನಿನ ಮೇಲೆ ಬಿಡುಗಡೆ ಮಾಡಿಸಿದಾರೆ... ಈಗ ಮನೆಗೆ ಬಂದಿದಾನೆ."

"ನಾನು ಅವನ ಹತ್ರ ಮಾತಾಡ್ಲೇನಪ್ಪಾ?"

"ಮಾತಾಡು... ಅವನ ಮನಸ್ನಲ್ಲಿ ಏನಿದೆ ಅಂತ ತಿಳಿಯಬಹುದು. ಆದರೆ ಅವನ ಮೊಬೈಲ್ ನಂಬರ್ರು ನಂಗೆ ಗೊತ್ತಿಲ್ಲ."

"ಮನೆಗೆ ಮಾಡ್ತೀನಿ ಬಿಡಪ್ಪ. ಅತ್ತೆ ಕೈಲೂ ಮಾತಾಡ್ತೀನಿ."

"ನಿನ್ನ ಅತ್ತೆ ಮಾವಂಗೆ ಬಹಳ ಅಸಮಾಧಾನವಾಗಿದೆ ಪುಟ್ಟೀ... ಏನಾದ್ರೂ ಅಂದು ಆಡಿ ಮಾಡಿದ್ರೆ?"

"ಆದ್ಲೀ ಬಿಡೀಪ್ಪಾ. ಅವರಿಗೂ ಬೇಸರ ದುಃಖ ಆಗಿದೆ ಅಲ್ವಾ? ಶಶಾಂಕ ನಿಗಂತೂ ಷಾಕ್ ಆಗಿರಬಹುದು... ಅವನು ರೇಣುಕನ್ನ ಮರೆಯೋಕೆ ಆಗುತ್ತೇನಪ್ಪಾ?"

"ನನಗೂ ಒಮ್ಮೆ ಹೋಗಿ ಅವರುಗಳನ್ನು ಕಂಡು ನಾಲ್ಕು ಸಮಾಧಾನದ ಮಾತುಗಳನ್ನಾಡ್ಬೇಕು ಅಂತ ಆಸೆ. ಆದರೆ ನಿಮ್ಮಮ್ಮ ಬೇಡ ಅಂತಾಳೆ."

"ಅಮ್ಮನಿಗೆ ಬೇಡ ಅನ್ನಿಸಿದ್ರೆ ನೀವು ಹೋಗ್ಬೇಡಿ ಅಪ್ಪ. ಅವಳಿಗೆ ಮತ್ತೂ ಬೇಸರ ಆಗುತ್ತೆ... ಅವಳಿಗೆ ಈಗ ನಿಮ್ಮ ಹೊರತು ಬೇರೆ ಯಾರೂ ಹತ್ತಿರದಲ್ಲಿಲ್ಲ."

"ಅದಕ್ಕೇ ಹೇಳಿದ್ದು ಪುಟ್ಟೀ... ನೀನು ಬಂದು ಒಂದೆರಡು ದಿನ ಇರು ಅಂತ."

"ಸರಿಯಪ್ಪ... ಪ್ರಯತ್ನ ಪಡ್ತೀನಿ." ಎಂದು ಹೇಳಿ ಅವಳ ಮಾತನ್ನು ಮುಗಿಸಿದಳು. ಆತ ಹೆಂಡತಿಯ ಬಳಿಗೆ ಬಂದು ಸಮಾಧಾನ ಹೇಳಿದರು.

"ಪುಟ್ಟಿಗೆ ಬರೋಕೆ ಆಗದಿದ್ರೆ, ನೀನೇ ಅಲ್ಲಿಗೆ ಹೋಗಿ ನಾಲ್ಕು ದಿನ ಇರು. ಮೊಮ್ಮಕ್ಕಳ ಹತ್ತಿರ ಕಾಲಕಳೆದರೆ ಮನಸ್ಸಿನ ಬೇಸರ ಕಳೆಯುತ್ತೆ."

"ಇಲ್ಲಿ ನೀವು ಒಬ್ಬರೇ ಹೇಗಿರ್ತೀರಿ...? ಅಲ್ಲದೇ ಅಳಿಯಂದ್ರ ಎದುರಿಗೆ ಮುಖ ಎತ್ತಿ ಹೇಗ್ರೀ ತಿರುಗಾಡೋದು...?"

"ಅಂಥಾದ್ದೇನೂ ಆಗೋಲ್ಲ. ನಿನಗೆ ಇಷ್ಟವಿಲ್ಲದಿದ್ದರೆ ಬೇಡ. ನಾನು ಪ್ರೆಸ್ ಆಫೀಸ್ಗೆ ಹೋಗಿ ಬರ್ತೀನಿ. ಆದರೆ, ಗೌತಮನ ಫೋಟೋನೇ ಇಲ್ಲವಲ್ಲ ನಮ್ಮ ಹತ್ರ?"

"ಆ ಹುಡುಗಿ ಸೀಮಾಳ ಹತ್ತಿರ ಇದ್ದರೂ ಇರಬಹುದು. ಅವಳನ್ನೇ ಕೇಳೋಣ."

"ಸರಿ, ನಡೀರಿ... ಅವಳ ಆಫೀಸ್ಗೆ ನಾನೂ ಬರ್ತೀನಿ" ಎನ್ನುತ್ತಾ ಎದ್ದಳು.

*******

"ಶಶಾಂಕ್ ಹೇಗಿದ್ದೀರಿ? ಐ ಆಮ್ ಸಾರೀ, ಹೀಗಾಗ್ಬಾರದಾಗಿತ್ತು" ಅಂತ ಸೀಮಾ ಹೇಳಿದಾಗ ಶಶಾಂಕ ಅವಳನ್ನೇ ದಿಟ್ಟಿಸಿ ನೋಡಿದ.

"ಹೌದು ಸೀಮಾ, ಹೀಗಾಗ್ಬಾರದಾಗಿತ್ತು... ಯಾಕೆ ಹೀಗಾಯ್ತು? ನಿಜವಾದ ಅಪರಾಧಿ ಯಾರು ಅಂತ ಪತ್ತೆ ಹಚ್ಚಬೇಕಾಗಿದೆ... ನನಗೆ ನಿಮ್ಮ ಸಹಕಾರ ಬೇಕು."

"ಹೇಳಿ, ನನ್ನಿಂದೇನಾಗ್ಬೇಕು...?"

"ಗೌತಮ ನಿಮಗೆ ಫೋನು ಮಾಡಿದ್ನಾ? ಏನು ಹೇಳ್ದ?"

"ಈ ಬಗ್ಗೆ ನಾನು ಪೋಲೀಸ್ನೋರಿಗೆ ಹೇಳಿಕೆ ಕೊಟ್ಟಾಗಿದೆ ಶಶಾಂಕ್.....ಆ

ವಿಷಯ ನಿಮಗೆ ಗೊತ್ತಿರಬೇಕಲ್ವಾ..?"

"ಹ್ಞೂಂ ಗೊತ್ತು, ಆದರೂ ಮತ್ತೆ ಕೇಳ್ತಿದೀನಿ. ಅವನು ನಿಮ್ಮ ಹತ್ರ ಏನೂ ಹೇಳಲಿಲ್ವಾ....?"

"ಇಲ್ಲ, ಅವನೇನಾದ್ರೂ ಹೇಳಿದ್ರೆ ಅದನ್ನ ಪೋಲೀಸ್ನೋರಿಗೆ ಹೇಳ್ತಿರಲಿಲ್ವಾ?"

"ಅಪ್ಸೆಟ್ ಆಗ್ಬೇಡಿ ಸೀಮಾ... ನಂಗೆ ಗೊತ್ತು ಗೌತಮ, ನೀವು ಇಬ್ಬರೂ ಕ್ಲೋಸ್ ಆಗಿದ್ರಿ... ಇನ್‌ಫಾಕ್ಟ್ ಮದುವೆಯಾಗ್ಬೇಕು ಅಂತ ಸಹ ಡಿಸೈಡ್ ಮಾಡಿದ್ರಿ ..." ಅವಳು ಸುಮ್ಮನೆ ನಿಂತಿದ್ದಳು. ಅವನೇ ಮುಂದುವರೆಸಿದ, "ಗೌತಮ ಅಪರಾಧ ಮಾಡಿರಬಹುದು ಅಂತ ನಿಮಗೆ ಅನ್ನಿಸುತ್ತಾ...?"

"ನಾನ್ಹೇಗೆ ಹೇಳಲಿ? ಅಲ್ಲೇನು ನಡೀತು ಅಂತ ನಂಗೇನ್ಗೊತ್ತು...? ನಿಮಗೆ ಗೊತ್ತಿರಬಹುದು ಅಲ್ವಾ...? ರೇಣುಕಾ ನಿಮಗೆ ಫೋನು ಮಾಡಿರಬಹುದು ಅಲ್ವಾ...?"

"ಇಲ್ಲ... ನನಗೆ ಅದೇ ಆಶ್ಚರ್ಯ, ಹಿಂದಿನ ದಿನ ನಾವಿಬ್ರೂ ಭೇಟಿಯಾಗಿದ್ವು ಆದರೆ ಆ ದಿನ ನನಗೆ ಯಾವ ಕಾಲ್ ಬರಲಿಲ್ಲ."

"ಮತ್ತೆ... ರೇಣುಕಾಳ ರೂಂಮೇಟ್ ಹೇಳಿದ್ಲು... ನಿಮ್ಮ ಜೊತೆ ಷಾಪಿಂಗ್ ಹೋಗ್ತಿದೀನಿ ಅಂತ ಹೇಳಿದ್ಲಂತೆ... ನೀವು ಕಾಲ್ ಮಾಡಿರಬಹುದು...."

"ಇಲ್ಲ, ನಾನು ಅವಳಿಗೆ ಕಾಲ್ ಮಾಡಿರಲಿಲ್ಲ... ಅವತ್ತು ನನಗೆ ಬೇರೆ ಕೆಲಸ ಬೇಕಾದಷ್ಟು ಇತ್ತು. ಮನೆಗೆ ಬಂದದ್ದೇ ಲೇಟು... ಮನೆಗೆ ಬಂದ ಸ್ವಲ್ಪ ಹೊತ್ನಲ್ಲೇ ನನ್ನ ಮೊಬೈಲ್‌ಗೆ ಕಾಲ್ ಬಂತು.. 'ಗೌತಮನ ಮನೆಯಲ್ಲಿ ರೇಣುಕಾಳ ಕೊಲೆಯಾಗಿದೆ, ಈಗ್ಲೇ ಬನ್ನಿ' ಅಂತ... ಅದು ಯಾವುದೋ ಹೊಸ ನಂಬರ್ರು. ಅವರ್ಯಾರೋ ನನಗೆ ತಿಳೀದು. ನನ್ನ ನಂಬರ್ರು ಅವರಿಗೆ ಹೇಗೆ ಸಿಕ್ತು ಅಂತ ನಂಗೆ ಗೊತ್ತಿಲ್ಲ. ಆ ತಕ್ಷಣಕ್ಕೆ ಯಾರೋ ಬೇಕೂಂತ ಸುಳ್ಳು ಹೇಳಿದಾರೆ ಅಂತ ಅನ್ನಿಸಿದರೂ, ಪೋಲೀಸರಿಗೆ ಫೋನು ಮಾಡಿ, ನಾನು ಗೌತಮನ ಮನೆಗೆ ಬಂದೆ. ಮನೆಗೆ ಬೀಗ ಹಾಕಿತ್ತು. ಮನೆಯಲ್ಲಿ ಯಾರೂ ಇರಲಿಲ್ಲ... ಪೋಲೀಸರು ಬಾಗಿಲನ್ನು ಒಡೆದು ನುಗ್ಗಿದರು... ಅಲ್ಲಿ ರೇಣುಕಾಳ ದೇಹ ದುರವಸ್ಥೆಯಲ್ಲಿ ಬಿದ್ದಿತ್ತು... ಯಾರೋ ಪಾಪಿ, ಅವಳ ಮೇಲೆ ಅತ್ಯಾಚಾರವೆಸಗಿದ್ದು ನೋಡಿದ ಕೂಡಲೇ ತಿಳಿಯುವಂತಿತ್ತು." ಶಶಾಂಕನ ದನಿ ಕಟ್ಟಿತ್ತು. ಅವಳ ಕಡೆಗೆ ನೋಡ ಲಾರದೇ ಬೇರೆಲ್ಲೋ ನೋಡುತ್ತಿದ್ದ. ನಾನು ಅಲ್ಲಿ ನಿಲ್ಲದೇ ಮನೆಗೆ ಹಿಂತಿರುಗಿದೆ."

"ಹಾಗಾದ್ರೆ ಇದು ರೇಪ್ ಕೇಸಾ...?" ನಿಮಗೆ ಗೌತಮನ ಮೇಲೆ ಅನುಮಾನ ಇಲ್ವಾ...? ಪೋಲೀಸರು ನಿಮ್ಮ ಮೇಲೆ ಅನುಮಾನ ಪಟ್ಟಿದ್ದು, ನಿಮ್ಮನ್ನು ಅರೆಸ್ಟ್ ಕೂಡಾ ಮಾಡಿದ್ದರು ಅಲ್ವಾ....?"

ಅವಳ ಪ್ರಶ್ನೆಯಿಂದ ಅವನಿಗೆ ಅವಮಾನವಾದಂತಾಗಿತ್ತು. ಮುಖ ಕೆಂಪಾಯಿತು. ಸಾವರಿಸಿಕೊಂಡು ಕೇಳಿದ. "ಸಧ್ಯದಲ್ಲೇ ನಾನು, ರೇಣುಕಾ ಮದುವೆ ಯಾಗಲಿದ್ದೆವು... ಅಲ್ಲಿಯವರೆಗೆ ಯಾವ ಸಂಬಂಧವನ್ನು ಇಟ್ಟುಕೊಳ್ಳುವ ಆತುರ, ಕಾತುರ ನಮಗಿರಲಿಲ್ಲ. ಅಲ್ಲದೇ, ಒಂದು ವೇಳೆ ನಾವು ಬಯಸಿದ್ದರೆ, ನಾವು ಗೌತಮನ ಮನೆಗೆ ಹೋಗಬೇಕಾಗಿರಲಿಲ್ಲ... ನಮ್ಮ ಮನೆ ಇತ್ತು, ಹೋಟೆಲ್ ರೂಂಗಳಿದ್ದವು. ಅಂಥಾ ಕೆಳಮಟ್ಟದ ಆಲೋಚನೆ ನನ್ನಲ್ಲಿರಲಿಲ್ಲ. ರೇಣುಕಾಳಿಗೆ ನನ್ನ ಮೇಲೆ ವಿಶ್ವಾಸವಿತ್ತು... ರೇಪ್ ಮಾಡಿ, ಆ ವಿಶ್ವಾಸವನ್ನು ಕಳೆದುಕೊಳ್ಳುವಷ್ಟು ನೀಚ ನಾನಲ್ಲ." ಆವೇಶದಿಂದ ನುಡಿದ.

ಅವಳು ಮೌನಿಯಾದಳು. ಕೆಲವೇ ದಿನಗಳ ಹಿಂದೆ, ತಾನು ಗೌತಮನೊಡನೆ ಕಳೆದ ಸಮಯ ಹಾಗೂ ಅನುಭವದ ನೆನಪಾಗಿತ್ತು. ಶಶಾಂಕ ಮುಂದುವರೆಸಿದ... "ನಾನು ಈ ಪ್ರಶ್ನೆ ಕೇಳಬಾರದು... ಅದು ನಿಮ್ಮ ಪರ್ಸನಲ್ ವಿಷಯ... ಗೌತಮನ ಬಗ್ಗೆ ನನಗಿಂತ ನಿಮಗೇ ಚೆನ್ನಾಗಿ ಗೊತ್ತು. ನಿಮ್ಮ ಬಗ್ಗೆ ನನ್ನೊಡನೆ ಎಷ್ಟೋ ಬಾರಿ ಹೇಳಿದ್ದ."

ರೋಷದಿಂದ ಅವಳು ಕೆರಳಿದಳು.

"ನನ್ನ ಬಗ್ಗೆ ಏನು ಹೇಳಿದ್ದ?" ಪ್ರಶ್ನಿಸುವಾಗ ದನಿ ನಡುಗಿತ್ತು.

"ಅವನಿಗೆ ನಿಮ್ಮನ್ನು ಆದಷ್ಟು ಬೇಗ ಮದುವೆಯಾಗುವ ಆಸೆ ಇತ್ತು... ಅವನ ತಾಯಿ ಒಪ್ಪಿಗೆ ಕೊಟ್ಟಿರಲಿಲ್ಲ. ಆ ಬಗ್ಗೆ ಕೋಪವೂ ಇತ್ತು. ಯಾಕೆ ಆ ವಿಷಯವನ್ನು ನಿಮಗೆ ಹೇಳಿರಲಿಲ್ವಾ..?" ಅವಳು ಉತ್ತರಿಸಲಿಲ್ಲ. ಅವಳ ಯೋಚನೆ ಬೇರೆಯೇ ಇತ್ತು. 'ಹಾಗಾದರೆ ಗೌತಮನಿಗೆ ನನ್ನನ್ನು ಕೆಡಿಸುವ ಆಸೆ ಇತ್ತೆ...? ಆದರೆ ಹಾಗೆ ಎಂದೂ ಮುಂದುವರೆದಿರಲಿಲ್ಲ. ಆದರೆ ನಾನಾಗಿಯೇ ಮುಂದುವರೆದಾಗ ಬೇಡ ಎನ್ನಲಿಲ್ಲ... ಹಾಗಾದರೆ ಅದು ಪ್ರೀತಿ ಅಲ್ಲವೇ? ಬರೀ ಕಾಮನೆಯೇ...?'

"ಸಾರೀ... ಸೀಮಾ... ನೀವು ಗೌತಮನನ್ನು ಪ್ರೀತಿಸ್ತೀರಿ. ಅವನನ್ನು ತೆಗಳ್ತಿದೀನಿ ಅಂತ ನಿಮಗೆ ಕೋಪ ಬರಬಹುದು. ಆದರೆ ನಾನೇನು ಮಾಡಲಿ! ಈಗ ಯಾವುದೇ ಒಂದು ತೀರ್ಮಾನಕ್ಕೆ ಬರಲು ಆಗ್ತಿಲ್ಲ... ನಾನು ರೇಣುಕಾಳನ್ನು ಪೂರ್ಣವಾಗಿ ಕಳೆದುಕೊಂಡಿದೀನಿ. ಗೌತಮ ನಿಮ್ಮಿಂದ ದೂರ ಎಲ್ಲೋ ಹೋಗಿದಾನೆ... ನನ್ನ ದುಃಖ ಒಂಥರವಾದರೆ, ನಿಮ್ಮ ಬೇಸರ ಇನ್ನೊಂದು ಥರ... ಆದದ್ದು ಆಗಿಹೋಯ್ತು. ಗೌತಮನೇ ಅಪರಾಧಿ ಅಂತ ನಾನಾಗಲೀ, ಬೇರೆ ಯಾರಾಗಲೀ ಹೇಳುತ್ತಿಲ್ಲ. ಸನ್ನಿವೇಶಗಳು ಹಾಗೆ ಅನುಮಾನವನ್ನು ಹುಟ್ಟಿ ಸುತ್ತಿವೆ. ಅವನು ಎಲ್ಲಿಯೇ ಇದ್ದರೂ ಹಿಂತಿರುಗಿ ಬರಲಿ... ನಿರಪರಾಧಿಯಾಗಿದ್ದರೆ

ಅವನಿಗ್ಯಾಕೆ ಭಯ...? ಈ ಘಟನೆಯನ್ನು ನೀವು ಮರೆತು ಬಿಡಿ... ಅವನನ್ನು ಆದಷ್ಟು ಬೇಗ ಮದುವೆಯಾಗಿ... ನಿಮ್ಮ ವೈವಾಹಿಕ ಜೀವನ ಚೆನ್ನಾಗಿರಲಿ." ಅವಳು ಕತ್ತೆತ್ತಿ ಅವನ ಕಡೆ ನೋಡಿದಳು. ವ್ಯಂಗ್ಯವಾಡುತ್ತಿರಬಹುದೇ ಅಥವಾ, ನಿಜಕ್ಕೂ ಒಳ್ಳೆಯ ಮನಸ್ಸಿನಿಂದ ಆಡುತ್ತಿರಬಹುದೇ, ಅಂತ ಅಂದುಕೊಂಡಾಗ ಅವನ ಬಗ್ಗೆ ಒಳ್ಳೆಯ ಭಾವನೆ ಮೂಡಿತು. ಮುಖದ ಮೇಲಿನ ಕಠಿಣತೆ ಕಡಿಮೆ ಆಗಿತ್ತು. ಮೃದುವಾದ ಕೆನ್ನೆಗಳು ಮಿಂಚಿದವು... ಶಶಾಂಕನ ಹೃದಯದಲ್ಲಿ ತರಂಗಗಳು ಎದ್ದವು... ಹತ್ತಾರು ಭಾವನೆಗಳು ದುಮ್ಮಿಕ್ಕಿದ್ದವು. ಕಣ್ಣುಗಳನ್ನು ಮುಚ್ಚಿಕೊಂಡು ಭಾವನೆಗಳ ಭೋರ್ಗರೆತವನ್ನು ಹಿಡಿದಿಟ್ಟುಕೊಂಡ.

"ಸಾರೀ ಸೀಮಾ... ಏನೇನೋ ಮಾತನ್ನಾಡಿ ನಿಮ್ಮ ಮನಸ್ಸನ್ನು ಮತ್ತೂ ಕೆಡಿಸಿದೆ... ಆದರೆ ಒಂದು ಮಾತು ನಿಜ... ಗೌತಮ ಹೀಗೆ ಎಷ್ಟು ದಿನಗಳು ಅಂತ ತಲೆ ಮರೆಸಿಕೊಂಡು ಇರ್ತಾನೆ...? ಅವನಾಗಿಯೇ ಬರಬೇಕಾಗಬಹುದು... ಪೋಲೀಸರ ಕೈಗೆ ಸಿಕ್ಕಿ ಬೀಳಬಹುದು... ನಾನೂ ನಿಮ್ಮೊಂದಿಗೆ ಇದೀನಿ... ಗೌತಮ ನಿರಪರಾಧಿ ಅಂತ ಸಾಬೀತು ಪಡಿಸೋಕೆ, ಬೇಕಾದ ಸಾಕ್ಷ್ಯಾಧಾರಗಳನ್ನು ಕೊಡೋಣ... ನೀವು ವರಿ ಮಾಡ್ಕೋಬೇಡಿ... ಅವನು ತಪ್ಪು ಮಾಡಿಲ್ಲದೆ ಇರಬಹುದು."

"ಹಾಗಂತ ನಿಮಗೆ ಯಾಕೆ ಅನ್ನಿಸ್ತಿದೆ...?"

"ನಿಮ್ಮ ಬಗ್ಗೆ ಅಯ್ಯೋ ಅಂತ ಅನ್ನಿಸುತ್ತೆ ಸೀಮಾ... ಗೌತಮನ್ನ ಮೆಚ್ಚಿದೀರಿ, ಪ್ರೀತಿಸ್ತಿದ್ದೀರಿ... ಅವನಿಲ್ಲದೇ ಹೇಗೆ ಇರಬಲ್ಲಿರಿ...? ಅವನಿಗೇನಾದರೂ ತೊಂದರೆ ಯಾದರೆ ನಿಮಗೆ ಅದನ್ನು ಸಹಿಸಿಕೊಳ್ಳೋಕೆ ಆಗುತ್ತಾ....?"

"ಪ್ಲೀಸ್... ಈ ನಾಟಕದ ಮಾತುಗಳನ್ನಾಡಬೇಡಿ... ಗೌತಮನನ್ನು ಎಲ್ಲಿಯೇ ಇದ್ದರೂ ಕರೆಸಲು ನೀವು ಈ ಮಾತುಗಳನ್ನಾಡುತ್ತಿದ್ದೀರಿ ಅಲ್ವಾ.....?"

"ಇಲ್ಲ ಸೀಮಾ... ನಾನೂ ಯೋಚಿಸಿದೆ... ಏನೇ ಮಾಡಿದರೂ ರೇಣುಕಾ ಮತ್ತೆ ಹಿಂತಿರುಗಿ ಬರಲು ಸಾಧ್ಯವಿಲ್ಲ... ಗೌತಮನ ಮನೆಗೆ ಹೋಗುವ ಮೊದಲು, ಅವಳು ಒಂದೇ ಒಂದು ಕಾಲ್ ಮಾಡಿದ್ದರೂ ಸಾಕಾಗಿತ್ತು ಅಥವಾ ಮೆಸೇಜ್ ಮಾಡಬಹುದಾಗಿತ್ತು. ಯಾಕೋ ಏನೋ ಸುಳ್ಳು ಹೇಳಿ ಷಾಪಿಂಗ್ ಹೋಗುತ್ತಿರುವುದಾಗಿ ಹೇಳಿದ್ದಾಳೆ. ಆದರೆ, ಆ ದಿನ ನಾವು ಮೀಟ್ ಮಾಡುವ ಪ್ಲ್ಯಾನೇ ಇರಲಿಲ್ಲ."

"ಹಾಗಾದರೆ, ರೇಣುಕಾಳ ಮೇಲೆ ನಿಮಗೆ ಏನು ಅನುಮಾನ...?"

"ಛೇ... ಯಾವ ಅನುಮಾನವೂ ಇಲ್ಲ. ಆದರೆ ಅವಳೇಕೆ ನಿಜವನ್ನು ಹೇಳಲಿಲ್ಲ ಅಂತ ತಿಳಿಯದು... ಅವಳ ತಂದೆ ತಾಯಿಗೂ ನನ್ನ ಮೇಲೆ ಕೋಪ... ಅವಳಿಂದಾಗಿ

ನನ್ನ ಮೇಲೆ ಆಪಾದನೆ ಬಂತು. ಅರೆಸ್ಟ್ ಮಾಡಿದರು. ಶಿಕ್ಷೆ ಆಯಿತು. ಇದನ್ನೆಲ್ಲ ನಾನು ಮರೆಯಲೇಬೇಕು... ರೇಣುಕಾಳೇ ಇಲ್ಲದ ಮೇಲೆ ಈ ಅನುಮಾನಗಳಿಗೆ ಯಾರು ಉತ್ತರ ಕೊಡ್ತಾರೆ...?"

"ರೇಣುಕಾಳ ಮೊಬೈಲ್ ಫೋನಿಗೆ ಕಾಲ್ ಮಾಡಿದ್ರಾ....?"

"ಎಷ್ಟೋ ಬಾರಿ ಮಾಡಿದೆ. ಆದರೆ ಸ್ವಿಚ್ ಆಫ್ ಆಗಿತ್ತು... ಯಾಕೆ ಅಂತ ಗೊತ್ತಿಲ್ಲ. ಬಹುಶಃ ಆ ಫೋನು, ಗೌತಮನ ಬಳಿ ಇರಬಹುದು ಅಥವಾ ಪೋಲೀಸರ ಕೈಗೆ ಸಿಕ್ಕಿರಬಹುದು...."

"ಹೌದು ಅದೀಗ ಪೋಲೀಸ್ ಇನ್ಸ್‌ಪೆಕ್ಟರ್ ಬಳಿ ಇದೆ. ರೇಣುಕಾ ಅದನ್ನು ತನ್ನ ರೂಮಿನಲ್ಲೇ ಬಿಟ್ಟು ಹೋಗಿದ್ದಳಂತೆ. ಅದನ್ನು ಅವಳ ರೂಂಮೇಟ್ ನನಗೆ ತಿಳಿಸಿದಳು... ಬ್ಯಾಟರಿ ಚಾರ್ಜ್ ಮಾಡಲು ಹಾಕಿ ಅಲ್ಲೇ ಬಿಟ್ಟು ಹೋಗಿದ್ದಳಂತೆ...."

"ಹೌದಾ, ನನಗೆ ಈ ವಿಷಯ ಗೊತ್ತಾಗ್ಲೇ ಇಲ್ಲ... ಗೊತ್ತಾಗಿದ್ದಿದ್ರೆ ತಕ್ಷಣವೇ ಅವಳ ರೂಮಿಗೆ ಹೋಗಿ ನೋಡ್ತಿದ್ದೆ. ಪೋಲೀಸರು ಪರ್ಮಿಷನ್ ಕೊಟ್ಟರೆ ಅದರಲ್ಲಿರುವ ನಂಬರ್ಸ್‌ಗಳನ್ನು, ಕಾಲ್ಸ್‌ಗಳನ್ನು ಚೆಕ್ ಮಾಡಬಹುದಿತ್ತು.....ಆದರೆ ಅವರು ಪರ್ಮಿಷನ್ ಕೊಡುವುದಿಲ್ಲ. ಅದನ್ನು ನನಗಂತೂ ಖಂಡಿತಾ ಕೊಡುಲ್ಲ... ನೀವೇ ಇಟ್ಟುಕೊಳ್ಳಬಹುದಾಗಿತ್ತಲ್ಲ... ಗೌತಮನ್ನ ಕಾಪಾಡಬಹುದಾಗಿತ್ತು."

"ಅದನ್ನು ಪೋಲೀಸರ ವಶಕ್ಕೆ ಕೊಡುವುದು ನನ್ನ ಕರ್ತವ್ಯವಾಗಿತ್ತು. ಹಾಗೇ ರೇಣುಕಾಳಿಗೆ ನ್ಯಾಯ ಸಿಗಲು, ಅದರಿಂದ ಸಹಾಯವಾಗಬಹುದು, ಅದನ್ನು ನಾನೇಕೆ ತಡೆಯಬೇಕು..?" ಅವಳು ನಿರ್ಭಯದಿಂದ ನುಡಿದಾಗ ಅವನು ಮೆಚ್ಚಿದ. ಕೆದಕುವವನಂತೆ ಪ್ರಶ್ನಿಸಿದ.

"ಒಂದು ವೇಳೆ ಗೌತಮ ತಪ್ಪಿತಸ್ಥನಾಗಿದ್ದರೆ...?"

"ಅದನ್ನು ವಿಚಾರಣೆಗಳ ನಂತರ ಕೋರ್ಟು ನಿರ್ಧರಿಸುತ್ತದೆ. ಹಾಗೇ ನಿಮ್ಮ ವಿಚಾರಣೆಯೂ ಮುಗಿದಿಲ್ಲ ಶಶಾಂಕ್... ಆರೋಪದಿಂದ ನೀವು ಮುಕ್ತರಾಗಿಲ್ಲ." ಅವನ ಮುಖ ಕೆಂಪಾಗಿತ್ತು.

"ಹೌದು ಸೀಮಾ... ಆ ವಿಷಯ ನೆನಪಿನಲ್ಲಿದೆ. ಆದರೆ ನಾನು ಅಪರಾಧವನ್ನು ಮಾಡಿಲ್ಲ ಅಂತ ನನಗೆ ಚೆನ್ನಾಗಿ ಗೊತ್ತು. ಒಂದು ವೇಳೆ ಮೂರನೆಯ ವ್ಯಕ್ತಿ ಯಾರಾದರೂ ಇದ್ದು ಈ ಕೃತ್ಯವನ್ನು ಮಾಡಿದ್ದರೆ, ಅದೂ ಸಹ ಬೆಳಕಿಗೆ ಬರುತ್ತದೆ... ಅವನಿಗೆ ಶಿಕ್ಷೆಯಾಗುತ್ತದೆ.... ಆದರೆ...."

"ಗೌತಮ ಯಾಕೆ ಓಡಿ ಹೋದ ಅಂತ ನಂಗೂ ಅನುಮಾನವಿದೆ ಶಶಾಂಕ್... ಒಂದು ವಿಷಯ ಹೇಳಿ, ಯಾರಿಂದಲೋ ನಿಮಗೆ ಫೋನು ಬಂತು ಅಂತ

ತಿಳಿಸಿದ್ರಲ್ಲ... ಆ ನಂಬರ್ರು ಯಾರದ್ದು ಅಂತ ಪತ್ತೆ ಹಚ್ಚಿದ್ರಾ...?"

"ಇಲ್ಲ, ನನ್ನ ಮೊಬೈಲ್ ನನ್ನ ಬಳಿ ಇಲ್ಲ... ಆ ಅವಸರದಲ್ಲಿ ಆ ನಂಬರನ್ನು ಸೇವ್ ಮಾಡಿಕೊಳ್ಳಲಿಲ್ಲ... ಹೇಗೆ ಹೇಳಲಿ..?"

"ಅದು ಸಹಜ... ನಾನಿನ್ನು ಹೊರಡ್ಲಾ... ಹೊತ್ತಾಯ್ತು...ಅಮ್ಮ ಕಾಯ್ತಾ ಇರ್ತಾಳೆ...."

"ನನ್ನನ್ನು ಮೀಟ್ ಮಾಡೋಕ್ಕೆ ಹೋಗ್ತಾ ಇದೀನಿ ಅಂತ ಹೇಳಿದೀರಿ ತಾನೇ..."

"ಹ್ಞೂಂ, ನನ್ನ ಅಮ್ಮನ ಬಳಿ ನಾನು ಯಾವ ವಿಷಯವನ್ನೂ ಮುಚ್ಚಿಡುವುದಿಲ್ಲ... ಅದೂ ಈ ಹಗರಣ ಆದ ಮೇಲೆ... ನಾನು ಎಲ್ಲಿಗೆ ಹೋಗ್ತೀನಿ, ಯಾರನ್ನು ಮೀಟ್ ಮಾಡ್ತೀನಿ ಅಂತ ಯಾರಿಗಾದ್ರೂ ತಿಳಿದಿದ್ರೆ ಒಳ್ಳೇದು ಅಲ್ವಾ?"

"ಹಾಗಾದ್ರೆ ನನ್ನ ಮೇಲೆ ನಿಮಗೆ ನಂಬಿಕೆ ಇರಲಿಲ್ವಾ?"

"ನಂಬಿಕೆ ಇದ್ದುದ್ದರಿಂದಲೇ ಬಂದಿದ್ದು... ಆದರೂ, ನಿಮ್ಮ ಗೌತಮನ ಸಂಬಂಧ ಈಗ ಕೆಟ್ಟಿದೆ...." ಮಾತಾಡುವಾಗ ಸ್ವಲ್ಪ ಮುಜುಗರವಾಯಿತು.

"ನಾನು ಅವನ ಸ್ನೇಹಿತೆ... ಏನು ಕೇಳ್ತೀರೋ... ಏನೇನು ಹೇಳ್ಬೇಕೋ ಅಂತ ನಂಗೂ ಸ್ವಲ್ಪ ಆತಂಕವಿತ್ತು."

"ಈಗ? ಈಗ ಆ ಆತಂಕವಿಲ್ವಾ...?" ನಿರಾಳವಾಗಿ ಕೇಳಿದ.

"ಇಲ್ಲ, ಯಾವ ಆತಂಕವೂ ಇಲ್ಲ."

"ಹಾಗಾದ್ರೆ, ನಾನು ನಿಮ್ಮ ಸಹಕಾರವನ್ನು ಬಯಸ್ತೀನಿ. ಯಾವ ಆತಂಕವಿಲ್ಲದೇ ನನಗೆ ಸಹಾಯ ಮಾಡ್ತೀರಿ ಅಲ್ವಾ....?"

"ಖಂಡಿತಾ... ನಿಮಗೆ ಏನೇ ಮಾಹಿತಿ ಬೇಕಾದ್ರೂ ನನಗೆ ಫೋನು ಮಾಡಿ... ನನಗೆ ಗೊತ್ತಿರುವುದನ್ನು ತಿಳಿಸ್ತೀನಿ... ಆಲ್ ದಿ ಬೆಸ್ಟ್..."

"ನಿಮಗೂ ಆಲ್ ದಿ ಬೆಸ್ಟ್ ಸೀಮಾ... ಬನ್ನಿ ಡ್ರಾಪ್ ಕೊಡ್ತೀನಿ." ಎಂದ.

"ಥ್ಯಾಂಕ್ಸ್, ನಾನು ಆಟೋದಲ್ಲೇ ಹೋಗ್ತೀನಿ..." ಎಂದು ಹೇಳಿ ಮುಂದೆ ನಡೆದಳು.

*******

ಮೊಬೈಲ್ ಫೋನು ರಿಂಗಾಯಿತು. "ಅಕ್ಕಾ ನಿನ್ನ ಫೋನು ರಿಂಗಾಗ್ತಿದೆ ಕಣೇ..." ಸೋನಿ ಕಿರುಚಿಕೊಂಡಾಗ ಅವಳು ಬಾತ್‌ರೂಂನೊಳಗಿನಿಂದಲೇ ನುಡಿದಳು.

"ಯಾರು ಅಂತ ನೋಡೇ.....ನಾನು ಆಮೇಲೆ ಮಾತಾಡ್ತೀನಿ."

"ಹಲೋ... ಯಾರು?" ಅಂಥ ಸೋನಿ ಕೇಳಿದಾಗ ಆ ವ್ಯಕ್ತಿ "ಸೀಮಾ

ಇಲ್ವಾ?" ಅಂತ ಕೇಳಿತು.

"ಬಾತ್ ರೂಂನಲ್ಲಿದ್ದಾಳೆ. ನಾನು ಅವಳ ತಂಗಿ" ಅಂತ ಹೇಳಿದಾಗ, ಆ ವ್ಯಕ್ತಿ "ನಾನು ಇನ್ನು ಸ್ವಲ್ಪ ಹೊತ್ತು ಬಿಟ್ಟು ಮಾಡ್ತೀನಿ." ಅಂತ ಹೇಳಿ ಲೈನ್ ಕಟ್ ಮಾಡಿತ್ತು. ಸೀಮಾ ಹೊರಗೆ ಬಂದಳು.

"ಯಾರೇ ಅದು ಸೋನಿ, ಕೇಳಿದ್ಯಾ?"

"ಯಾರು ಅಂತ ಹೇಳ್ಲಿಲ್ಲ. ಮತ್ತೆ ಮಾಡ್ತಾನಂತೆ."

"ಗಂಡ್ಸಾ...?"

"ಹ್ಞಂ ನಿಂಗೆ ಫೋನು ಮಾಡೋರೆಲ್ಲಾ ಗಂಡಸ್ರೇ ತಾನೇ...?"

"ಷಟಪ್... ನಿಂಗೇನು ಅದನ್ನೆಲ್ಲ ಕಟ್ಕೊಂಡು.. ?"

"ನಂಗೇನೂ ಆಗ್ಬೇಕಾಗಿಲ್ಲ. ಇನ್ಮೇಲೆ ನಂಗೆ ಇಂಥಾ ಕೆಲಸಗಳನ್ನೆಲ್ಲ ಹೇಳ್ಲೇ ಬೇಡ. ನಂಗೆ ಹೊತ್ತಾಯ್ತು... ನಾನು ಸ್ನಾನಕ್ಕೆ ಹೋಗ್ತೀನಿ" ಎನ್ನುತ್ತಾ ಅವಳು ಬಚ್ಚಲು ಮನೆಯ ಕಡೆಗೆ ನಡೆದಳು.

'ಯಾರಿರಬಹುದು? ಶಶಾಂಕ ಮಾಡಿದ್ದನೋ ಏನೋ... ಇಷ್ಟು ಹೊತ್ತಿಗೇ ಯಾಕೆ ಮಾಡಿದ್ದ?' ಎಂದುಕೊಂಡು ಮತ್ತೆ ಫೋನು ರಿಂಗಾಗುವುದನ್ನೇ ಕಾದಳು. ಆದರೆ ಹತ್ತು ಹದಿನೈದು ನಿಮಿಷಗಳಾದರೂ ಫೋನು ರಿಂಗಾಗಿರಲಿಲ್ಲ. ಕಾತುರ ವನ್ನು ತಡೆಯಲಾರದೇ ತಾನೇ ಶಶಾಂಕನ ನಂಬರನ್ನು ಡಯಲ್ ಮಾಡಿದಳು. ಶಶಾಂಕನ ಧ್ವನಿ ಕೇಳಿದ ಕೂಡಲೇ ಒಂದು ಘಳಿಗೆ ಮೌನಿಯಾದಳು. ಎದೆ ಸಣ್ಣಗೆ ಕಂಪಿಸಿತ್ತು. "ಶಶಾಂಕ್... ಏನು ವಿಷಯ? ಯಾಕೆ ಫೋನು ಮಾಡಿದ್ರಿ?" ನಿಧಾನವಾಗಿ ಕೇಳಿದಳು.

"ಇಲ್ಲವಲ್ಲ... ನಾನು ಯಾರಿಗೂ ಫೋನ್ ಮಾಡಿಲ್ಲ... ನಾನೇ ಕೇಳೋಣ ಅಂಥ ಇದ್ದೆ... ನೀವು ಮನೇಲೇ ಇದೀರಾ? ಆಫೀಸ್ಗೆ ಹೋಗಲಿಲ್ವಾ?"

"ಹೊರಟಿದ್ದೆ. ರೆಡಿ ಮಾಡ್ಕೋತಿದ್ದೆ... ಯಾವುದೋ ಕಾಲ್ ಬಂದಿತ್ತು. ನೀವೇ ಇರಬಹುದು ಅಂತ ಅಂದ್ಕೊಂಡು ನಿಮಗೆ ಡಯಲ್ ಮಾಡಿದೆ, ಸಾರೀ......"

"ಪರವಾಗಿಲ್ಲ... ಸಾರೀ ಏನೂ ಬೇಡ. ಮನೇಲಿ ಇದ್ದೂ ಇದ್ದೂ ನಂಗೂ ಬೋರ್ ಆಗ್ತಿತ್ತು. ಅಂದ್ಹಾಗೇ ನನ್ನ ಮನೆ ಫೋನು ನಂಬರ್ರು ನಿಮಗೆ ಹೇಗೆ ಸಿಕ್ತು...?"

"ಹೇಗೆ ಸಿಕ್ತು ಅನ್ನೋದು ಮುಖ್ಯಾನಾ ಶಶಾಂಕ್... ನೀವು ಆಫೀಸ್ಗೆ ಎಷ್ಟು ಹೊತ್ತಿಗೆ ಹೊರಡ್ತೀರಿ....."

"ಆಫೀಸ್ಗೆ ಹೋಗ್ತಿಲ್ಲ ಸೀಮಾ... ಗೌತಮನ ದಯೆಯಿಂದ ನನ್ನ ಕೆಲಸ ಹೋಗಿದೆ. ನನ್ನನ್ನು ಸಸ್ಪೆಂಡ್ ಮಾಡಿದ್ದಾರೆ..."

"ಹೌದಾ! ರಿಯಲಿ ವೆರಿ ಸಾರೀ...ಮತ್ತೆ...?"

"ಮತ್ತೇ? ಮತ್ತೇನು...? ಹೀಗೇ ಫೋನು ಅಟೆಂಡ್ ಮಾಡ್ಕೊಂಡು ಕೂತಿದೀನಿ. ಈಗ ನೀವೊಬ್ರೇ ನನಗೆ ಫೋನು ಮಾಡೋದು. ರೇಣುಕಾನೂ ಇಲ್ಲವಲ್ಲ."

"ಬೇಸರ ಮಾಡ್ಕೋಬೇಡಿ ಶಶಾಂಕ್... ರೇಣುಕಾ ಇಲ್ಲ ಅನ್ನೋದು ಸತ್ಯ... ಆದರೆ, ಅವರನ್ನೇ ನೆನೆಸ್ತಾ ಕೂತ್ಕೊಂಡ್ರೆ ಡಿಪ್ರೆಸ್ ಆಗಿ ಹೋಗ್ತೀರಿ ಅಷ್ಟೇ...."

"ಡಿಪ್ರೆಷನ್ ಆಗದೇ ಇರುತ್ತಾ ಸೀಮಾ...? ರೇಣುಕಾಳನ್ನು ಕಳ್ಕೊಂಡೆ. ಕೆಲಸವೂ ಇಲ್ಲ. ನಾನ್ಹೇಗೆ ಚಿಯರ್ ಫುಲ್ ಆಗಿರುಕ್ಕೆ ಆಗುತ್ತೆ...? ಈಗ ನಂಗೆ ಯಾರೂ ಇಲ್ಲ. ಏನೂ ಇಲ್ಲ." ಅವನು ಅಳುವ ಧ್ವನಿಯಲ್ಲಿ ನುಡಿದಾಗ, ಅವಳು ಮತ್ತೆ ಸಮಾಧಾನವನ್ನು ಹೇಳಿದಳು.

"ಸಮಾಧಾನ ಮಾಡ್ಕೊಳ್ಳಿ ಶಶಾಂಕ್... ನಾನು ಇದೀನಿ. ನಿಮಗೆ ಏನೇ ಬೇಸರವಿದ್ದರೂ ನನಗೆ ಹೇಳಿ..."

"ನಿಮಗ್ಯಾಕೆ ಹೇಳ್ಬೇಕು? ಕೇಳಿಸ್ಕೊಂಡು ಏನ್ಮಾಡ್ತೀರಿ...? ನಟನೆಯ ಮಾತುಗಳನ್ನಾಡ್ತೀರಿ... ನನ್ನ ಬೇಸರವನ್ನು ಹೆಚ್ಚಿಸ್ತೀರಿ... ಎಲ್ಲಾದರೂ ದೇಶಾಂತರ ಹೊರಟು ಹೋಗೋಣ ಅಂತ ಅನ್ನಿಸ್ತಿದೆ... ಇದ್ದಕ್ಕಿದ್ದಂತೆ ಹೋದರೂ ಹೋದೆ."

"ಹಾಗೆ ಮಾಡ್ಬೇಡಿ ಶಶಾಂಕ್... ನಿಮ್ಮ ತಂದೆ ತಾಯಿಗೆ ಬೇಸರವಾಗಲ್ವಾ...? ನಿಮ್ಮ ಹಾಗೆ ನಾನೂ ಯೋಚಿಸಿದ್ದರೆ ನಾನು ಆತ್ಮಹತ್ಯೇನೇ ಮಾಡ್ಕೋತಿದ್ದೆ. ಹುಡುಗಿಯಾಗಿ ನಾನೇ ಧೈರ್ಯವನ್ನು ತಂದುಕೊಂಡು ಎಲ್ಲವನ್ನೂ ಎದುರಿಸುವ ನಿರ್ಧಾರವನ್ನು ಮಾಡಿದೀನಿ..."

"ಹಾಗಾದರೆ, ಗೌತಮನನ್ನು ಮರೆತು ಬಿಡ್ತೀರಾ? ಅದು ಅಷ್ಟು ಸುಲಭಾನಾ?"

"ಏನೋ ನಂಗೊತ್ತಿಲ್ಲ. ಆದರೆ ಗೌತಮನಿಲ್ಲದೇ ಇರಬಲ್ಲೆ ಅಂತ ಅನ್ಸುತ್ತೆ."

"ಹಾಗಾದ್ರೆ ನಾನೂ ರೇಣುಕಾ ಇಲ್ಲದೇ ಇರಬೇಕಾಗಿದೆಯಲ್ಲ... ಅದಕ್ಕೆ ಕಾರಣ ನಿಮ್ಮ ಗೌತಮ... ಅದಕ್ಕೇನಂತೀರಿ....?"

"ಆದಷ್ಟು ಬೇಗ ಮತ್ತೊಂದು ಹುಡುಗಿಯನ್ನು ನೋಡಿ ಮದುವೆಯಾಗಿ... ರೇಣುಕಾಳನ್ನು ಮರೆತು ಹೊಸ ಸಂಸಾರವನ್ನು ಪ್ರಾರಂಭಿಸಿ. ನಿಮ್ಮಂಥೋರಿಗೆ ಅದು ಸುಲಭ ಆಗುತ್ತೆ."

"ತಮಾಷೆ ಮಾಡ್ತಿದೀರಾ ಸೀಮಾ...? ನನಗೆ ಮದುವೆ...? ನನಗೆ ಯಾರು ಹೆಣ್ಣು ಕೊಡ್ತಾರೆ...? ನನ್ನನ್ನು ಯಾವ ಹೆಣ್ಣು ಮದುವೆಯಾಗ್ತಾಳೆ...? ನನ್ನ ಮೇಲೆ ಆರೋಪವಿದೆ. ಕೇಸು ನಡೆಯುತ್ತಿದೆ. ಇದೆಲ್ಲಾ ತಿಳಿದೂ ಇಂಥಾ ಜೋಕ್ ಮಾಡ್ತೀರಲ್ಲ...?"

"ಸಾರೀ... ಏನೋ ನನಗೆ ಅನ್ನಿಸಿದ್ದನ್ನು ಹೇಳ್ದೆ..."

"ನೀವು ಹುಡುಗೀರು, ಎಲ್ಲವನ್ನೂ ಸುಲಭವಾಗಿ ಹೇಳಿಬಿಡ್ತೀರಿ. ಈಗ ಇದು ನಿಮ್ಮ ಕಾಲ... ನಿಮಗೆ ಕೆಲಸ ಹೋಗಿಲ್ಲ... ಸಂಪಾದನೆ ಇದೆ... ನಿಮ್ಮ ತಂದೆ ತಾಯಿ ನಿಮಗಾಗಿ ಗಂಡನ್ನು ಹುಡುಕಿ ಮದುವೆ ಮಾಡ್ತಾರೆ... ಅವನೊಡನೆ ಸುಖ ಸಂಸಾರ ಮಾಡ್ತೀರಿ... ಒಂದೆರಡು ಮಕ್ಕಳೂ ಆಗುತ್ತೆ... ನಿಮಗೆ ಯಾವ ಕಹಿ ಹಿನ್ನೆಲೆ ಇರುವುದಿಲ್ಲ. ಇದ್ದರೂ ಅದನ್ನು ಮುಚ್ಚಿ ಹಾಕ್ತೀರಿ..." ಸೀಮಾ ಸರ್ರನೆ ಲೈನ್ ಕಟ್ ಮಾಡಿದಳು... ತಾನು ಶಶಾಂಕನೊಡನೆ ಇಷ್ಟು ಮಾತನಾಡ ಬಾರದಾಗಿತ್ತೆನಿಸಿತು. ಎಲ್ಲವನ್ನೂ ಮರೆಯಲು ತನ್ನಿಂದ ಸಾಧ್ಯವೇ.....? ಗೌತಮನ ಸ್ನೇಹ, ಪರಿಚಯ, ಪ್ರೀತಿ... ಹಾಗೇ ಆ ಮಿಲನ. ಅವನಿಗೆ ತನ್ನನ್ನು ತಾನು ಅರ್ಪಿಸಿಕೊಂಡಿದ್ದಳು... ಯಾಕೆ ಹಾಗೆ ಮಾಡಿದೆ? ಅವನಿಗಿಂತ ಹೆಚ್ಚು, ತಾನು ಅವನನ್ನು ಪ್ರೀತಿಸುತ್ತೇನೆಂದು ತೋರಿಸುವ ಸಲುವಾಗಿಯೇ...? ತಾನು ಅವನವ ಳೆಂದು ತಿಳಿಸುವುದಕ್ಕಾಗಿಯೇ...? ಈ ಉತ್ಕಟ ಪ್ರೀತಿಗೆ ತನಗೆ ಸಿಕ್ಕಿದ್ದು.....? ಆ ಘಳಿಗೆಯ ರೋಮಾಂಚನ! ಆಲಿಂಗನ! ಮತ್ತು ಬರಿಸುವ ಅನುಭವ.....ತಾನಾಗಿಯೇ ಅವನೊಡನೆ ಸುಖಿಸಿ, ತನ್ನ ಕನ್ಯತ್ವವನ್ನು ಕಳೆದುಕೊಂಡಿದ್ದಷ್ಟೇ ತನಗೆ ಸಿಕ್ಕಿದ್ದು... ತಾನೇಕೆ ಹೀಗೆ ಮಾಡಿದೆ...? ಗೌತಮನಿಗೆ ಅವನು ಕೇಳದೆಯೇ ತಾನು ಎಲ್ಲವನ್ನೂ ತಾನಾಗಿಯೇ ಕೊಟ್ಟಿದ್ದೆ... ಆದರೆ ಅವನು ಕೊಟ್ಟಿದ್ದು ಬರೀ ನೋವು. ನನ್ನ ಸ್ಥಿತಿ ಏನಾಗಬಹುದೆಂದು ಯೋಚಿಸದೇ ಎಲ್ಲೋ ತಲೆ ಮರೆಸಿಕೊಂಡಿರುವ ಹೇಡಿಯನ್ನು ಪ್ರೀತಿಸಿದೆನಲ್ಲ... ಎಲ್ಲವನ್ನೂ ಕಳೆದುಕೊಂಡೆನಲ್ಲ. ಇದು ನನ್ನನ್ನು ಒಳಗೊಳಗೇ ದಹಿಸುತ್ತಿದೆ. ಯಾರಿಗೂ ಹೇಳುವಂತಿಲ್ಲ....

ಶಶಾಂಕ ಕೆಲಸವನ್ನು ಕಳೆದುಕೊಂಡಿದ್ದಾನೆ... ನಿರಪರಾಧಿ ಅಂತ ಸಾಬೀತು ಆದರೆ ಮತ್ತೆ ಕೆಲಸ ಸಿಗುತ್ತದೆ...ಆದರೆ ತನಗೆ...? ತಾನು ಕಳೆದುಕೊಂಡಿದ್ದು ಮತ್ತೆ ಸಿಗುತ್ತದೆಯೇ...? ಈ ವಿಷಯ ಬೇರೆಯವರಿಗೆ ತಿಳಿದರೆ, ತನ್ನನ್ನು ಮದುವೆಯಾಗುತ್ತಾರೆಯೇ? ತಾನು ಅಪರಾಧಿ ಅಲ್ಲ. ಕೊಲೆ ಮಾಡಿಲ್ಲ... ಆದರೆ ತಾನು ಕಳಂಕಿನಿ. ಇದನ್ನು ಯಾರಿಗೆ ಹೇಳಲಿ...! ಹೇಗೆ ಅನುಭವಿಸಲಿ...?

"ಅಕ್ಕಾ, ಯಾಕೆ ಹೀಗೆ ಕೂತಿದೀಯಾ...? ನಿಂಗೆ ಹೊತ್ತಾಗಲಿಲ್ವಾ?" ತಂಗಿ ಎಚ್ಚರಿಸಿದಾಗ ಬೆಚ್ಚಿ ಬಿದ್ದು ಇತ್ತ ತಿರುಗಿದಳು. "ಯಾಕೆ ಕಣ್ಣುಗಳು ಕೆಂಪಾಗಿವೆ. ಅಳ್ತಾ ಇದ್ಯಾ...? ಅಮ್ಮಂಗೆ ಹೇಳ್ಲಾ...?"

"ನೀನು ಸುಮ್ಮನೆ ಹೋಗು..." ಆವಳ ಮೇಲೆ ರೇಗಿದಳು. ಅವಳು ಅಣಗಿಸುತ್ತ ಅತ್ತ ಹೋದಳು.

******

"ಯಾರ ಹತ್ತಿರಾನೋ ಮಾತಾಡ್ತಿದ್ದ ಹಾಗಿತ್ತು... ಯಾರು ಆಫೀಸ್ನೋರಾ...?" ಮಹಡಿಯಿಂದ ಇಳಿದು ಬಂದ ತಾಯಿ ಕೇಳಿದಾಗ ತಲೆ ಎತ್ತಿ ನೋಡಿದ.

"ಆಫೀಸ್ನೋರು ಅಲ್ಲ. ಅವರ್‍ಯಾಕೆ ಮಾಡ್ತಾರೆ...? ಸೀಮಾ... ಸೀಮಾ... ಮಾಡಿದ್ಲು."

"ಯಾರು? ಗೌತಮನ ಸ್ನೇಹಿತೇನಾ...? ನಿಂಗ್ಯಾಕೆ ಮಾಡಿದ್ಲು...? ಏನಂತೆ...?"

"ನನ್ನ ಕಷ್ಟ ಸುಖಾನ ವಿಚಾರಿಸೋಕೆ ಮಾಡಿದ್ಲು. ಈಗ ನಂಗೆ ಯಾರೂ ಇಲ್ಲವಲ್ಲ, ನಾನು ಒಂಟಿಯಲ್ವಾ?" ವ್ಯಂಗ್ಯವಾಗಿ ಹೇಳಿದ.

"ಅವಳೇನು ಮಹಾ ಸುಖಿಯಾಗಿದ್ದಾಳಾ...? ಅವನು ಹೇಳದೇ ಕೇಳದೇ ಓಡಿ ಹೋಗಿದಾನೆ. ಈಗ ಅವಳೂ ಒಂಟಿಯೇ... ಗೌತಮ ಸಿಕ್ಕಿದರೂ ಅವಳನ್ನೆಲ್ಲಿ ಮದುವೆಯಾಗೋಕೆ ಆಗುತ್ತೆ? ಜೈಲಿಗೆ ಹೋಗ್ತಾನೆ... ಎರಡೆರಡು ಅಪರಾಧ... ಜೀವಾವಧಿ ಶಿಕ್ಷೆ... ಅವನ ಸ್ನೇಹ ಮಾಡಿದ್ದಕ್ಕೆ ಇವಳಿಗೂ ಶಿಕ್ಷೆ."

"ಸುಮ್ಮಿರಮ್ಮ...ಇದರಲ್ಲಿ ಅವಳ ತಪ್ಪೇನಿದೆ?"

"ನಿನ್ನದೂ ತಪ್ಪಿರಲಿಲ್ಲ. ಈಗ ನೀನು ಅನುಭವಿಸ್ತಾ ಇಲ್ವಾ...? ಕೆಲಸಕ್ಕೂ ಹೋಗಿಲ್ಲ. ಮುಂದೆ ಹೇಗೆ ಅಂತ...? ನಾಲ್ಕು ದಿನ ನಿನ್ನ ಅಕ್ಕನ ಮನೆಗೆ ಹೋಗು. ಅವಳ ಮಕ್ಕಳ ಜೊತೆ ಕಾಲ ಹೋಗುತ್ತೆ. ಮನಸ್ಸಿನ ಬೇಸರವೂ ಕಳೆಯುತ್ತೆ."

"ಇಲ್ಲ, ನಾನೆಲ್ಲಿಗೂ ಹೋಗಲ್ಲ. ಅಲ್ಲದೇ ನಾನು ಹಾಗೆಲ್ಲಾ ಊರನ್ನು ಬಿಟ್ಟು ಹೋಗುವಂತಿಲ್ಲ. ಅವಳನ್ನೇ ಕರೆಸು....."

"ಮಕ್ಕಳಿಗೆ ಸ್ಕೂಲಿಗೆ ರಜ ಇದೆಯೋ ಇಲ್ಲವೋ? ರಜ ಸಿಕ್ಕಾಗ ಬರ್ತಾಳೆ ಬಿಡು."

"ಬರ್‍ಲಿ ಬಿಡು, ನಿಧಾನವಾಗಿ... ಸಧ್ಯಕ್ಕೆ ನಂಗೆ ಯಾರೂ ಬೇಕಿಲ್ಲ."

"ಒಂಟಿ ಆಗಿ ಕೂತಿರಬೇಡ್ವೋ... ನಿನ್ನ ಅಪ್ಪನೂ ಅದನ್ನೇ ಹೇಳ್ತಾರೆ."

"ನನಗೆ ಯಾರ ಉಪದೇಶವೂ ಬೇಕಾಗಿಲ್ಲ. ನನ್ನ ಪಾಡಿಗೆ ನನ್ನನ್ನು ಬಿಡಿ." ಅವನು ಅಲ್ಲಿಂದ ಎದ್ದು ಹೋಗಿದ್ದ. ಮತ್ತೆ ಫೋನು ರಿಂಗಾಗಿತ್ತು. ಅವನು ಹೊರಕ್ಕೆ ಬರಲಿಲ್ಲ. ಆಕೆಯೇ ಎತ್ತಿಕೊಂಡು 'ಹಲೋ' ಎಂದಾಗ ಲೈನ್ ಕಟ್ ಆಗಿತ್ತು.

ಮತ್ತೆರಡು ಬಾರಿ ರಿಂಗಾದಾಗ ಆಕೆ ಎತ್ತಿಕೊಂಡಳು. ಆದರೆ ಅತ್ತಲಿಂದ ಯಾರ ಧ್ವನಿಯೂ ಇರಲಿಲ್ಲ. "ಯಾರೋ ಪದೇ ಪದೇ ರಿಂಗ್ ಮಾಡ್ತಾರೆ... ಮಾತಾಡಕ್ಕೆ ಇಷ್ಟವಿಲ್ಲ, ಕಟ್ ಮಾಡ್ತಾರೆ. ಈ ಸಾರಿ ರಿಂಗಾದಾಗ ನಾನು ಎತ್ತಲ್ಲ. ನೀನೇ ತಗೋ" ಎಂದು ಮಗನಿಗೆ ಹೇಳಿ ತನ್ನ ಪಾಡಿಗೆ ತಾನು ಹೊರಟು

ಹೋಗಿದ್ದಳು.

ಮತ್ತೆ ಕೆಲವು ನಿಮಿಷಗಳ ನಂತರ ಫೋನು ರಿಂಗಾಗಿತ್ತು. ಶಶಾಂಕನೇ ಎದ್ದು ಬಂದು ರಿಸೀವರ್ ಎತ್ತಿಕೊಂಡು 'ಹಲೋ' ಎಂದ. ಅತ್ತಲಿಂದ ಸೀಮಾಳ ಧ್ವನಿ ಕೇಳಿಸಿತ್ತು. ತಾಯಿ ಮರೆಯಲ್ಲಿ ನಿಂತು ಕೇಳಿಸಿಕೊಳ್ಳುತ್ತಿರಬಹುದೇ ಎಂಬ ಅನುಮಾನ ಅವನಿಗೆ ಬಂದಿತ್ತು.

"ನಾನು ಈಗಲೇ ಬರ್ತೀನಿ. ನಾನು ಬರೋವರ್ರೂ ದಯವಿಟ್ಟು ಈ ವಿಷಯವನ್ನು ಬೇರೆ ಯಾರಿಗೂ ಹೇಳ್ಬೇಡಿ... ತಕ್ಷಣವೇ ಬರ್ತೀನಿ" ಎಂದು ಮತ್ತೊಮ್ಮೆ ಹೇಳಿ ರಿಸೀವರನ್ನಿಟ್ಟ. ತಾಯಿ ಮರೆಯಿಂದ ಆಚೆ ಬಂದಳು. ಅವಳು ಕೇಳದೆಯೇ ಇವನು ಉತ್ತರ ಕೊಟ್ಟ.

"ಗೌತಮ ಎಲ್ಲಿದ್ದಾನೆ ಎಂದು ಪತ್ತೆಯಾಗಿದ್ದಾನಂತೆ. ನಾನು ಈಗಲೇ ಹೋಗಿ ಮಾತಾಡ್ಕೊಂಡು ಬರ್ತೀನಿ" ಎಂದು ಹೇಳಿ ಹೊರಡಲು ಸಿದ್ಧನಾದ.

"ಪೋಲೀಸ್ ಇನ್ಸ್‌ಪೆಕ್ಟರ್ ಮಾಡಿದ್ರಾ...? ಒಬ್ಬನೇ ಹೋಗ್ಬೇಡ್ವೋ... ಅಪ್ಪನ್ನೂ ಕರ್ಕೊಂಡು ಹೋಗು..."

"ನಾನೇನು ಮಗೂನ...? ಒಬ್ಬನೇ ಹೋಗ್ತೀನಿ... ಅಲ್ಲಿ ಅಪ್ಪನ ಅಗತ್ಯ ಬಿದ್ದರೆ ಫೋನು ಮಾಡ್ತೀನಿ, ಅಪ್ಪನ್ನ ಕಳಿಸು" ಎಂದು ಹೇಳಿ, ಸರಸರನೆ ಸಿದ್ಧವಾಗಿ ಮನೆಯಿಂದ ಹೊರಟೇ ಬಿಟ್ಟ.

"ಬೇಗ ಬಂದು ಬಿಡೋ. ಹೆಚ್ಚು ಹೊತ್ತು ಪೋಲೀಸ್ ಸ್ಟೇಷನ್‌ನಲ್ಲಿ ಕೂತ್ಕೋಬೇಡ" ತಾಯಿಯ ಆತಂಕ ಅವನಿಗೆ ಅರ್ಥವಾಗಿತ್ತು...ಆದರೆ ಏನನ್ನೂ ಹೇಳಲಿಲ್ಲ.

******

ಸೀದಾ ಸೀಮಾ ಹೇಳಿದ್ದ ಸ್ಥಳಕ್ಕೆ ಬಂದ. ಅವನು, ಅವಳು ಕಾಯುತ್ತಿದ್ದುದನ್ನು ಕಂಡು ಕೈ ಬೀಸಿದ. ಅವಳು ಕಾರಿನ ಬಳಿಗೆ ಬಂದಳು...

"ಇಲ್ಲಿ ಮಾತಾಡೋದು ಬೇಡಾ... ಬೇರೆಲ್ಲಿಗಾದರೂ ಹೋಗೋಣ." ಅವಳೇ ಹೇಳಿದಳು. ಅವನು ಪಕ್ಕದ ಬಾಗಿಲನ್ನು ತೆರೆದ. ಅವಳು ಕಾರನ್ನೇರಿದಳು.

"ಹ್ಞೂಂ ಎಲ್ಲಿಗೆ ಹೋಗೋಣ ಹೇಳಿ..." ಅವಳ ಕಡೆ ನೋಡಿ ಮುಗುಳ್ನಕ್ಕು ಕೇಳಿದ.

"ಎಲ್ಲಿಗಾದ್ರೂ ಸರಿ...ರಷ್ ಇಲ್ಲದ ಜಾಗ ಆದ್ರೆ ಸರಿ..." ಅವನು ಮತ್ತೆ ವಿಸ್ಮಯದಿಂದ ಅವಳ ಕಡೆ ನೋಡಿದ..,"ಯಾಕ್ರೀ ಭಯಾನಾ? ನಾನು ಏನಾದ್ರೂ ಮಾಡಿ ಬಿಡ್ತೀನಿ ಅಂತ...?" ಅವಳು ನಗುತ್ತಾ ಕೇಳಿದಾಗ, ಇಲ್ಲ ಎನ್ನುವಂತೆ ತಲೆಯಾಡಿಸಿದ.

ಕಾರು ಸ್ವಲ್ಪ ದೂರ ಓಡಿದ ನಂತರ ಒಂದು ಮರದ ಕೆಳಗೆ ನಿಂತಿತು. ಅಲ್ಲಿ ಹೆಚ್ಚು ಜನ ಸಂಚಾರ ಇರಲಿಲ್ಲ. ಸೀಮಾ ಸುತ್ತಲೂ ಕಣ್ಣು ಹಾಯಿಸಿದಳು. "ಎಷ್ಟು ಪ್ರಶಾಂತವಾಗಿದೆ..." ಎಂದು ಹೇಳಿ ಕೆಳಗಿಳಿದಳು. ಅವನೂ ಕೆಳಗಿಳಿದ.

"ಅಲ್ಲಿ ಕಲ್ಲು ಬೆಂಚಿದೆ. ಕೂತ್ಕೋಳ್ಳೋಣ ಬನ್ನಿ" ಎಂದು ಹೇಳಿ ಅವನು ಮುಂದೆ ಮುಂದೆ ನಡೆದ. ಅವಳೂ ಹಿಂಬಾಲಿಸಿದಳು. ಇಬ್ಬರೂ ಕಲ್ಲು ಬೆಂಚಿನ ಮೇಲೆ ಕುಳಿತರು.

"ಈಗ ಹೇಳಿ ಸೀಮಾ... ಫೋನು ಮಾಡಿದ್ರಲ್ಲ, ಗೌತಮ ಎಲ್ಲಿದ್ದಾನಂತೆ."

"ಹೈದರಾಬಾದಿನಲ್ಲಿ, ಒಂದು ಹೋಟೆಲ್ಲಿನಲ್ಲಿದ್ದಾನಂತೆ. ಹುಷಾರಿಲ್ವಂತೆ, ಜ್ವರ ಬಂದು ಮಲಗಿಬಿಟ್ಟಿದ್ದಾನಂತೆ."

"ಸುಳ್ಳು ಹೇಳ್ತಿರಬಹುದಾ...?"

"ಏನೋ ಗೊತ್ತಿಲ್ಲ. ನನ್ನನ್ನು 'ನೀನು ಬಾ.. ನಂಗೆ ನಿನ್ನ ಅವಶ್ಯಕತೆ ಇದೆ... ಬರದಿದ್ರೆ ಸತ್ತೇ ಹೋಗ್ತೀನಿ' ಅಂತಂದ."

"ಎಷ್ಟು ಧೈರ್ಯ ಅವನಿಗೆ? ನೀವು ಏನಂದ್ರೀ...?"

"ನಾನು ಹೇಗೆ ಹೋಗಕ್ಕೆ ಆಗತ್ತೆ ಶಶಾಂಕ್....? ಆದರೆ ಅವನನ್ನು ಒಂದು ಸಲ ನೋಡ್ಬೇಕು, ನೀವು ನನ್ನ ಜೊತೆ ಬರ್ತೀರಾ?"

"ಯಾರೂ ಹೋಗೋದು ಬೇಡ. ಬರೋಕೆ ಆಗಲ್ಲ ಅಂತ ಹೇಳ್ಬಿಡಿ... ಮೊದಲು ಅವನೇ ಬಂದು ಪೋಲೀಸರಿಗೆ ಸರಂಡರ್ ಆಗಲಿ. ಇಲ್ಲದಿದ್ರೆ ಪೋಲೀಸರಿಗೆ ತಿಳಿಸ್ತೀನಿ ಅಂತ ಹೆದರಿಸಿ..."

"ಪೋಲೀಸರಿಗೆ ಏನಾದ್ರೂ ತಿಳಿಸಿದ್ರೆ ಸೂಯಿಸೈಡ್ ಮಾಡ್ಕೋತೀನಿ. ಅದಕ್ಕೆ ನೀನೇ ಕಾರಣ ಅಂತ ನೋಟ್ ಬರೆದಿಡ್ತೀನಿ ಅಂತ ನನ್ನನ್ನೇ ಹೆದರಿಸಿದ."

"ಅದಕ್ಕೆಲ್ಲ ಹೆದರೋಕ್ಕೆ ಆಗುತ್ತಾ ಸೀಮಾ... ಅವನ ಅಡ್ರೆಸ್ ಹೇಳಿ. ಈಗಲೇ ಪೋಲೀಸರಿಗೆ ಇನ್‌ಫಾರ್ಮ್ ಮಾಡೋಣ..."

"ಹುಷಾರಿಲ್ಲ ಅಂತ ಹೇಳಿದಾನೆ. ಪೋಲೀಸರು ಹೊಡೆದು ಬಡಿದು ಅವನು ಸತ್ತೇ ಹೋದರೆ...? ಅವನ ತಂದೆ ತಾಯಿ ಗತಿ?"

"ಅವನ ತಂದೆ-ತಾಯಿ... ಅನ್ನುತ್ತಲೇ ಒಂದು ವಿಷಯ ನೆನಪಿಗೆ ಬಂತು. ಅವರು ಪೇಪರ್ನಲ್ಲಿ ಪ್ರಕಟಣೆ ಹಾಕಿಸಿದ್ದಾರೆ...,'ನಿನ್ನ ತಪ್ಪು ಏನೂ ಇಲ್ಲ ಅಂತ ಸಾಬೀತು ಮಾಡ್ತೀನಿ... ಈಗಲೇ ಬಾ....' ಅಂತ ಫೋಟೋ ಸಮೇತ ಹಾಕ್ಸಿದಾರೆ... ಆ ವಿಷಯವನ್ನು ಅವನಿಗೆ ಹೇಳಿ... ಅದರಲ್ಲಿ ಅವನ ತಾಯಿಯ ಫೋನು ನಂಬರ್ರೂ ಸಹ ಇದೆ... ಅವರಿಗೆ ಫೋನು ಮಾಡಲಿ... ಬೇಗ ಬರಲಿ... ಇನ್ನು ಅವನ ಪಾಡು. ಅದಕ್ಕೆ ನೀವ್ಯಾಕೆ ಹೆದರಬೇಕು...?"

"ಈ ಹಗರಣದಲ್ಲಿ ನನ್ನ ಹೆಸರೂ ಬಂದರೆ ಅಂತ ಭಯ... ನನಗೂ ಕೆಲಸ ಹೋಗುತ್ತೆ... ಹೆಸರೂ ಕೆಡುತ್ತೆ"

"ಹಾಗೆಲ್ಲಾ ಏನೂ ಆಗೋಲ್ಲ. ಹಾಗಾಗದಂತೆ ನಾನು ನೋಡ್ಕೋತೀನಿ. ಮೊದಲು ಅವನ ಭಯದಿಂದ ಹೊರಬನ್ನಿ...ಆಮೇಲೆ ನೋಡ್ತಿರಿ..."

ಇದ್ದಕ್ಕಿದ್ದಂತೆ ಅವಳು ಕಿರುಚಿದಳು..."ಹ್ಹಾಂ... ಏನೋ ಕಚ್ತು..." ಅಂತ ಹೇಳಿ ಎದ್ದು ನಿಂತು ಕತ್ತಿನ ಮೇಲೆ ಕೈಯಾಡಿಸಿದಳು... ಹೊದೆದಿದ್ದ ದುಪ್ಪಟ್ಟಾವನ್ನು ಕೊಡವಿದಳು. ಕೂದಲನ್ನು ಒದರಿದಳು... ಏನು ಏನು ಅನ್ನುತ್ತಾ ಅವನೂ ಕೊರಳ ಮೇಲೆ ಕೈಯಾಡಿಸಿದ. ಏನೂ ಇದ್ದಂತೆ ಕಾಣಲಿಲ್ಲ. "ಉರಿ... ಉರಿ..." ಎಂದು ಚಡಪಡಿಸಿದಳು.

"ಕಾರ್ನಲ್ಲಿ ನೀರಿದೆ... ನೀರಲ್ಲಿ ತೊಳ್ಕೊಳ್ಳಿ... ಉರಿ ಕಡಿಮೆ ಆಗುತ್ತೆ." ಎಂದು ಹೇಳಿ, ಅವಳ ಕೈ ಹಿಡಿದು ಅವಳನ್ನು ಕಾರಿನ ಬಳಿಗೆ ಕರೆತಂದ. ನೀರಿನ ಬಾಟಲನ್ನು ತೆಗೆದು ಅವಳ ಕೈಗೆ ನೀರನ್ನು ಹಾಕಿದ. ಅವಳು ಕೊರಳಿನಲ್ಲಿ ಉರಿಯುತ್ತಿದ್ದ ಜಾಗಕ್ಕೆ ಹಾಕಿಕೊಂಡು ತಿಕ್ಕಿದಳು. ಸ್ವಲ್ಪ ಹಿತವೆನಿಸಿದರೂ ಉರಿ ಕಡಿಮೆ ಆಗಲಿಲ್ಲ.

"ಬನ್ನಿ, ಡಾಕ್ಟರ್ ಬಳಿಗೆ ಹೋಗೋಣ... ಅವರು ನೋಡಿ, ಏನಾದ್ರೂ ರೆಮಿಡಿ ಹೇಳಬಹುದು... " ಎನ್ನುತ್ತಾ ಕಾರಿನ ಬಾಗಿಲನ್ನು ತೆರೆದ. ಅವಳು 'ಹಾಹೂ ಹಾಹೂ' ಎಂದು ಹೇಳುತ್ತಾ ಕಾರನ್ನು ಏರಿದಳು... ಹಿಂತಿರುಗಿ ಬರುವ ರಸ್ತೆಯಲ್ಲಿ ಮೊದಲು ಕಂಡ ಕ್ಲಿನಿಕ್ ಬಳಿ ಕಾರನ್ನು ನಿಲ್ಲಿಸಿದ. ಅವಳನ್ನು ಇಳಿಸಿ ಕೊಂಡು, ಕ್ಲಿನಿಕ್‌ನೊಳಕ್ಕೆ ಬಂದ...

"ಸ್ವಲ್ಪ ಎಮರ್ಜನ್ಸಿ... ಏನೋ ಕಚ್ಚಿದೆ... ಸ್ವಲ್ಪ ತೋರಿಸ್ಬೇಕು." ಅಲ್ಲಿ ಕುಳಿತಿದ್ದ ಪೇಷಂಟ್ಸ್‌ಗಳಿಗೆ ಹೇಳಿದ... ಅವರುಗಳು ಸೀಮಾಳ ಕಿವುಚಿದ ಮುಖವನ್ನು ಕಂಡು ಒಪ್ಪಿಗೆ ಕೊಟ್ಟರು. ಶಶಾಂಕ ಅವಳನ್ನು ಎಳೆದುಕೊಂಡು ಒಳಗಿನ ರೂಮಿಗೆ ಬಂದು ನಡೆದುದೆಲ್ಲ ಹೇಳಿದ.

"ನೀವು ಹೊರಗೆ ಇರಿ. ನಾನು ಎಕ್ಸಾಮ್ ಮಾಡ್ತೀನಿ" ಎಂದು ಹೇಳಿ ಅವನನ್ನು ಹೊರಕ್ಕೆ ಕಳುಹಿಸಿ, ಅವಳಿಗೆ ಎಲ್ಲಿ ಉರಿಯುತ್ತಿತ್ತೋ ಆ ಭಾಗವನ್ನು ಪರೀಕ್ಷಿಸಿದರು. "ಯಾವುದೋ ಇನ್‌ಸೆಕ್ಟ್ ಬೈಟ್ ಅಷ್ಟೇ. ಹೆದರಬೇಕಾಗಿಲ್ಲ. ಸ್ವಲ್ಪ ಕೆಂಪಾಗಿದೆ, ಉರಿ ಕಡಿಮೆ ಆಗಲು ಲೋಷನ್ ಬರೆದು ಕೊಡ್ತೀನಿ. ಹಾಗೇ ಅಲರ್ಜಿಯಾಗದಂತೆ, ಮಾತ್ರೆಗಳನ್ನು ಬರೆದುಕೊಡ್ತೀನಿ. ಕಡಿಮೆ ಆಗುತ್ತದೆ. ಡೋಂಟ್ ವರೀ..."

"ಕಡಿಮೆ ಆಗದಿದ್ರೆ... ಏನು ಹುಳುವೋ.. ಎಂಥದೋ ಗೊತ್ತಾಗ್ಲಿಲ್ಲ"

"ಕಡಿಮೆ ಆಗದಿದ್ರೆ ಮತ್ತೆ ನಾಳೆ ಬನ್ನಿ.. ಬ್ಲಡ್ ಟೆಸ್ಟ್ ಮಾಡಿಸಿ... ಅಷ್ಟೇ...." ಆತ ನಗುತ್ತಾ ಹೇಳಿದಾಗ ಅವಳೂ ಕಿರುನಗೆಯನ್ನು ನಕ್ಕಳು.., "ಓ..ಕೆ.. ಗಾಬರಿ ಯಾಗಬೇಡಿ... ಪ್ರೆಗ್ನೆಂಟ್ ಆಗಿದ್ರೆ, ಈ ಮಾತ್ರೆಯನ್ನು ತಗೋಬೇಡಿ... ಬರೀ ಲೋಷನ್ ಸಾಕು...ಮೂರು ನಾಲ್ಕು ಬಾರಿ ಅಪ್ಲೈ ಮಾಡುವಷ್ಟರಲ್ಲಿ ಉರಿ ಕಡಿಮೆ ಆಗುತ್ತೆ..." ಎಂದು ಆತ ಹೇಳಿದಾಗ, ಅವಳು ಕೆಂಪಾದಳು...

'ನಾನು ಪ್ರೆಗ್ನೆಂಟ್! ಇವನು ನನ್ನ ಗಂಡ ಅಂತ ಭಾವಿಸಿರಬಹುದು... ನಾನು ಪ್ರೆಗ್ನಂಟೂ ಅಲ್ಲ... ಇವನು ನನ್ನ ಗಂಡನೂ ಅಲ್ಲ ಅಂತ ಇವರಿಗ್ಯಾಕೆ ಹೇಳ್ಬೇಕು. ಏನಾದರೂ ತಿಳಿದ್ಕೊಳ್ಳಲಿ' ಅಂತ ತನಗೆ ತಾನೇ ಹೇಳಿಕೊಂಡು, ಥ್ಯಾಂಕ್ಸ್ ಹೇಳಿ, ಫೀಸನ್ನು ಕೊಟ್ಟು ಪ್ರಿಸ್ಕ್ರಿಪ್ಷನ್ ಹಿಡಿದು ಹೊರಬಂದಳು. ಆತಂಕದಿಂದ ಕಾಯುತ್ತಾ ನಿಂತಿದ್ದವನನ್ನು ಕಂಡು ಮುಗುಳ್ನಗು ಮೂಡಿತು... ಅವನೂ ನಗೆಯನ್ನು ಸೂಸಿದ. ಇಬ್ಬರೂ ಹೊರ ಬಂದರು.

"ಉರಿ ಕಡಿಮೆಯಾಯ್ತು...! ಗೆಲುವಾಗಿದೀರಿ... ಡಾಕ್ಟರು ಏನಂದ್ರು...?"

"ಅವರಾ? ಏನೇನೋ ಕೇಳಿದ್ರು... ಲೋಷನ್ ಬರೆದು ಕೊಟ್ಟಿದ್ದಾರೆ... ಹಾಗೇ ಅಲರ್ಜಿ ಕಡಿಮೆ ಆಗಕ್ಕೆ ಮಾತ್ರೇನ ಬರೆದುಕೊಟ್ಟಿದ್ದಾರೆ... ಆದರೆ ನಾನು ಮಾತ್ರೇನ ತೆಗೆದುಕೊಳ್ಳಬೇಕಾಗಿಲ್ಲ ಅಂತಂದ್ರು..."

"ಮತ್ತೆ ಬರೆದು ಕೊಟ್ಟಿದಾದ್ರೂ ಯಾಕೆ...? ಹೋಗ್ಲಿ ಆ ಪ್ರಿಸ್ಕ್ರಿಪ್ಷನ್‌ನ್ನು ಕೊಡಿ. ನಾನು ಮೆಡಿಸಿನ್ ತಂದುಕೊಡ್ತೀನಿ" ಎಂದು ಹೇಳಿ, ಅವಳ ಕೈಯಿಂದ ಚೀಟಿಯನ್ನೆತ್ತಿಕೊಂಡ.

"ನೀವು ಕಾರ್ನಲ್ಲಿ ಕುಳಿತಿರಿ... ನಾನು ಬೇಗ ಬಂದು ಬಿಡ್ತೀನಿ" ಎಂದು ಹೇಳಿ ಕಾರಿನ ಬಾಗಿಲನ್ನು ತೆರೆದ... ತಾನು ಮೆಡಿಕಲ್ ಷಾಪ್ ಕಡೆ ನಡೆದ. ಅವಳು, ಡಾಕ್ಟರು ಯಾಕೆ ಹಾಗೆ ಹೇಳಿದರು ಅನ್ನುವುದನ್ನೇ ಚಿಂತಿಸುತ್ತಾ ಕುಳಿತಿದ್ದಳು. ಅವನು ಮೆಡಿಕಲ್ ಷಾಪ್‌ನಿಂದ ಹಿಂತಿರುಗಿದ. ಲೋಷನ್ನಿನ ಬಾಟಲಿಯನ್ನು ಅವಳ ಕೈಗಿತ್ತ. "ಇದನ್ನು ಉರಿಯುತ್ತಿರುವ ಜಾಗಕ್ಕೆ ಹಚ್ಕೊಳ್ಳಿ... ತಣ್ಣಗಾಗುತ್ತೆ."

ಅವಳು ಅಂಗೈಗೆ ಲೋಷನ್‌ನ್ನು ಹಾಕಿಕೊಂಡು ಉರಿಯುತ್ತಿರುವ ಭಾಗಕ್ಕೆ ಹಾಕಿಕೊಳ್ಳಲು ಕಷ್ಟ ಪಡುತ್ತಿರುವುದನ್ನು ಕಂಡು ಅವನಿಗೆ ಮೋಜೆನಿಸಿತು. ಅವಳು ಹೊದೆದಿದ್ದ ದುಪ್ಪಟ್ಟಾ ಹಾಗೂ ಅವಳ ತಲೆಗೂದಲು ಅಡ್ಡ ಬರುತ್ತಿತ್ತು. "ನಾನು ಹೆಲ್ಪ್ ಮಾಡಲಾ?" ಕೇಳಿದ....

"ಪ್ಲೀಸ್... ಈ ಕೂದಲನ್ನು ಸೇರಿಸಿ ಹಿಡಿದುಕೊಳ್ಳಿ... ಹಾಗೇ ಈ ದುಪ್ಪಟ್ಟಾವನ್ನು ಸ್ವಲ್ಪ ಸರಿಸಿ..." ಅವನು ವಿಧೇಯನಂತೆ ಹಾಗೆಯೇ ಮಾಡಿದ. ಕೂದಲನ್ನು ಸರಿಸುವಾಗ ಅವನ ಕೈ ಬೆರಳುಗಳು ಅವಳ ಕೊರಳನ್ನು ತಾಕಿದವು. ದುಪ್ಪಟ್ಟವನ್ನು

ಸರಿಸುವಾಗ ಅವನ ಭುಜಗಳಿಗೆ ಕೈ ಸೋಕಿತು... ಮೈ ಪುಳಕಗೊಂಡಿತು. ಮನ ಕುಣಿಯಿತು. ತನಗೆ ಎಷ್ಟು ಸಮೀಪದಲ್ಲಿದ್ದಾಳೆ. ಇವಳ ಮೈ ಬಿಸಿ ತನ್ನ ದೇಹವನ್ನು ಕಾಯಿಸುತ್ತಿದೆ... ಅವಳನ್ನು ಹಾಗೆಯೇ ತಬ್ಬಿಕೊಂಡರೆ ಹೇಗೆ? ಅಂತ ಅನ್ನಿಸಿದಾಗ ಬೆಚ್ಚಿದ.

"ಛೆ... ಇದೆಂಥಾ ಆಲೋಚನೆ ತನ್ನದು? ತಾನು ರೇಣುಕಾಳೊಡನೆ ಓಡಾಡುವಾಗ ಎಂದೂ ತಾನು ಹೀಗೆ ಯೋಚಿಸಿರಲಿಲ್ಲ...ಇಂದು ತನಗೇಕೆ ಇಂಥಾ ಆಲೋಚನೆ...? ಸೀಮಾ ತನ್ನ ಗರ್ಲ್‌ಫ್ರೆಂಡ್ ಅಲ್ಲ... ಗೌತಮನ ಗರ್ಲ್‌ಫ್ರೆಂಡ್! ಆ ಯೋಚನೆ ಬಂದ ಕೂಡಲೇ ಅವನ ಮುಷ್ಠಿ ಬಿಗಿಯಾಯಿತು. 'ಇದೆಂಥಾ ಸುಘಳಿಗೆ...! ಇವಳು ಗೌತಮನ ಪ್ರೇಯಸಿ... ಗೌತಮ ನನ್ನ ಪತ್ನಿಯಾಗುವವಳನ್ನು ರೇಪ್ ಮಾಡಿ ಕೊಲೆ ಮಾಡಿರುವವನಲ್ಲವೇ...? ಹಾಗೇ ಈಗ ನಾನು ಮಾಡಿದರೆ...! ಕಾರಿನಲ್ಲಿ ಇವಳನ್ನು ಬಲಾತ್ಕರಿಸಿ ನಂತರ ದೂರ ಎಲ್ಲಾದರೂ ಎಸೆದು ಬಿಟ್ಟರೆ...! ಸೇಡಿಗೆ ಸೇಡು...' ಹಲ್ಲುಗಳನ್ನು ಕಡಿದ...

ಅವಳು ಬೆಚ್ಚಿ ಹಿಂತಿರುಗಿದಳು. ಇವನು ಎಚ್ಚೆತ್ತ..., "ಏನು ನೋಡ್ತಿದೀರಿ ಶಶಾಂಕ್?" ಅವಳು ತುಸು ನಾಚಿದಂತೆ ಅನ್ನಿಸಿತು. ಅವನು ಸ್ಥಿಮಿತಕ್ಕೆ ಬಂದ.

"ಏನಿಲ್ಲ... ಉರಿ ಕಡಿಮೆ ಆಯ್ತಾ?"

"ಇನ್ನೂ ಇಲ್ಲ. ನನ್ನ ಹ್ಯಾಂಡ್ ಬ್ಯಾಗ್‌ನಲ್ಲಿ ಟಿಷ್ಯೂ ಇದೆ... ತೆಕ್ಕೊಡ್ತೀರಾ?" ಅವಳು ರಾಗವಾಗಿ ಉಲಿದಾಗ ಇವನ ಚಿತ್ತ ಹ್ಯಾಂಡ್ ಬ್ಯಾಗ್‌ನತ್ತ ತಿರುಗಿತು.

ಎರಡು ಟಿಷ್ಯು ನ್ಯಾಪ್‌ಕಿನ್‌ಗಳನ್ನು ತೆಗೆದುಕೊಟ್ಟ. "ಥ್ಯಾಂಕ್ಸ್ ಶಶಾಂಕ್.." ಕೈ ಬೆರಳುಗಳನ್ನು ಒರೆಸುತ್ತ ನುಡಿದಳು. "ಏನು ಕಚ್ಚಿ ಬಿಡ್ತೋ ಅಂತ ಹೆದರಿಕೆ ಆಗಿತ್ತು ... ಹಾವೋ ಚೇಳೋ ಕಚ್ಚಿದಿದ್ರೆ ಇಷ್ಟು ಹೊತ್ತಿಗೆ ನನ್ನ ಗತಿ ಮುಗಿದಿರುತ್ತಿತ್ತು."

"ಸಾರೀ... ಕಲ್ಲು ಬೆಂಚಿನ ಬಳಿಗೆ ಕರೆದೊಯ್ದವನು ನಾನು... ಕತ್ತಲೆ ಬೇರೆ ಇತ್ತು... ರಿಯಲಿ ಸಾರೀ..."

"ದಟ್ಸ್ ಓಕೆ, ಬಿಡಿ. ನನ್ನ ಹಣೇಲಿ ಈ ದಿನ ಹೀಗಾಗುವುದಿತ್ತು... ನನ್ನಿಂದ ನಿಮಗೆ ತೊಂದರೆ ಆಯ್ತು. ಮೆಡಿಕಲ್ ಬಿಲ್ ಎಷ್ಟಾಯ್ತು?"

"ಎಷ್ಟೋ ನೆನಪಿಲ್ಲ. ನೀವೇನೂ ಕೊಡಬೇಕಾಗಿಲ್ಲ."

"ಅದು ಸರಿಯಲ್ಲ... ಪಿಲ್ಸ್ ಎಲ್ಲಿ...?"

"ಪಿಲ್ಸ್ ತರಲಿಲ್ಲ... ನೀವು ತಗೋತೀರೋ ಇಲ್ಲವೋ ಅಂತ ತರಲಿಲ್ಲ."

"ಯಾಕೆ...? ಯಾಕೆ ಹಾಗೆ ಕೇಳ್ತಿದೀರಿ?"

"ಅದು ತುಂಬಾ ಸ್ಟ್ರಾಂಗ್ ಅಂತೆ. ಲೇಡೀಸ್‌ಗೆ ಒಳ್ಳೆಯದಲ್ಲ ಅಂತ ಮೆಡಿಕಲ್ ಷಾಪ್‌ನವನು ಹೇಳಿದ... ಇದನ್ಯಾಕೆ ಬರೆದು ಕೊಟ್ಟರು ಡಾಕ್ಟರು...?" ಅವಳು

ಏನನ್ನೋ ಚಿಂತಿಸುತ್ತಿದ್ದಳು. ಅದಕ್ಕೆ ಉತ್ತರಿಸಲಿಲ್ಲ... "ವಾಪಸ್ಸು ಹೋಗೋಣ್ವಾ?" ಕೇಳಿದ.

ಅವಳು ಬೆಚ್ಚಿ "ಹ್ಞೂಂ..." ಎಂದಳು.

"ಏನು ಯೋಚಿಸ್ತಿದೀರಿ? ಗೌತಮನ ಬಗ್ಗೆ ಯೋಚಿಸ್ತಿದ್ರಾ?" ಕೇಳಿದ. ಅವಳ ಕದಪುಗಳು ಬಿಸಿಯಾದವು. ಅದನ್ನು ಅವನು ಕಾಣಲಿಲ್ಲ.

"ಹೌದು, ಈ ಗಲಾಟೆಯಲ್ಲಿ ಅವನ ವಿಷಯಾನ ಮರೆತೇಬಿಟ್ಟೆ... ಅವನು ಮತ್ತೆ ಫೋನು ಮಾಡಿದ್ರೆ ಏನು ಹೇಳಲಿ...?"

"ಯೋಚಿಸ್ಬಿಟ್ಟು ಹೇಳ್ತೀನಿ ಅಂಥ ಹೇಳಿ..."

"ನಾನು ಹೋಗಲೋ ಬೇಡವೋ...?"

"ಯೋಚಿಸ್ಬಿಟ್ಟು ಹೇಳ್ತೀನಿ" ಅಂತಂದ. ಇಬ್ಬರೂ ನಕ್ಕರು. ಮೊದಲು ಅವಳನ್ನು ಅವಳ ಮನೆಯ ಸಮೀಪ ಇಳಿಸಿ, ತನ್ನ ಮನೆಯ ದಾರಿಯನ್ನು ಹಿಡಿದ. ಕಾರನ್ನು ನಿಲ್ಲಿಸಿ, ಹೊರಗೆ ಇಳಿಯುವ ಮೊದಲು, ಹಿಂದಿನ ಸೀಟಿನಲ್ಲಿದ್ದ ಅವಳ ಹ್ಯಾಂಡ್ ಬ್ಯಾಗನ್ನು ಕಂಡ... ತಕ್ಷಣವೇ ಹೋಗಿ ಅವಳಿಗೆ ಕೊಡಲೇ ಅಂತ ಅಂದುಕೊಂಡವನು, ಮರುಕ್ಷಣವೇ ಅವಳ ತಂದೆ-ತಾಯಿಗೆ, ತನ್ನ ಬಗ್ಗೆ ಅನುಮಾನ ಬರಬಹುದು... ಅವಳು ಯಾರಿಗೂ ಹೇಳಿದಂತಿಲ್ಲ ಅಂತಂದುಕೊಂಡು ಅವಳ ಹ್ಯಾಂಡ್ ಬ್ಯಾಗನ್ನು ಕಾರಿನಲ್ಲೇ ಬಿಟ್ಟು ಅವಳ ಮೊಬೈಲ್ ಫೋನನ್ನು ಮಾತ್ರ ಎತ್ತಿಕೊಂಡು ಮನೆಯೊಳಕ್ಕೆ ಬಂದ.

"ಅವನು ಮೊದಲೇ ಅಪ್ಸೆಟ್ ಆಗಿದಾನೆ... ನೀನು ಸುಮ್ನಿರಬಾರ್ದಾ?" ತಂದೆ ಹೇಳಿದ್ದು ಕೇಳಿಸಿತ್ತು.

"ಇವನಿಗೆ ಬೇಗ ಒಂದು ಹುಡುಗಿಯನ್ನು ನೋಡಿ ಮದುವೆ ಮಾಡಿ ಬಿಡೋಣ" ತಾಯಿ ಹೇಳಿದ್ದು ಕೇಳಿಸಿತು. ಆಗ ಅವನಿಗೆ ತಟ್ಟನೆ ನೆನಪಾದವಳು ಸೀಮಾ...

"ಎಸ್! ತಾನೇಕೆ ಸೀಮಾಳನ್ನು ಮದುವೆಯಾಗಬಾರದು...? ಇದರಿಂದ ಗೌತಮನಿಗೆ ಪ್ರತೀಕಾರ ಮಾಡಿದಂತಾಗುತ್ತದೆ. ಅವನು ರೇಣುಕಾಳನ್ನು ಹಾಳು ಮಾಡಿದನಲ್ಲವೇ...? ಸೀಮಾಳನ್ನು ತಾನು ಅವನಿಂದ ದೂರ ಮಾಡಬೇಕು... ಸೀಮಾಳನ್ನು ತಾನು ಕೆಡಿಸಬಾರದು... ಅವಳನ್ನು ತಾನು ಒಲಿಸಿಕೊಳ್ಳಬೇಕು... ಗೌತಮನ ಹೊಟ್ಟೆ ಉರಿಯುವಂತೆ ತಾವು ಸಂಸಾರ ಮಾಡಬೇಕು... ತಾನು ರೇಣುಕಾಳನ್ನು ಅತಿಯಾಗಿ ಪ್ರೀತಿಸಿರಲಿಲ್ಲ. ಮದುವೆ ಗೊತ್ತು ಮಾಡಿದ ಮೇಲೆ ಒಡನಾಟವಿತ್ತು. ಅವಳನ್ನು ಮದುವೆಯಾಗಿದ್ದರೆ, ಅವಳನ್ನು ಚೆನ್ನಾಗಿ ನೋಡಿ ಕೊಳ್ಳುತ್ತಿದ್ದೆ. ಹಾಗೇ ಸೀಮಾ ತನ್ನನ್ನು ಮದುವೆಯಾಗಲು ಒಪ್ಪಿದ್ದರೆ, ಅವಳನ್ನು

ಚೆನ್ನಾಗಿ ನೋಡಿಕೊಳ್ಳಬೇಕು. ಗೌತಮನ ಮೇಲಿನ ಕೋಪಕ್ಕೆ ಕೆಟ್ಟದಾಗಿ ವರ್ತಿಸಬಾರದು... ಮೊದಲು ಅವಳಿಗೆ ತಾನು ಒಪ್ಪಿಗೆಯೋ ಇಲ್ಲವೋ ತಿಳಿದು ಕೊಳ್ಳಬೇಕಲ್ಲ... ತನ್ನ ಅವಳ ಸ್ನೇಹ ಇನ್ನೂ ಹೊಸದು... ಕೆಲವು ದಿನಗಳು ಕಳೆಯಲಿ... ಎಂದು ಹೇಳಿಕೊಳ್ಳುತ್ತಾ ಮಂಚದ ಮೇಲೆ ಕುಳಿತ.

"ತಟ್ಟೆ ಹಾಕಿದೀನಿ ಬಾರೋ ಶಶಾಂಕ್..." ತಾಯಿ ಕರೆದದ್ದು ಕೇಳಿಸಿತು. ಎದ್ದು ಡೈನಿಂಗ್ ರೂಂಗೆ ಬಂದ. ಟೇಬಲ್ ಮೇಲೆ ಒಂದೇ ತಟ್ಟೆಯಿದ್ದುದನ್ನು ಕಂಡ.

"ನಿಮ್ಮಿಬ್ರ ಊಟ ಆಯ್ತಾ...?"

"ಹ್ಞೂಂ, ಈಗ ಹತ್ತು ಗಂಟೆಯಾಗಿದೆ. ನಿನಗೋಸ್ಕರ ಕಾದೂ ಕಾದೂ ಸಾಕಾಯ್ತು.....ಪೋಲೀಸ್ನೋರು ಮತ್ತೆ ಎಲ್ಲಿ ಕೂಡಿಹಾಕಿಬಿಟ್ರೋ ಅಂತ ಭಯ ಆಗಿತ್ತು" ಎನ್ನುತ್ತಾ ಒಂದೊಂದಾಗಿ ಬಡಿಸಿದಳು.

"ಇನ್ಯಾವ ಭಯವೂ ಇಲ್ಲಮ್ಮ... ಅಪರಾಧಿ ಎಲ್ಲಿದ್ದಾನೆ ಅಂತ ಪತ್ತೆಯಾಗಿದೆ"

"ಯಾರು ಗೌತಮಾನಾ...? ಎಲ್ಲಿದ್ದಾನಂತೆ..."

"ಆಂಧ್ರಪ್ರದೇಶದಲ್ಲಿ ಎಲ್ಲೋ ಇದಾನಂತೆ... ಸಧ್ಯದಲ್ಲೇ ಪೋಲೀಸರು ಅವನನ್ನು ಹಿಡಿಯುತ್ತಾರೆ. ಇನ್ನು ಮುಗೀತು ಅವನ ಗತಿ...?"

"ಪಾಪ... ನಿನ್ನ ಮಾವನ ಬಗ್ಗೆ ಯೋಚಿಸಿದರೆ ಅಯ್ಯೋ ಅಂತ ಅನ್ಸುತ್ತೆ... ಎಂಥಾ ಕೇಡಿಗ ಹುಟ್ಟಿಟ್ಟ ನಿನ್ನ ಅತ್ತೆಯ ಹೊಟ್ಟೇಲಿ... ಒಂದು ವಿಷಯ ಗೊತ್ತಾ ಶಶಾಂಕ್... ನಿನ್ನ ಅತ್ತೆಗೆ ಹುಷಾರಿಲ್ವಂತೆ... ಮಗನಿಗೆ, ಬೇಗ ಬಾ ಅಂತ ಹೇಳಿ ಪೇಪರ್ನಲ್ಲಿ ಹಾಕಿಸಿದಾರಂತೆ... ನಿಮ್ಮಪ್ಪ ಹೇಳಿದ್ರು... ಅದನ್ನು ನೋಡಿದ ಕೂಡಲೇ ಬರದೇ ಇರ್ತಾನಾ...?"

"ಕನ್ನಡ ಪೇಪರ್ರು ಆಂಧ್ರದಲ್ಲಿ ಹೇಗೆ ಸಿಗುತ್ತೆ...? ನಿನ್ನ ಅಣ್ಣ ಅತ್ತಿಗೆಗೆ ತಿಳುವಳಿಕೆ ಸಾಲದು. ಇಂಗ್ಲೀಷ್ ಪೇಪರ್ನಲ್ಲಿ ಹಾಕಿಸ್ಬೇಕಾಗಿತ್ತು."

"ಅವರಿಗೇನು ಗೊತ್ತು, ಅವನು ಆಂಧ್ರದಲ್ಲಿದ್ದಾನೇಂತ... ಸೀಮಾ ಅನ್ನೋ ಹುಡುಗಿಯ ಮನೇಲಿ ಅಡಗಿ ಕುಳಿತಿರಬಹುದು ಅಂತಲೇ ಅಂದ್ಕೊಂಡಿದ್ದೆ ನಾನು... ಅವರಿಬ್ಬರೂ ಮದುವೆ ಮಾಡ್ಕೋಬೇಕು ಅಂತ ಅಂದ್ಕೊಂಡಿದ್ದರಂತೆ. ನಿನ್ನ ಅತ್ತೆ ಒಪ್ಪಿಗೆ ಕೊಟ್ಟಿರಲಿಲ್ಲ. ಒಪ್ಕೊಂಡಿದ್ದಿದ್ದರೆ ಹೀಗೆಲ್ಲಾ ಆಗ್ತಾನೇ ಇರಲಿಲ್ಲ. ಕಂಡೋರ ಮನೆಯ ಹೆಣ್ಣು ಮಕ್ಕಳ ಮೇಲೆ ಕಣ್ಣು ಹಾಕುವ ಧೈರ್ಯ ಬರ್ತಿರಲಿಲ್ಲ ಅವನಿಗೆ... ಅವನ ಈ ದುರ್ಬುದ್ಧಿಗೆ ನಮ್ಮ ರೇಣುಕಾನೇ ಆಗ್ಬೇಕಾಗಿತ್ತಾ ಅವನಿಗೆ... ಅಂತೂ ಮೂರು ಜನರ ಬಾಳನ್ನು ಹಾಳು ಮಾಡಿಬಿಟ್ಟ ಪಾಪಿ...!"

"ಮೂರು ಜನ ಯಾರ್ಯಾರಮ್ಮಾ...?"

"ಇನ್ಯಾರು? ತಾನು, ರೇಣುಕಾ... ಹಾಗೇ ಆ ಸೀಮಾ ಅನ್ನೋಳು....." ಆ ಸಮಯದಲ್ಲೂ ನಗೆ ಬಂದಿತ್ತು. ರೇಣುಕಾಳನ್ನು ಮುಗಿಸೇ ಬಿಟ್ಟ... ಈಗ ನಿಜವಾಗಿ ಹಾಳಾಗ್ತಿರೋನು ಅವನು... ನಾನು ಸೀಮಾ ಮದುವೆಯಾಗಿ, ನಾಲ್ಕು ಮಕ್ಕಳಿಗೆ ಜನ್ಮಕೊಟ್ಟು... ತಕ್ಷಣಕ್ಕೆ ಅವನ ಆಲೋಚನೆ ನಿಂತಿತು.

"ಮೆಡಿಕಲ್ ಷಾಪ್‌ನವನು ಆ ಮಾತ್ರೆಗಳನ್ನು ಕೊಡಲು ಹುಡುಕುತ್ತಾ ಕೇಳಿದ್ದ... "ಎಂಥಾ ಅಲರ್ಜಿಗೆ ಸಾರ್... ಏನಾಗಿದೆ?" ಅಂತ.

"ಏನೋ ಹುಳು ಕಚ್ಚಿದೆಯಯ್ಯಾ... ಉರಿ ಉರಿ ಅಂತಾರೆ... ಗಂಧೆಗಳಾಗಿ ಕೆಂಪಾಗಿದೆಯಂತೆ..."

"ಈ ಲೋಷನ್ ಸಾಕು ಸಾರ್... ಈ ಟ್ಯಾಬ್ಲೆಟ್ ಬಹಳ ಸ್ಟ್ರಾಂಗ್. ಕೆಲವರಿಗೆ ಮೈಗೆ ಆಗೋಲ್ಲ... ವಾಂತಿ ಆಗುತ್ತೆ, ಹೊಟ್ಟೆ ತೊಳೆಸುತ್ತೆ... ವಾಕರಿಕೆ ಬರುತ್ತೆ... ಪ್ರೆಗ್ನೆಂಟ್ ಹೆಂಗಸರಂತೂ ತಗೋಳ್ಳಲೇಬಾರದು..." ಅವನು ಹೇಳುತ್ತಿದ್ದ.

ಇವನಿಗೆ ಸೀಮಾ ಹೇಳಿದ್ದ ಮಾತುಗಳು ನೆನಪಿಗೆ ಬಂದವು. 'ಮಾತ್ರೇನ ತಗೋಬೇಡಿ ಅಂತ ಅಂದರಂತೆ... ಆದರೂ ಬರೆದು ಕೊಟ್ಟಿದ್ದಾರೆ. ಆದರೆ ತಾನು ತಗೋಳ್ಳಲ್ಲ ಅಂತ ಹೇಳಿದ್ಲಲ್ಲ. ಏನಿದರ ಅರ್ಥ...? ಸೀಮಾ ಪ್ರೆಗ್ನೆಂಟ್ ಇರಬಹುದಾ.....? ಆ ಅನಿಸಿಕೆ ಅವನಿಗೆ ಹಿತವೆನಿಸಲಿಲ್ಲ.....ಸೀಮಾ, ಗೌತಮ್ ನಿಕಟವಾಗಿದ್ದರು. ಅವಳನ್ನು ಇವನು ಬಳಸಿಕೊಂಡಿರಬಹುದೇ.....ಹಾಗಿದ್ದೂ ರೇಣುಕಾಳ ಮೇಲೆ......ಥೂ ಎಂಥಾ ನೀಚ ಗಂಡಸು? ಅವನಿಂದ ಸೀಮಾ ಪ್ರೆಗ್ನೆಂಟ್ ಆಗಿದ್ದರೆ? ಅದನ್ನು ತಿಳಿದುಕೊಳ್ಳುವುದು ಹೇಗೆ.....? ಅವಳ ಹ್ಯಾಂಡ್ ಬ್ಯಾಗ್‌ನಲ್ಲಿ ಏನಾದರೂ ರಿಪೋರ್ಟ್ ಇರಬಹುದೇ......? ಒಂದು ವೇಳೆ ಸೀಮಾ ಪ್ರೆಗ್ನೆಂಟ್ ಆಗಿದ್ದರೆ......ತಾನು ಅವಳಿಗೆ ಪ್ರಪೋಸ್ ಮಾಡುವ ಮೊದಲು ತಾನು ಚೆನ್ನಾಗಿ ಯೋಚಿಸಲೇ ಬೇಕು......ಅವಳ ಹ್ಯಾಂಡ್ ಬ್ಯಾಗನ್ನು ಕಾರಿನಿಂದ ತರಬೇಕು' ಎಂದುಕೊಂಡು ಬೇಗನೇ ಊಟವನ್ನು ಮುಗಿಸಿ, ರೂಮಿಗೆ ಬಂದು, ಕಾರಿನ ಕೀಯನ್ನು ಎತ್ತಿಕೊಂಡ. ಅಷ್ಟರಲ್ಲಿ ಸೀಮಾಳ ಮೊಬೈಲ್ ಫೋನು ರಿಂಗಾಗಿತ್ತು. ಅದನ್ನು ಎತ್ತಿಕೊಂಡು ಕಾರಿನ ಬಳಿಗೆ ಬಂದ.

*****

"ಸೀಮಾ... ಸೀಮಾ..." ಗೌತಮ ಪಿಸುದನಿಯಲ್ಲಿ ಉಸುರಿದ್ದ.

"ಸೀಮಾರಿಗೆ ಹಾವು ಕಚ್ಚಿದೆ... ನರ್ಸಿಂಗ್ ಹೋಂನಲ್ಲಿದ್ದಾರೆ..."

"ನೀನ್ಯಾರೋ ರ್‍ಯಾಸ್ಕಲ್..." ಕಿರುಚಿದ.

"ನಾನು ವಾರ್ಡ್ ಬಾಯ್... ನೀವ್ಯಾರು...?"

"ನಾನು ಸೀಮಾಳ ಫ್ರೆಂಡ್... ಹೇಗಿದಾಳೆ, ಎಚ್ಚರವಾಗಿದ್ದಾಳಾ?"

"ಇಲ್ಲ. ನಿದ್ದೆ ಬಂದಿದೆ. ತುಂಬಾ ಸುಸ್ತಾಗಿದ್ದಾರೆ. ಈಗ ಮಾತನ್ನಾಡಲ್ಲ... ನೀವು ಡಿಸ್ಟರ್ಬ್ ಮಾಡ್ಬೇಡಿ... ಅವರಿಗೆ ಏನು ಹೇಳ್ಬೇಕು ಅಂತ ಹೇಳಿ, ನಾನು ಹೇಳ್ತೀನಿ..."

"ಬೆಳಿಗ್ಗೆ ನಾನೇ ಮತ್ತೆ ಫೋನು ಮಾಡ್ತೀನಿ... ಈಗ ಇಡು."

"ಅವರಿಗೆ ಎಚ್ಚರಾನೇ ಆಗದಿದ್ರೆ...?"

"ತಲೆ ಹರಟೆ... ಇದು ಯಾವ ನರ್ಸಿಂಗ್ ಹೋಂ... ಅಡ್ರೆಸ್ ಹೇಳು..."

"ವಿಜಯಾ ನರ್ಸಿಂಗ್ ಹೋಂ... ಸೀತಾ ಸರ್ಕಲ್ ಹತ್ರ... ಬನಶಂಕರಿ ಮೂರನೇ ಹಂತ."

"ನರ್ಸಿಂಗ್ ಹೋಂ ಫೋನು ನಂಬರನ್ನು ಕೊಡು. ನಾನು ಅವಳ ಹತ್ರ ಮಾತಾಡ್ತೀನಿ...."

"ಅವರು ಐ.ಸಿ.ಯು.ನಲ್ಲಿದ್ದಾರೆ. ಯಾರೂ ಮಾತಾಡುವಂತಿಲ್ಲ. ಏನಾದ್ರೂ ಹೇಳ್ಬೇಕಾಗಿತ್ತಾ...? ನಾನು ಹೇಳ್ತೀನಿ."

" ನಿಮ್ಮ ಫ್ರೆಂಡ್ ಅಂತ ಹೇಳಿ ಸಾಕು. ನಾನು ಮತ್ತೆ ಮಾಡ್ತೀನಿ."

"ಸರಿ, ಹೇಳ್ತೀನಿ. ಮತ್ತೆ ಯಾವಾಗ ಫೋನು ಮಾಡ್ತೀರಿ?"

"ನಾನೇ ಮಾಡ್ತೀನಿ"

"ಇನ್ನೊಂದು ಆರ್ಧ ಗಂಟೆ ಬಿಟ್ಟು ಮಾಡ್ಲಾ?"

"ಬೇಡಾರಿ... ಬೇರೆಯವರಿಗೆ ಡಿಸ್ಟರ್ಬ್ ಆಗುತ್ತೆ. ನಾಳೆ ಬೆಳಿಗ್ಗೆ ಮಾಡಿ. ಕಂಡೀಷನ್ ಹೇಗಿದೆ ಅಂತ ಗೊತ್ತಾಗುತ್ತೆ..." ಎನ್ನುತ್ತಾ ಸ್ವಿಚ್ ಆಫ್ ಮಾಡಿದ. ಗೌತಮನ್ನ ತಾನು ಸತಾಯಿಸಿದ್ದು ಅವನಿಗೇ ಖುಷಿಯನ್ನು ತಂದಿತ್ತು...ಈ ವಿಷಯವನ್ನು ಸೀಮಾಳಿಗೆ ತಿಳಿಸಬೇಕು. ಹೇಗೆ ತಿಳಿಸುವುದು...? ಅವಳ ಫೋನು ಇಲ್ಲೇ ಇದೆ... ಶಶಾಂಕ ಮಾತನಾಡಿದ್ದು ಅಂತ ಗೌತಮನಿಗೆ ತಿಳಿದರೆ ಅವನಿಗೆ ಏನನ್ನಿಸಬಹುದು...? ತನ್ನ ಮೇಲೆ ಅನುಮಾನ ಬರಬಹುದು. ಅವಳ ಮೇಲೆ ಕೋಪ ಬರಬಹುದು... ಕೆಟ್ಟ ಸಂತೋಷದ ಜೊತೆಗೆ ವ್ಯಥೆಯೂ ಆಗಿತ್ತು... ಜೊತೆಗೆ ತನ್ನ ಅಸಹಾಯಕತೆಯ ಬಗ್ಗೆ, ಅಸಹ್ಯವೂ ಮೂಡಿತ್ತು... ತನಗೆ ಈಗ ಕೆಲಸವೂ ಇಲ್ಲ, ಸಂಪಾದನೆಯೂ ಇಲ್ಲ, ಕೋರ್ಟು ಕೇಸು ಅಂತಂದ್ರೆ ಹಣವೂ ಖರ್ಚಾಗುತ್ತದೆ. ಜೊತೆಗೆ ಬೇರೆಯವರ ಅನುಮಾನದ ಮಾತು, ನೋಟ... ಈ ಗೋಜಲಿನಿಂದ ಪಾರಾಗುವುದು ಹೇಗೆ...? ತಾನು ಆದಷ್ಟು ಬೇಗ ಸೀಮಾಳನ್ನು ಮದುವೆಯಾಗಿ ಬಿಡಬೇಕು. ಅವಳ ಸಹಕಾರವಿದ್ದರೆ, ತಾನು ಮುಂದುವರೆಯಲು ಸಾಧ್ಯ... ಇಲ್ಲದಿದ್ದರೆ...!

ಅಷ್ಟರಲ್ಲಿ ಅವನ ಕೈಯಲ್ಲಿದ್ದ ಫೋನು ರಿಂಗಾಗಿತ್ತು... ಮತ್ತೆ ಗೌತಮನೇ

ಮಾಡಿದನೋ ಏನೋ ಅಂತಂದುಕೊಂಡು ಅನುಮಾನಿಸುತ್ತ ಬಟನ್ ಒತ್ತಿದ... ಅತ್ತಲಿಂದ ಸೀಮಾ ಮಾತಾಡಿದ್ದಳು. "ಹಲೋ... ಇದು ಶಶಾಂಕನಾ?" ಕೇಳಿದಳು. ಅವನು ಅವಳ ಧ್ವನಿಯನ್ನು ಗುರುತಿಸಿದ.

"ಹೌದು ಸೀಮಾ.... ನಾನೇ... ನಿಮ್ಮ ಹ್ಯಾಂಡ್ ಬ್ಯಾಗ್... ಫೋನು ಎಲ್ಲಾ ನನ್ನ ಹತ್ತಿರವೇ ಇದೆ... ಡೋಂಟ್ ವರೀ..." ಎಂದ.

"ಗೌತಮ ಫೋನು ಮಾಡ್ತೀನಿ ಅಂತ ಹೇಳಿದ್ದ..."

"ಮಾಡಿದ್ದ... ಸರಿಯಾಗಿ ಮಾತಾಡಿದೀನಿ..."

"ಏನು ಹೇಳಿದ್ರಿ ಶಶಾಂಕ್...ಶಶಾಂಕ ಅಂತ ಗೊತ್ತಾಯ್ತಾ ಅವನಿಗೆ?"

"ಇಲ್ಲ, ಒಂದು ಕತೆ ಸೃಷ್ಟಿ ಮಾಡಿ ಹೇಳಿದೀನಿ. ನಿಮ್ಮ ಮನೆಯ ನಂಬರಾಗಲೀ, ಬೇರೆಯವರ ನಂಬರಾಗಲೀ ಅವನಿಗೆ ಗೊತ್ತಾ?"

"ಗೊತ್ತಿದ್ರೂ ಮಾಡಲ್ಲ. ಏನಿದ್ರೂ ನನಗೇ ಹಿಂಸೆ ಕೊಡ್ತಾನೆ... ಏನಂದ?"

"ಯಾರೋ ನೀನು ಹಾಗೆ ಹೀಗೆ ಅಂತ ಬೈದ... ನಾನು ನಿಮಗೆ ಹುಷಾರಿಲ್ಲ, ರೆಸ್ಟ್‌ನಲ್ಲಿದ್ದೀರಿ... ಅಂತ ಹೇಳಿದೆ. ನಾನು ಶಶಾಂಕ ಅಂತ ಅವನಿಗೆ ಗೊತ್ತಾಗ್ಲಿಲ್ಲ. ಇನ್ನು ಅವನು ಬೆಳಗಿನ ತನಕ ಫೋನು ಮತ್ತೆ ಮಾಡಲ್ಲ."

"ಸರಿ... ಬೆಳಗಿನವರೆಗೂ ಸ್ವಿಚ್ ಆಫ್ ಮಾಡಿರಿ. ನಾನು ಬಂದು ಕಲೆಕ್ಟ್ ಮಾಡಿಕೊಳ್ತೀನಿ... ಏನಾದ್ರೂ ಇದ್ದರೆ, ನನಗೆ ಈ ನಂಬರ್ರಿಗೆ ಫೋನು ಮಾಡಿ" ಎಂದು ಹೇಳಿ, ತನ್ನ ಮನೆಯ ನಂಬರನ್ನು ಕೊಟ್ಟಳು.

"ಇಷ್ಟು ಹೊತ್ತಾದ್ರೂ ಮಲಗಿಲ್ವಾ...? ಊಟ ಮಾಡಿದ್ರಾ? ಈಗ ಉರಿ ಹೇಗಿದೆ?" ವಿಚಾರಿಸಿದ.

"ಉರಿ ಸ್ವಲ್ಪ ಕಡಿಮೆ ಆಗಿದೆ. ಆದರೆ ನಿದ್ದೆ ಬರ್ತಿಲ್ಲ... ಆಗ ಫೋನು ಇಲ್ಲ ಅಂತ ಗೊತ್ತಾಯ್ತು... ನಿಮ್ಮ ಕಾರ್‌ನಲ್ಲೇ ಬಿಟ್ಟೆ ಅಂತ ನೆನಪಾಯ್ತು... ಯಾಕೆ ಹೀಗಾಯ್ತೋ... ಎಂದೂ ಹೀಗೆ ಕೇರ್ ಲೆಸ್ ಆದವಳಲ್ಲ ನಾನು..."

"ನೀವು ಅಪ್ಸೆಟ್ ಆಗಿದ್ರಿ, ಅದಕ್ಕೆ ಹಾಗಾಯ್ತು.... ನಂಗೂ ನಿದ್ದೆ ಬರ್ತಿಲ್ಲ. ಅಷ್ಟರಲ್ಲಿ ಈ ಫೋನು... ಟೈಂ ಪಾಸ್ ಮಾಡಿದೆ...."

"ಸರಿ... ಈಗ ನಾನು ಫೋನು ಇಡ್ಲಾ?"

"ಮಾತಾಡ್ತಾನೇ ಇರಿ.. ಸೀಮಾ.. ಬೇಕಾದ್ರೆ ನನ್ನ ಫೋನಿನಿಂದ ಮಾತಾಡ್ತೀನಿ."

"ಏನಾದರೂ ಹೇಳೋದು ಇದೆಯಾ ಶಶಾಂಕ್?"

"ಹ್ಞೂಂ ಸೀಮಾ, ತುಂಬಾ ಇದೆ. ನಿಮ್ಮ ತಾಯಿಯ ಮೊಬೈಲ್ ನಂಬರನ್ನು ಕೊಡಿ...ಯಾರಿಗೂ ತೊಂದರೆ ಇಲ್ಲ ಅಂದ್ರೆ ಮಾತಾಡ್ತೀನಿ."

"ತೊಂದರೆ ಏನಿಲ್ಲ, ತಂದೆ ಊರ್‌ನಲ್ಲಿಲ್ಲ. ತಗೊಳ್ಳಿ ಈ ನಂಬರನ್ನು.. ಇನ್ನು

ಹತ್ತು ನಿಮಿಷ ಬಿಟ್ಟು ಮಾತಾಡಿ... ನನ್ನಿಂದ ಏನಾದ್ರೂ ಹೆಲ್ಪ್ ಬೇಕಿತ್ತಾ ಶಶಾಂಕ್?"

"ಇನ್ನು ಹತ್ತು ನಿಮಿಷ ಬಿಟ್ಟು ಮಾತಾಡ್ತೀನಿ" ಎಂದು ಹೇಳಿ ಮನೆಯೊಳಕ್ಕೆ ಬಂದ... ತಾನೇಕೆ ಸೀಮಾಳ ಕಡೆ ವಾಲುತ್ತಿದ್ದೇನೆ...? ಇಷ್ಟು ಬೇಗ ರೇಣುಕಾಳನ್ನು ಮರೆಯಲು ಸಾಧ್ಯವಾಯಿತೇ...? ತನ್ನ ಮನದೊಳಗಿನ ಗೊಂದಲ ಏನು...? ಇದಕ್ಕೆ ಸೀಮಾಳೇ ಉತ್ತರ ಕೊಡಬೇಕು ಎಂದುಕೊಂಡ. ತನ್ನ ಬಗ್ಗೆ ಅವಳಿಗೆ ಆಸಕ್ತಿ ಇದೆಯೋ ಇಲ್ಲವೋ ಅಂತ ತಿಳಿದುಕೊಳ್ಳಬೇಕು... ತಾನೀಗ ಅವಳಿಗೆ ಫೋನು ಮಾಡಬಾರದು. ಹತ್ತು ಹದಿನೈದು ನಿಮಿಷಗಳು ಕಳೆದ ನಂತರ ಅವಳಿಂದ ಫೋನು ಬಂದರೆ ಅವಳ ಮನಸ್ನಲ್ಲಿ ಏನಿದೆ ಅಂತ ಅರ್ಥ ಮಾಡಿಕೊಳ್ಳ ಬಹುದು... ಎಂದುಕೊಂಡು ಮಂಚದ ಮೇಲೆ ಉರುಳಿಕೊಂಡ.

"ಇಷ್ಟು ಹೊತ್ತು ಯಾರ ಹತ್ರ ಮಾತಾಡ್ತಿದ್ಯೋ..." ತಾಯಿ ಕೇಳಿದಾಗ ಅವನಿಗೆ ರೇಗಿತ್ತು...

"ಏನಮ್ಮಾ ನೀನು... ಎಲ್ಲವನ್ನೂ ನಿನಗೆ ಹೇಳ್ಬೇಕಾ?"

"ಹಾಗಲ್ವೋ... ಈಗ ರೇಣುಕಾ ಇಲ್ಲ... ಪೋಲಿಸ್ನೋರ ಕಾಟ ಬೇರೆ... ಅದಕ್ಕೇ ಅನುಮಾನ ಬಂತು..."

"ನೀನು ಸುಮ್ಮನೇ ಮಲಕ್ಕೋ... ನನ್ನ ತಲೆ ಮೊದಲೇ ಸರಿ ಇಲ್ಲ..."

"ಬಾದಾಮಿ ಹಾಲನ್ನು ಕೊಡಲೇನೋ, ಚೆನ್ನಾಗಿ ನಿದ್ದೆ ಬರುತ್ತೆ."

"ಹ್ಞಂ ಸರಿ ಕೊಡು. ಆದರೆ ತುಂಬಾ ಬಿಸಿ ಮಾಡ್ಬೇಡ" ಎಂದು ಹೇಳಿ ತಾಯಿಯನ್ನು ಅತ್ತ ಕಳಿಸಿದ. ಕೆಲವೇ ನಿಮಿಷಗಳಲ್ಲಿ ಅವಳು ತಂದುಕೊಟ್ಟ ಹಾಲನ್ನು ಕುಡಿದು ಅವಳನ್ನು ಹೊರಕ್ಕೆ ಕಳಿಸಿ, ಬಾಗಿಲನ್ನು ಹಾಕಿಕೊಂಡ......ಆಕೆ ಬಾಗಿಲನ್ನು ಬಡಿದಳು.

"ಬರೀ ಬಾಗಿಲನ್ನು ಹಾಕ್ಕೊಳ್ಳೋ ಶಶಿ... ಆತಂಕ ಆಗುತ್ತೆ... ಕೆಟ್ಟ ಕನಸುಗಳು ಬೀಳುತ್ವೆ... ಕಿರುಚ್ಕೊಂಡು ಏಳಕ್ಕೆ ಹೋಗಿ ಬಿದ್ದರೆ...." ಬಾಗಿಲನ್ನು ತೆರೆದು ತಾಯಿಯನ್ನೇ ಬಿರುಗಣ್ಣಿನಿಂದ ನೋಡಿದ.

"ಸುಮ್ಮನೇ ಹೋಗಮ್ಮ... ನಾನೇನು ಚಿಕ್ಕ ಮಗುವಲ್ಲ... ನನ್ನದೇ ಆದ ಜವಾಬ್ದಾರಿಗಳು ನಂಗಿವೆ... ನಾನು ಅಷ್ಟು ಯಾರಿಗೂ ಹೆದರಲ್ಲ."

"ಸರಿ ರೇಗ್ಬೇಡ್ವೋ... ಭಯ ಆದರೆ, ರಾಮನಾಮ ಜಪ ಮಾಡು... ಧೈರ್ಯ ಸಿಗುತ್ತೆ."

"ನನ್ನ ಪರವಾಗಿ ನೀನೇ ಜಪ ಮಾಡು...ಈಗ ಹೋಗು" ಗದರಿದ. ತಾಯಿ ಅತ್ತ ಹೋಗುವವರೆಗೂ ಬಾಗಿಲನ್ನು ತೆರೆದೇ ಇದ್ದ... ತಾಯಿ ತನ್ನ ರೂಮಿಗೆ ಹೋದ ಮೇಲೆ, ಮೊಬೈಲ್ ಫೋನನ್ನೆತ್ತಿಕೊಂಡು, ಮೇಲಿದ್ದ ರೂಮಿಗೆ ಹೊರಟ.

ಮರೆಯದೇ ರೂಮಿನ ದೀಪವನ್ನು ಆರಿಸಿ, ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು ಕಳ್ಳ ಹೆಜ್ಜೆಯಲ್ಲಿ ಮಹಡಿಯ ಮೆಟ್ಟಿಲುಗಳನ್ನು ಹತ್ತಿ ರೂಮಿನೊಳಕ್ಕೆ ನುಸುಳಿ, ದೀಪವನ್ನು ಹಾಕಿಕೊಂಡು, ಬಾಗಿಲನ್ನು ಭದ್ರಪಡಿಸಿ, ಫೋನಿಗಾಗಿ ಕಾಯುತ್ತಾ ಕುಳಿತ.

ಹತ್ತು ನಿಮಿಷಗಳು ಕಳೆಯುವ ಮೊದಲೇ ಫೋನು ರಾಗ ಹಾಡಿತ್ತು... ಇಷ್ಟು ಹೊತ್ನಲ್ಲಿ ಬೇರೆ ಯಾರಪ್ಪಾ ಎಂದು ಬೈದುಕೊಳ್ಳುತ್ತಾ 'ಹಲೋ' ಎಂದ.

"ನಾನು ಸೀಮಾ... ಮಲಗಿದ್ರಾ?" ಕೇಳಿದಾಗ, ಅವನಿಗೆ ಒಂದು ತರಹ ಹೊಸ ಅನುಭವವಾಗಿತ್ತು....'ನಂಗಿಂತ ಇವಳಿಗೇ ಆತುರ' ಎಂದುಕೊಂಡು, ತನ್ನಲ್ಲೇ ನಕ್ಕೊಂಡ.

"ಹೇಳಿ ಸೀಮಾ... ನೀವೇ ಫೋನು ಮಾಡಿದ್ರಲ್ಲ... ಗೌತಮ ಏನಾದ್ರೂ ಫೋನು ಮಾಡಿದ್ನಾ?"

"ಇಲ್ಲ ಶಶಾಂಕ್... ಯಾಕೋ ತಲ್ಲಣ ಹೆಚ್ಚಾಗಿದೆ... ಗೌತಮ ನಿಮ್ಮ ನಂಬರ್ರಿಗೆ ಫೋನು ಏನಾದ್ರೂ ಮಾಡಿದರೆ ಬೈಯಬೇಡಿ... ಅವನೇನಾದ್ರೂ ಬೇಸರದಿಂದ ಆತ್ಮಹತ್ಯೆ ಮಾಡಿಕೊಂಡರೆ ನನಗೆ ಕಷ್ಟವಾಗುತ್ತೆ... ನನ್ನ ಬಾಳು ಹಾಳಾಗುತ್ತೆ..."

"ಇಲ್ಲ ಸೀಮಾ... ನಾನೇಕೆ ಬೈದು ಕೆಟ್ಟವನಾಗಲಿ... ಅಲ್ಲದೆ ನೀವು ರಿಕ್ವೆಸ್ಟ್ ಮಾಡಿಕೊಂಡ ಮೇಲೆ ನಾನು ಖಂಡಿತಾ ಬೈಯಲ್ಲ. ನೀವೇಕೆ ಅವನಿಗೆ ಅಷ್ಟು ಹೆದರಬೇಕು....?"

"ಏನೋ ಗೊತ್ತಿಲ್ಲ... ಅವನು ನನ್ನ ಸ್ನೇಹಿತನಾಗಿದ್ದವನು... ಅವನ ಒಳ್ಳೆಯ ಹಾಗೂ ಕೆಟ್ಟ ಗುಣ ಎರಡೂ ನನಗೆ ಗೊತ್ತು. ಅವನು ನನಗೇನು ತೊಂದರೆ ಮಾಡ್ತಾನೋ ಅಂತ ನಂಗೆ ದಿಗಿಲಾಗುತ್ತೆ...."

"ನೀವು ಅಂಥಾ ನೇಚರ್‌ನವರಲ್ಲವಲ್ಲ... ಎಷ್ಟು ಧೈರ್ಯವಾಗಿ ಮಾತಾಡ್ತೀರಿ ...? ಈಗ ಏನಾಯ್ತು...? ಭಯ ಆದ್ರೆ, ತಂಗಿ ಹತ್ರ ಮಾತಾಡಿ... ತಾಯಿ ಹತ್ರ ಹೇಳ್ಕೊಳ್ಳಿ...."

"ಆಗಲ್ಲ ಶಶಾಂಕ್, ತಂಗಿ ಚಿಕ್ಕವಳು, ತಾಯಿ ದೊಡ್ಡವಳು..."

"ವಾಣಿ ಹತ್ರ ಹೇಳ್ಕೊಳ್ಳಬಹುದಲ್ಲ..."

"ವಾಣೀ... ಅವರು ಹೇಗೆ ನಿಮಗೆ ಗೊತ್ತು?"

"ಅವರೇ ಅಲ್ವಾ ನಿಮ್ಮ ಫೋನು ನಂಬರನ್ನು ನನಗೆ ಕೊಟ್ಟವರು! ಅವರಿಗೆ ಥ್ಯಾಂಕ್ಸ್ ಹೇಳ್ಬೇಕು. ನನಗೆ ನಿಮ್ಮ ಸ್ನೇಹ ಸಿಕ್ತು... ಗೌತಮನ ಸ್ನೇಹಿತೆಯಾದ ನೀವು ಎಷ್ಟು ಒಳ್ಳೆಯವರು ಅಂತ ನನಗೆ ಗೊತ್ತಿರ್ಲಿಲ್ಲ... "

"ಗೌತಮನೂ ಕೆಟ್ಟವನಲ್ಲ ಶಶಾಂಕ್...."

"ಹಾಗಾದ್ರೆ ನಾನು ಕೆಟ್ಟವನಾ?"

"ನಾನೆಲ್ಲಿ ಹಾಗಂದೆ....? ಫಳಿಗೆ ಗೌತಮನನ್ನು ಕೆಟ್ಟವನನ್ನಾಗಿ ಮಾಡಿದೆ. ಅವನು ತಲೆ ಮರೆಸಿಕೊಳ್ಳದೇ ಇಲ್ಲೇ ಇದ್ದಿದ್ರೆ ಚೆನ್ನಾಗಿತ್ತು... ಯಾರೋ ಬೆದರಿಕೆ ಹಾಕಿರಬಹುದು. ಅದಕ್ಕೇ ಅವನ ಆರೋಗ್ಯವೂ ಕೆಟ್ಟಿದೆ..."

"ಗೌತಮ ತುಂಬಾ ಲಕ್ಕೀ... ನಿಮ್ಮಂಥ ಒಳ್ಳೇ ಸ್ನೇಹಿತೆ ಅವನಿಗೆ ಸಿಕ್ಕಿದ್ದಾಳೆ... ನಿಮ್ಮ ಸ್ನೇಹಕ್ಕೆ ಅವನು ಬೆಲೆ ಕೊಡುವುದಾದರೆ ಅವನು ಇಲ್ಲಿಗೆ ಬರಲಿ... ನೀವು ಅವನ ಪ್ರೀತಿಯನ್ನು ಉಳಿಸಿಕೊಳ್ಳಿ... ನಿಮಗೆ ಒಳ್ಳೇದಾಗಲಿ..."

"ಥ್ಯಾಂಕ್ಸ್ ಶಶಾಂಕ್... ಆದರೆ ನಿಮ್ಮ ದನಿಯಲ್ಲಿ ವ್ಯಂಗ್ಯ, ಅಸಹನೆ ಅಡಗಿದೆ ಅಂತ ಅನ್ನಿಸ್ತಿದೆ... ನನ್ನ ಬಗ್ಗೆ ಏನೇನೋ ಯೋಚನೆ ಮಾಡ್ಬೇಡಿ... ಒಳ್ಳೆಯ ನಿದ್ದೆ ಮಾಡಿ, ಗುಡ್ ನೈಟ್" ಎಂದು ಹೇಳಿ ಮಾತನ್ನು ಮುಗಿಸಿದಳು. ಅವನು ಸದ್ದಾಗದಂತೆ ಕೆಳಗಿಳಿದು ಬಂದು ಮಲಗಿದ. ನಿದ್ದೆ ಹತ್ತಿರ ಸುಳಿಯಲಿಲ್ಲ... ಸೀಮಾಳ ಬಗ್ಗೆಯೇ ಯೋಚಿಸಿದ. ಹೇಗಾದರೂ ಸರಿ ಸೀಮಾ ಗೌತಮನಿಂದ ದೂರ ಸರಿಯುವಂತೆ ಮಾಡ್ಬೇಕು... ಸೀಮಾಳನ್ನು ತನ್ನವಳನ್ನಾಗಿ ಮಾಡ್ಕೊಳ್ಳಬೇಕು. ಆ ಭಾವನೆ ಬಲಗೊಂಡಿತು.

*****

"ಎಲ್ಲಿದ್ದಾನೋ, ಹೇಗಿದ್ದಾನೋ ಪೇಪರ್ನಲ್ಲಿ ಪ್ರಕಟಣೆ ಬಂದು ನಾಲ್ಕೈದು ದಿನಗಳಾದವು. ಏನೂ ಸುಳಿವಿಲ್ಲ. ಹೀಗ್ಯಾಕೆ ಮಾಡಿದ್ನೋ... ನನ್ನ ಅಳಲನ್ನು ಯಾರ ಕೈಲಿ ಹೇಳಿಕೊಳ್ಳಲಿ...?" ಗೌತಮನ ತಾಯಿ ತನ್ನಲ್ಲೇ ಪೇಚಾಡಿಕೊಂಡಳು. ಅವಳ ಮನಸ್ಸನ್ನು ಓದಿಕೊಂಡವನಂತೆ ಅವಳ ಗಂಡ ನುಡಿದರು,

"ಪೋಲೀಸರಿಗೆ ಹೆದರಿ ಅಡಗಿ ಕುಳಿತಿರೋನು, ನಿನ್ನ ಪ್ರಕಟಣೆ ನೋಡಿ ಫೋನು ಮಾಡಿಬಿಡ್ತಾನಾ...? ಪೋಲೀಸರ ಉಪಾಯವಿರಬಹುದು ಅಂತ ಅಂದ್ಕೊಂಡಿರ್ತಾನೆ... ಸುಮ್ನೆ ಯಾಕೆ ಚಿಂತೆ ಮಾಡ್ತೀಯಾ...? ಇನ್ನೂ ಕೆಲವು ದಿನ ಹೋದ ಮೇಲೆ ಬಿಸಿ ತಣ್ಣಗಾಗುತ್ತೆ. ಆಗ ಬರ್ತಾನೆ ಬಿಡು."

"ಹೇಗ್ರೀ ತಣ್ಣಗಾಗುತ್ತೆ? ಇದು ಕೊಲೆ ಕೇಸು... ಇದಲ್ಲದೇ ಇನ್ನೂ ಒಂದು ಆರೋಪ ಅವನ ಮೇಲಿದೆ... ನಿಜವಾಗಿಯೂ ಅವನು ನಿರಪರಾಧಿ... ನನ್ನ ಮಗನ ಮೇಲೆ ನನಗೆ ನಂಬಿಕೆ ಇದೆ. ಯಾರೋ ಹೆದರಿಸ್ತಿದಾರೆ ಅಂತ ಕಾಣುತ್ತೆ... ಈ ಸುಧಾಮನೂ ಬಾಯ್ಮೇಲೆ ಬೆರಳನ್ನಿಟ್ಟುಕೊಂಡು ಕೂತಿದಾನೆ. ತಮ್ಮ ಅನ್ನೋ ವ್ಯಾಮೋಹ ಬೇಡ್ವಾ ಅವನ್ಗೇ?"

"ಸುಧಾಮ ಸಂಸಾರಸ್ಥನಾಗಿದಾನೆ. ಹೆಂಡತಿಗೆ ಹೆರಿಗೆ ಸಮಯ... ಈ ಹಗರಣದಲ್ಲಿ ಸಿಕ್ಕಿ ಹಾಕಿಕೊಳ್ಳಲು ಹೆದರ್ತಾನೆ. ಅಷ್ಟು ಅರ್ಥವಾಗೋಲ್ವ ನಿಂಗೆ?"

"ಎಲ್ರೂ ಸ್ವಾರ್ಥಿಗಳು... ನಮ್ಮ ಬಗ್ಗೆ ಚಿಂತೆಯೇ ಇಲ್ಲ... ಆ ಹುಡುಗಿ ಸೀಮಾ, ಇವನ ಹಿಂದೆ ಮುಂದೆ ಸುತ್ತುತ್ತಿದ್ಲಂತೆ... ಈಗ ಸುಮ್ಮನಾಗಿ ಬಿಟ್ಟಿದ್ದಾಳೆ. ಅವಳದ್ದು ಏನ್ಕತೆಯೋ ಏನೋ...? ನೋಡೋಣ ವಾಣಿಗೆ ಫೋನು ಮಾಡ್ತೀನಿ..." ಎನ್ನುತ್ತಾ ಅವಳ ನಂಬರಿಗೆ ಡಯಲ್ ಮಾಡಿದಳು.

ಬೆಳಗಿನ ಕಾಫಿಯನ್ನು ಕುಡಿಯುತ್ತ ಕೂತಿದ್ದ ಶಶಾಂಕ್...ಸೀಮಾಳ ಮೊಬೈಲ್ ರಿಂಗಾದ ಸದ್ದು ಆಲಿಸಿ, ಅವಳೇ ಇರಬಹುದೆಂದುಕೊಂಡು ಎತ್ತಿಕೊಂಡು ... 'ಹಾಯ್' ಎಂದ.

"ಯಾರದು? ವಾಣೀನಾ? ಸೀಮಾ ಇಲ್ವಾ?" ಅತ್ತಲಿಂದ ಗೊಗ್ಗರು ಧ್ವನಿ ಕೇಳಿತು.

"ನೀವ್ಯಾರು? ಸೀಮಾ ಇನ್ನೂ ಎದ್ದಿಲ್ಲ...." ಎಂದ ತಮಾಷೆಯಾಗಿ

"ನಾನು ಗೌತಮನ ತಾಯಿ... ಅವಳು ಎದ್ದ ಮೇಲೆ ನನಗೆ ಫೋನು ಮಾಡಕ್ಕೆ ಹೇಳಿ.... ಮುಖ್ಯವಾದ ವಿಷಯವನ್ನು ಮಾತಾಡಬೇಕಿತ್ತು...." ಎಂದಳು.

"ಸರಿ ಹೇಳ್ತೀನಿ" ಎಂದು ಹೇಳಿ, ಆ ನಂಬರನ್ನು ಗುರುತು ಹಾಕಿಕೊಂಡ. ಅದು ಗೌತಮನ ಮನೆಯ ನಂಬರ್ರು ಆಗಿರಲಿಲ್ಲ... ಎಲ್ಲಿಂದ ಮಾಡಿರಬಹುದು ಅಂತ ಗೊತ್ತಾಗಲಿಲ್ಲ.... ಸೀಮಾಳಿಗೆ ಈ ವಿಷಯ ತಿಳಿಸುವುದೋ ಬೇಡವೋ ಅಂತ ಅಂದುಕೊಳ್ಳುವಷ್ಟರಲ್ಲಿ ಮನೆಯ ಮುಂದೆ ಆಟೋ ನಿಂತಿತು. ಅದರಿಂದ ವಾಣೀ ಹಾಗೂ ಸೀಮಾ ಇಳಿದರು. ಇವನು ಮೊಬೈಲನ್ನು, ಅವಳ ಹ್ಯಾಂಡ್ ಬ್ಯಾಗನ್ನು ಎತ್ತಿಕೊಂಡು ಆಟೋ ಬಳಿಗೆ ಬಂದ. "ಹಲೋ ಸೀಮಾ...." ಎಂದು ಮುಗುಳ್ನಕ್ಕು ವಾಣಿಯ ಕಡೆ ನೋಡಿದ.

"ಇವರು ನನ್ನ ಆಪ್ತ ಸ್ನೇಹಿತೆ, ವಾಣೀ ಅಂತ...." ಪರಿಚಯಿಸಿದಳು.

"ಹಲೋ, ನಾನು ಶಶಾಂಕ್" ತನ್ನ ಪರಿಚಯವನ್ನು ಹೇಳಿಕೊಂಡ.

"ಹ್ಞೂಂ ಸೀಮಾ ಹೇಳಿದಾಳೆ... ನಾನು ಇವಳ ಆಪ್ತ ಸ್ನೇಹಿತೆ" ಎಂದಳು ಹಗುರವಾಗಿ ನಗುತ್ತಾ.... ಶಶಾಂಕ ಸೀಮಾಳ ಕೈಗೆ ಹ್ಯಾಂಡ್ ಬ್ಯಾಗನ್ನು ಕೊಟ್ಟ...

"ಒಳಗೆ ಕರೆಯೋಲ್ವಾ...?" ವಾಣಿ ಕೇಳಿದಳು.

"ಓ... ಬನ್ನಿ... ಧಾರಾಳವಾಗಿ ಬನ್ನಿ..." ಗಂಭೀರವಾಗಿ ಕರೆದಾಗ, ಸೀಮಾ ವಾಣಿಯನ್ನು ತಡೆದಳು.

"ಶಶಾಂಕ್... ಎನಿ ಪ್ರಾಬ್ಲಂ... ಸೀರಿಯಸ್ ಆಗಿದೀರಿ..."

"ಹ್ಞೂಂ, ನಾನು ನಿಮ್ಮ ಹತ್ರ ಮುಖ್ಯವಾದ ವಿಷಯವನ್ನು ಮಾತಾಡ್ಬೇಕಾಗಿತ್ತು" ಎಂದ.

"ಸರಿ ಹಾಗಾದ್ರೆ, ನಾನು ಹೋಗಿರ್ತೀನಿ. ನನಗೆ ನಿಮ್ಮ ತಾಯಿಯ

ಪರಿಚಯವಿದೆ" ಎಂದು ಹೇಳಿ ವಾಣಿ ಮನೆಯ ಕಡೆ ನಡೆದಳು.

"ನನಗೆ, ನಿಮ್ಮ ತಾಯಿಯನ್ನು ಪರಿಚಯ ಮಾಡಿಕೊಡಲು ಇಷ್ಟವಿಲ್ವಾ?" ಸೀಮಾ ಕೇಳಿದಳು.

"ಹಾಗಲ್ಲ, ನೀವೇ ಗೌತಮನ ಗರ್ಲ್ ಫ್ರೆಂಡ್ ಅಂತ ಅಮ್ಮ ಅಪ್ಪನಿಗೆ ತಿಳಿದರೆ ನಿಮಗೆ ಬೇಸರವಾಗುವ ಹಾಗೆ ಏನಾದ್ರೂ ಮಾತಾಡಿ ಬಿಡ್ತಾರೋ ಅಂತ...."

"ಏನಾದ್ರೂ ಆಡ್ಲಿ ಬಿಡಿ... ಅವರೂ ಅಪ್ಸೆಟ್ ಆಗಿದಾರೆ ಅಲ್ವಾ..?"

"ಈಗ ಸ್ವಲ್ಪ ಹೊತ್ತಿಗೆ ಮುಂಚೆ ಗೌತಮನ ತಾಯಿ ಫೋನು ಮಾಡಿದ್ರು... ನಿಮ್ಮ ಹತ್ರ ಮುಖ್ಯವಾದ ವಿಷಯವನ್ನು ಮಾತಾಡ್ಬೇಕಂತೆ."

"ಯಾವ ವಿಷಯ?"

"ನಂಗೊತ್ತಿಲ್ಲ ಸೀಮಾ... ನಾನು ಸ್ವಲ್ಪ ತಮಾಷೆ ಮಾಡ್ಬಿಟ್ಟೆ....." ಎಂದು ಹೇಳಿದ.

"ಯಾಕೆ ಹೀಗೆ ಏನೇನೋ ಆಡಿ ಬಿಡ್ತೀರಿ. ಏನಾಗಿದೆ ನಿಮ್ಗೆ?" ಲಘುವಾಗಿ ಕೇಳಿದಳು.

"ನಂಗೆ ಏನಾಗಿದೆ, ಅಂತ ನಿಮಗೆ ಗೊತ್ತಿಲ್ವಾ ಸೀಮಾ... ಹೀಗೇ ಮುಂದುವರೆದರೆ ನನ್ನ ತಲೆ ಕೆಡುತ್ತೆ ಅಷ್ಟೇ...."

"ಅಷ್ಟು ವೀಕ್ ಆಗ್ಬೇಡಿ ಶಶಾಂಕ್... ಹಳೆಯದನ್ನು ಮರೆತು ಹೊಸ ಬಾಳನ್ನು ಶುರು ಮಾಡಿ...." ಸಲಹೆಯನ್ನಿತ್ತಳು.

"ಅದು ಅಷ್ಟು ಸುಲಭ ಅಲ್ಲ ಅಂತ ನಿಮಗೂ ಗೊತ್ತು... ಒಂದು ವೇಳೆ ಗೌತಮ ನಿಮ್ಮಿಂದ ದೂರ ಆಗಿಬಿಟ್ಟರೆ, ನೀವೂ ಹಳೆಯದ್ದನ್ನು ಮರೆತು ಹೊಸ ಬಾಳನ್ನು ಪ್ರಾರಂಭ ಮಾಡ್ತೀರಾ?"

"ಪ್ರಯತ್ನ ಮಾಡ್ತೀನಿ... ಆದರೆ ಆ ಸಂದರ್ಭ ಅಂತು ಖಂಡಿತಾ ಬರಲ್ಲ..."

"ನಿಮ್ಮ ಆಪ್ಟಿಮಿಸಂ ಚೆನ್ನಾಗಿದೆ. ಐ ಲೈಕ್ ಇಟ್... ಒಳಗೆ ಬರ್ತೀರಾ, ಒಂದು ಕಪ್ ಕಾಫಿ ಕುಡಿದು ಹೋಗೋವ್ರಂತೆ."

"ಇವತ್ತು ಬೇಡ ಶಶಾಂಕ್. ಇವತ್ತು ನನ್ನ ಮೂಡ್ ಕಾಫಿಯನ್ನು ಕುಡಿಯಲು ಸಿದ್ಧವಾಗಿಲ್ಲ."

"ಏನ್ರೀ ನೀವು? ಎಲ್ರೂ ಕಾಫಿ ಕುಡಿದು ಮೂಡ್‌ನ ಸರಿ ಮಾಡ್ಕೋತಾರೆ... ನೀವು ಕಾಫಿ ಕುಡಿಯೋಕೆ ಮೂಡ್ ಇಲ್ಲ ಅಂತೀರಾ... ಏನು ಕೊರೀತಿದೆ?"

"ಗೌತಮನ ಸುತ್ತ ಮುತ್ತ ನನ್ನ ಮನಸ್ಸು ಹೊಯ್ದಾಡುತ್ತಲೇ ಇದೆ. ನಿಮಗೂ ಅವನ ಬಗ್ಗೆ ತಪ್ಪು ಕಲ್ಪನೆ, ನನ್ನ ತಂದೆಗೂ ಅವನ ಬಗ್ಗೆ ಒಳ್ಳೆಯ ಅಭಿಪ್ರಾಯ

ವಿರಲಿಲ್ಲ. ಗೌತಮನ ತಾಯಿಗೆ ನಾನು ಹಿಡಿಸಿರಲಿಲ್ಲವೇನೋ... ಈ ಸಮಯದಲ್ಲಿ ಅವನು ಬೇರೆ ಎಲ್ಲೋ ಕೂತಿದಾನೆ. ಅವನಿರುವಲ್ಲಿಗೆ ನಾನು ಹೋಗಿ ಇರಕ್ಕೆ ಆಗುತ್ತಾ... ಅವನು ಸಧ್ಯಕ್ಕಂತೂ ಇಲ್ಲಿಗೆ ಬರೋಲ್ಲ... ಪೋಲೀಸರಿಗೆ ತಿಳಿಸಕ್ಕೆ ನನ್ನ ಮನಸ್ಸು ಒಪ್ಪುತ್ತಿಲ್ಲ. ನೀವೂ ಸರಿಯಾದ ಸಲಹೆಯನ್ನು ಕೊಡುವುದಿಲ್ಲ... ನಂಗೆ ಸಾಕಾಗಿ ಹೋಗಿದೆ... ಇದೆಲ್ಲಾ ಯಾವಾಗ ಮುಗಿಯುತ್ತೋ...ಅಂತ ಅನ್ನಿಸಿಬಿಟ್ಟಿದೆ..." ಶಶಾಂಕ ಸುಮ್ಮನೆ ನೋಡಿದ.

"ಹೋಗ್ಲಿ ಬಿಡಿ, ನಿಮ್ಮನ್ನು ಯಾಕೆ ಬ್ಲೇಮ್ ಮಾಡ್ಲೀ? ನಿಮ್ಮ ಮೈಂಡೇ ಸರಿಯಾಗಿಲ್ಲ... ನಿಮಗೊಬ್ಬಳು ಅಕ್ಕ ಇದಾಳೆ ಅಂತ ಕೇಳಿದ್ದೆ... ಅವರ ಮನೆಗೆ ಹೋಗಿ, ನಾಲ್ಕು ದಿನ ಇದ್ದು ಬನ್ನಿ... ಸ್ಥಳ ಬದಲಾವಣೆ ಆಗುತ್ತೆ..."

"ಈ ಪ್ಲೇಸ್ ಬಿಟ್ಟು ಎಲ್ಲಿಗೂ ಹೋಗುವ ಹಾಗಿಲ್ಲ. ಪೋಲೀಸ್ ಅಧಿಕಾರಿಯ ಹುಕುಂ ಅದು... ಕೇಸ್ ನಡೆಯುತ್ತಿದೆಯಲ್ಲ. ಇದೆಲ್ಲ ನಡೆಯದೇ ಇದ್ದಿದ್ದರೆ, ಹನಿಮೂನ್‌ಗೆ ಹೋಗುವ ತಯಾರಿಯಲ್ಲಿರ್ತಿದ್ದೆ" ಅವಳು ಪಿಳಿ ಪಿಳಿ ಅವನ ಮುಖವನ್ನೇ ನೋಡಿದಳು ಅಷ್ಟರಲ್ಲಿ ವಾಣಿ ಹೊರಕ್ಕೆ ಬಂದಿದ್ದಳು. ಇವರಿಬ್ಬರೂ ಅವಳನ್ನು ಮರೆತೇ ಬಿಟ್ಟಿದ್ದರು ಎನ್ನುವಂತೆ ಅವಳನ್ನು ನೋಡಿದರು. ಮುಂಬಾಗಿಲಿನಲ್ಲಿ ನಿಂತಿದ್ದ ತಾಯಿ, ಸೀಮಾಳನ್ನೇ ಮತ್ತೆ ಮತ್ತೆ ನೋಡಿದಳು. ಶಶಾಂಕನೊಡನೆ ಅದೇನು ಎಷ್ಟು ಮಾತನಾಡುತ್ತಿದ್ದಾಳೆ ಅಂತ ಯೋಚಿಸಿದಳು.

ಆಟೋದಲ್ಲಿ ಕುಳಿತಿದ್ದ ಸೀಮಾ ಶಶಾಂಕನ ಬಗ್ಗೆಯೇ ಯೋಚಿಸುತ್ತಿದ್ದಳು. ಮೊಬೈಲ್ ರಿಂಗಾದದ್ದು ಸಹ ಕೇಳಿಸಿರಲಿಲ್ಲ. ವಾಣಿ ಎಚ್ಚರಿಸಿದಳು. "ಯಾರೋ ಕಾಲ್ ಮಾಡ್ತಿದಾರೆ" ಸೀಮಾ ಫೋನನ್ನೆತ್ತಿಕೊಂಡು "ಹಲೋ" ಎಂದಳು.

"ಸೀಮಾ ಎಲ್ಲಿದ್ದೀಯಾ....? ಏನದು ಅಷ್ಟು ವಾಯ್ಸ್?"

"ಮನೆಗೆ ಹೋಗ್ತಾ ಇದೀನಿ. ಆಟೋದಲ್ಲಿ ಕೂತಿದೀನಿ."

"ನೆನ್ನೆ ರಾತ್ರಿ ನೀನು ಐ.ಸಿ.ಯು.ಸಲ್ಲಿದ್ದೀಯಂತ ಯಾವನೋ ರ‍್ಯಾಸ್ಕಲ್ ಹೇಳಿದ.... ಅವನ್ಯಾರು? ಸುಳ್ಯಾಕೆ ಹೇಳ್ದ ಅವನು?" ಕೇಳಿದ ಗೌತಮ್.

"ಸುಳ್ಳಲ್ಲ, ಏನೋ ಹುಳು ಕಚ್ಚಿತ್ತು... ಅಬ್ಸರ್ವೇಷನ್‌ನಲ್ಲಿಟ್ಟಿದ್ದರು......"

"ನಿಜ ಹೇಳ್ತಾ ಇದೀಯಾ?" ಸಿಡುಕಿದ.

"ಸುಳ್ಯಾಕೆ ಹೇಳಲಿ? ನೀನ್ಯಾಕೆ ರೇಗ್ತಿದೀಯ.......?"

"ನನಗೆ ಇಲ್ಲಿ ಒಬ್ಬನಿಗೇ ಇರಕ್ಕೆ ಆಗ್ತಿಲ್ಲ. ನಿಂಗೋಸ್ಕರ ಕಾಯ್ತಾ ಇದೀನಿ. ರಾತ್ರಿಯೆಲ್ಲಾ ಫೋನು ಸ್ವಿಚ್ ಆಫ್ ಆಗಿತ್ತು."

"ನಂಗೆ ಬರಕ್ಕೆ ಆಗಲ್ಲ ಗೌತಮ್.... ನಾನು ರೆಸ್ಟ್‌ನಲ್ಲಿರಬೇಕು.... ನೀನೇ ಯಾಕೆ ಬರಬಾರದು? ನಿಂಗೊಂದು ವಿಷಯ ಗೊತ್ತಾ? ನಿಮ್ಮ ತಾಯಿ ದೇವರಲ್ಲಿ

ನಿನ್ನ ಫೋಟೋ ಸಮೇತ ಪ್ರಕಟಣೆ ಹಾಕ್ಸಿದಾರೆ..."

"ಹೆದರಿಸ್ತಿದೀಯಾ?"

"ನಾನ್ಯಾಕೆ ಹೆದರಿಸ್ಲಿ? ನಿಜಾನೇ ಹೇಳ್ತಿದೀನಿ......."

"ಯಾವ ಪೇಪರು? ಕನ್ನಡವೋ ಇಂಗ್ಲೀಷೋ?"

"ಕನ್ನಡ......"

"ಸಧ್ಯ! ಇಲ್ಲಿ ಕನ್ನಡ ಪೇಪರ್ರು ಬರುವುದಿಲ್ಲ......."

"ನಾನು ವಿಷಯವನ್ನು ತಿಳಿಸಿದೀನಿ. ನೀನು ನಿನ್ನ ತಂದೆ-ತಾಯಿಗೋಸ್ಕರ ವಾದ್ರೂ ವಾಪಸ್ಸು ಬಾ ಗೌತಮ್."

"ವಾತಾವರಣದ ಬಿಸಿ ಕಮ್ಮಿ ಆಗ್ಲಿ ನೋಡೋಣ... ನನಗೆ ನಿನ್ನ ಅವಶ್ಯಕತೆ ತುಂಬಾ ಇದೆ.... ಪ್ಲೀಸ್ ನೀನೇ ಬಾ....."

"ನಾನು ಕೆಲಸ ಗಿಲಸ ಬಿಟ್ಟು ಹೇಗೆ ಬರ್ಲಿ ಗೌತಮ್?"

"ಎಲ್ಲವನ್ನೂ ಬಿಟ್ಟು, ಎಲ್ಲರನ್ನೂ ಬಿಟ್ಟು ಬಾ.....ಇಲ್ಲೇ ಮದುವೆಯಾಗೋಣ, ಹೇಗೋ ಆಗುತ್ತೆ. ಇಲ್ಲೇ ಕೆಲಸವನ್ನೂ ಹುಡುಕೋಣ...."

"ಕೆಲಸ ಸಿಗುವುದು ಅಷ್ಟು ಸುಲಭವಲ್ಲ. ಅಲ್ಲದೇ ಮನೆ ಬಿಟ್ಟು ಓಡಿ ಹೋಗಿ ಮದುವೆಯಾಗುವುದು ನನ್ನಿಂದ ಸಾಧ್ಯವಿಲ್ಲ. ಇಲ್ಲಿಗೇ ಬಾ... ನಿನ್ನ ತಂದೆ-ತಾಯಿಯನ್ನು ಒಪ್ಪಿಸು.....ಎಲ್ಲಾ ಮತ್ತೆ ಹಿಂದಿನಂತೆ ಆಗಲಿ... ನಾವು ಮದುವೆಯಾಗೋಣ."

"ಹಾಗಾದ್ರೆ ನೀನು ನನ್ನನ್ನು ಪ್ರೀತಿಸೋದು ನಿಜ ಅಂತ ಹೇಗೆ ನಂಬಲಿ?"

"ನಾವು ಪ್ರೀತಿಸಿದೀವಿ ನಿಜ... ಆದರೆ, ಮರ್ಯಾದೆಯಾಗಿ ಮದುವೆಯಾಗಿ ಹೊಸ ಬಾಳನ್ನು ಪ್ರಾರಂಭಿಸೋಣ...."

"ಈಗಾಗ್ಲೇ ಎಲ್ಲಾ ಹಳೆಯದಾಗಿದೆ.... ಮದುವೆ ಒಂದೇ ಬಾಕಿ... ಇನ್ನೇನು ಮರ್ಯಾದೆಯ ಮಾತು? ನೀನಾಗಿಯೇ ನೀನು ನನ್ನ ಮೇಲೆ ಆಕ್ರಮಣ ಮಾಡಿದ್ದನ್ನು ಮರೆತು ಬಿಟ್ಯಾ....? ನಾನಂತೂ ಮರೆತಿಲ್ಲ."

"ಚೀಪಾಗಿ ಮಾತಾಡ್ಬೇಡ ಗೌತಮ್.... ನಾನು ಪ್ರೀತಿಯಿಂದ.." ಎಂದು ಅರ್ಧಕ್ಕೇ ಮಾತನ್ನು ನಿಲ್ಲಿಸಿ ವಾಣಿಯ ಕಡೆ ನೋಡಿದಳು.....

"ಪ್ರೀತಿಯಿಂದ ತಬ್ಬಿಕೊಂಡರೂ ಒಂದೇ, ಬಲವಂತವಾಗಿ ಒಪ್ಪಿಕೊಂಡರೂ ಒಂದೇ... ಹೆಣ್ಣು ಹೆಣ್ಣೇ... ಮಾವಿನ ಹಣ್ಣು... ಬಲು ಸವಿ...."

"ಗೌತಮ್ ಏನಾಗಿದೆ ನಿನಗೆ....? ಎಂದೂ ಹೀಗೆಲ್ಲಾ ಮಾತನಾಡಿದವನಲ್ಲ ನೀನು...."

"ಅದಕ್ಕೆಲ್ಲ ಕಾರಣ ನೀನೇ... ನೀನೇ ಆ ಆಸೆಯನ್ನು ಹೊತ್ತಿಸಿದ್ದು.... ನನಗೆ

ಈಗ ನೀನು ಬೇಕೇ ಬೇಕು. ನೀನಿಲ್ಲದೆ ಬದುಕಲಾರೆ.... ನನಗೆ ಹುಷಾರು ಬೇರೆ ಇಲ್ಲ. ನಾನು ಸತ್ತೇ ಹೋಗ್ತೀನಿ... ಬರ್ತೀಯಾ ಅಲ್ವಾ..?" ಉದ್ವೇಗದಿಂದ ಕೇಳಿದ.

"ಹಾಗೆಲ್ಲ ದಿಢೀರನೆ ಬರೋಕ್ಕೆ ಆಗಲ್ಲ ಗೌತಮ್.... ನಂಗೆ ಸ್ವಲ್ಪ ಸಮಯವನ್ನು ಕೊಡು...ಹಾಗೇ ನಿನ್ನ ಅಡ್ರೆಸ್, ಫೋನು ನಂಬರನ್ನು ಕೊಡು... ನಾನು ಮತ್ತೆ ಮಾತಾಡ್ತೀನಿ. ಈಗ ಮನೆಯ ಬಳಿಗೆ ಬಂದಿದೀನಿ..."

"ನೀನೊಬ್ಬೇ ಇದೀಯೋ.... ಅಥವಾ ನಿನ್ನ ಜೊತೆ ಬೇರೆ ಯಾರಾದ್ರೂ ಇದಾರೋ....?"

"ನನ್ನ ಜೊತೆ ನನ್ನ ಪರಿಚಯದವರೊಬ್ಬರು ಇದಾರೆ. ಪರವಾಗಿಲ್ಲ ಮಾತಾಡು...."

"ಮುಂಚೇನೇ ಹೇಳೋಕ್ಕಾಗ್ಲಿಲ್ವಾ..? ಈಗ ನಾನು ಫೋನು ನಂಬರನ್ನು ಕೊಡಲ್ಲ. ಮನೆಗೆ ಹೋದ್ಮೇಲೆ ಕೊಡ್ತೀನಿ." ಎಂದು ಹೇಳಿ ಫೋನನ್ನು ಸ್ವಿಚ್ ಆಫ್ ಮಾಡಿದ್ದ... ಸೀಮಾ ವಾಣಿಯ ಕಡೆ ತಿರುಗಿ ನೋಡಿ ಪೆಚ್ಚು ನಗೆಯನ್ನು ನಕ್ಕಳು.

"ಗೌತಮ ಅಲ್ವಾ ಮಾತಾಡಿದ್ದು?" ಅವಳು ಕೇಳಿದಳು.

"ಹೌದು...."

"ನೀನು ಈಗ್ಲೂ ಅವನನ್ನು ನಂಬಿದೀಯಾ...? ಅವನ ಮೇಲೆ ಆರೋಪ ಇದೆ. ಪೋಲೀಸು, ಕಾನೂನಿಂದ ತಪ್ಪಿಸ್ಕೊಂಡು ಎಲ್ಲಿಯೋ ಅಡಗಿ ಕೂತಿದ್ದಾನೆ."

"ಹಾಗಿದ್ದ ಮಾತ್ರಕ್ಕೆ ಪ್ರೀತಿ ಕಡಿಮೆ ಆಗುತ್ತಾ?"

"ಆದರೂ, ನಿನ್ನ ಮಾತುಗಳಲ್ಲಿ, ವರ್ತನೆಯಲ್ಲಿ, ಗೊಂದಲವಿದೆ. ಅವನೊಡನೆ ಸಂಸಾರ ಮಾಡುವುದು ಕಷ್ಟವಾಗುತ್ತೆ...ಅದನ್ನು ಯೋಚಿಸಿಲ್ವಾ ಸೀಮಾ...?"

"ನಾನೇನ್ಮಾಡ್ಲೀ? ನಂಗೆ ಏನೂ ಗೊತ್ತಾಗ್ತಿಲ್ಲ."

"ಅವನನ್ನೇ ಮದುವೆಯಾದರೆ ನೀನು ಖಂಡಿತಾ ಸುಖವಾಗಿರಲ್ಲ.... ಏನಾದರೂ ತೀರ್ಮಾನವನ್ನು ತೆಗೆದುಕೊಳ್ಳುವ ಮೊದಲು, ಕೆಲವು ಸಂದೇಹಗಳು ನಿವಾರಣೆಯಾಗಲೇಬೇಕು ಸೀಮಾ... ದುಡುಕಬೇಡ...."

"ನಾನು ಈಗಾಗ್ಲೇ ದುಡುಕಿಬಿಟ್ಟಿದ್ದೀನಿ ವಾಣೀ...ಅವನಿಗೆ ನನ್ನ ಮೈಯನ್ನು ಒಪ್ಪಿಸಿಕೊಂಡು ಬಿಟ್ಟಿದ್ದೀನಿ..."

"ಛೆ!, ಹೀಗೆ ನೀನು ಮಾಡ್ಬಾರದಾಗಿತ್ತು... ಅವನ ಕಾಮಕ್ಕೆ ನೀನು ಬಲಿಯಾಗ ಬಾರದಾಗಿತ್ತು. ವಿರೋಧಿಸಬೇಕಾಗಿತ್ತು... ಯಾಕೆ ಹೀಗೆ ಮಾಡಿದೆ...?"

"ಏನೋ ನಂಗೊತ್ತಿಲ್ಲ...ಅವನ ಸಾಮೀಪ್ಯ ನನ್ನನ್ನು ಉದ್ರೇಕಗೊಳಿಸಿತು...

ಏಕಾಂತ ನಮ್ಮಿಬ್ಬರನ್ನೂ ಒಂದು ಗೂಡುವಂತೆ ಮಾಡಿತು. ನಾನೀಗ ಅವನವಳು... ಅವನನ್ನು ಬಿಟ್ಟು ಬೇರೆ ಯಾರನ್ನೋ ಮದುವೆಯಾಗಿ ಹೇಗಿರಲಿ...?"

"ಇದೊಂದು ಕೆಟ್ಟ ಕನಸು ಅಂತ ಮರೆತುಬಿಡು... ರೇಣುಕಾಳನ್ನ ತನ್ನ ಮನೆಗೆ ಕರೆದುಕೊಂಡು ಹೋಗಿ ರೇಪ್ ಮಾಡಿ ಕೊಲೆ ಮಾಡಿದಾನೆ ಅನ್ನುವ ಆರೋಪ ಬೇರೆ ಅವನ ಮೇಲಿದೆ... ಅವನು ನಿನಗೆ ಅನ್ಯಾಯ ಮಾಡಿದ್ದಾನೆ... ನಿನ್ನೊಡನೆ ಸುಖಿಸಿಯೂ ಬೇರೊಬ್ಬ ಹೆಣ್ಣಿನ ಮೇಲೆ ಅತ್ಯಾಚಾರ ಮಾಡಿದಾನೆಂದರೆ..."

"ಈ ಸುದ್ದಿ ಪೂರ್ತಿ ನಿಜವಲ್ಲ ವಾಣೀ...."

"ಪೂರ್ತಿ ಸುಳ್ಳೂ ಇರಲಾರದು. ಬೆಂಕಿ ಇಲ್ಲದೇ ಹೊಗೆ ಏಳಲ್ಲ... ನಿನ್ನ ಪ್ರೀತಿಗೆ ಅವನು ಅರ್ಹನಲ್ಲ... ಅವಿವೇಕಿ. ನಡೆದುದನ್ನು ನಿನ್ನೊಡನೆ ಮುಕ್ತವಾಗಿ ಹೇಳಿ, ತಪ್ಪಿಗೆ ನಿನ್ನ ಬಳಿ ಕ್ಷಮೆ ಕೇಳಿದ್ದರೆ, ಆ ಮಾತೇ ಬೇರೆ ಇರ್ತಿತ್ತು ಅಲ್ವಾ ...? ಅವನು ಅಪರಾಧ ಮಾಡಿಲ್ಲದಿದ್ದರೆ ಏಕೆ ಓಡಿ ಹೋಗಿದಾನೆ...? ಏನು ನಡೀತು ಅಂತ ನಿನ್ನ ಬಳಿ ಹೇಳಬಹುದಾಗಿತ್ತು ಅಲ್ವಾ...? ಒಂದು ವೇಳೆ ನಿನ್ನಿಂದ ಅಪರಾಧವಾಗಿರಬಹುದು ಅನ್ನುವ ಅನುಮಾನ ಬಂದಿದ್ದರೂ ಸುಮ್ಮನೆ ಇರ್ತಿದ್ನಾ...?"

"ನಾನೀಗ ಏನು ಮಾಡ್ಲೀ ವಾಣೀ...?"

"ಮೊದಲು ನಿನ್ನ ಅನುಮಾನಗಳನ್ನು ಪರಿಹರಿಸಿಕೋ... ನೀನು ಕೇಳುವ ಪ್ರಶ್ನೆಗಳಿಗೆ ಅವನು ನೇರವಾದ ಉತ್ತರವನ್ನು ಹೇಳಲೇಬೇಕು... ನಿಮ್ಮಿಬ್ಬರಿಗೂ ಇದೊಂದು ತರಹದ ಪರೀಕ್ಷೆ... ಅವನು ನಿಜವನ್ನು ಹೇಳಲಾರದೇ ತಡವರಿಸಿದರೆ ಅಥವಾ ನಿಜವನ್ನು ಹೇಳಿಬಿಟ್ಟರೇ... ಅವನ ನಿಜರೂಪ ತಿಳಿಯುತ್ತದೆ..."

"ನಾನು ಅನುಮಾನ ಪಟ್ಟೆ ಅನ್ನುವ ಕೋಪಕ್ಕೆ ಅವನು ನನ್ನಿಂದ ದೂರವಾಗಿಬಿಟ್ಟರೇ...?"

"ಅವನು ನಿನ್ನ ಪ್ರೀತಿಗೆ ಅರ್ಹನೇ ಅಲ್ಲ. ನಿಜವಾದ ಪ್ರೇಮಿಗಳಲ್ಲಿ ಯಾವ ಮುಚ್ಚು ಮರೆಯೂ ಇರಬಾರದು... ನಿನ್ನ ಬಗ್ಗೆ ಪ್ರಶ್ನಿಸುವ ಹಕ್ಕು ಅವನಿಗೆ ಇರುವಂತೆ, ನಿನಗೂ ಅವನನ್ನು ಪ್ರಶ್ನಿಸುವ ಹಕ್ಕು ಇದೆ... ಯಾವುದೋ ಹಳೇ ಕಾಲದಲ್ಲಿ ನಾವುಗಳು ಇಲ್ಲ... ಈಗ ಸ್ತ್ರೀ ಪುರುಷರಿಗೆ ಸಮಾನತೆ ಇದೆ. ನೀನೇನೂ ಅವನ ಮೇಲೆ ಡಿಪೆಂಡ್ ಆಗಿಲ್ಲ... ನೀನು ತಪ್ಪು ಮಾಡಿಲ್ಲ. ನಿನಗ್ಯಾಕೆ ಭಯ?"

"ನನ್ನಿಂದ ಒಂದು ತಪ್ಪು ನಡೆದು ಹೋಗಿದೆ ವಾಣೀ..."

"ಅದನ್ನೇ ನೆನೆಸ್ಕೋತಾ ಇರ್ಬೇಡ.... ಆ ಒಂದು ತಪ್ಪಿನಿಂದ ನಿನ್ನ ಜೀವನ ನಿಂತು ಹೋಗಲ್ಲ... ಅದನ್ನು ಒಂದು ಆಕಸ್ಮಿಕ ಅಂತ ಅಂದ್ಕೋ ಅಷ್ಟೇ....."

"ಅವನು ಬ್ಲಾಕ್ ಮೇಲ್ ಮಾಡಿದರೆ...?"

"ಈಗಾಗ್ಲೇ ಅವನ ಮೇಲೆ ಎರಡು ಆರೋಪ ಇದೆ. ಅದರ ಜೊತೆಗೆ ಇದೂ ಒಂದು ಸೇರಿಕೊಳ್ಳುತ್ತೆ.... ನೀನು ಯಾರೊಡನೆಯೂ ಈ ವಿಷಯವನ್ನು ಹೇಳ್ಬೇಡ.... ನನಗೆ ಹೇಳಿದೀನಿ ಅನ್ನೋದನ್ನೂ ಮರೆತುಬಿಡು... ಎಷ್ಟೋ ಜನ ಹೆಣ್ಣು ಮಕ್ಕಳಿಗೆ ಹೀಗೇ ಆಗುತ್ತೆ. ಆದ್ದರಿಂದಲೇ ಎಚ್ಚರವಾಗಿರಬೇಕು ಅನ್ನೋದು. ಈಗಲಾದರೂ ಎಚ್ಚೆತ್ತುಕೋ. ಅವನು ನಿರಪರಾಧಿ ಅಂತ ಸಾಬೀತು ಆಗಲಿ... ಸಂತೋಷದಿಂದ ಮದುವೆಯಾಗು..." ವಾಣಿಯ ಮಾತುಗಳಿಂದ ಅವಳ ಆಲೋಚನೆಯ ಗತಿ ಬದಲಾಯಿಸಿತು. ಅವಳು ಮನೆಗೆ ಬಂದು, ರೆಸ್ಟ್ ತೆಗೆದು ಕೊಳ್ಳುತ್ತಿದ್ದಂತೆಯೇ ಗೌತಮ್ ಮತ್ತೆ ಫೋನು ಮಾಡಿದ್ದ....

"ನನ್ನನ್ನು ರೆಸ್ಟ್ ತೆಗೆದುಕೊಳ್ಳಲೂ ಬಿಡಲ್ಲವಲ್ಲ ಗೌತಮ್... ಯಾಕೆ ಹೀಗೆ ಆಡ್ತೀಯಾ.....?"

"ಇಲ್ಲಿ ನನ್ನ ಪ್ರಾಣ ಹೋಗ್ತಾ ಇದೆ. ನಿನಗೆ ಎಂಥಾ ರೆಸ್ಟ್....?"

"ಯಾಕೆ? ನಾನೂ ನಿನ್ಹಾಗೇ ಮನುಷ್ಯಳಲ್ವಾ...? ಈಗ ನಿಂಗೆ ನನ್ನಿಂದ ಏನಾಗ್ಬೇಕಾಗಿದೆ? ಸರಿಯಾಗಿ ಹೇಳು....?"

"ನನಗೆ ನೀನು ಬೇಕು... ಸ್ವಲ್ಪ ಹಣವೂ ಬೇಕು... ನಿನಗೆ ನನ್ನನ್ನು ನೋಡ್ಬೇಕು ಅಂತ ಅನ್ನಿಸಲ್ವಾ ಡಿಯರ್....? ಮಿಸ್ ಮಾಡ್ಕೋತಿಲ್ವಾ ನನ್ನನ್ನು...?

"ಹೌದು ಗೌತಮ್... ಹಗಲೂ ರಾತ್ರಿ ನಾನು ನಿನ್ನ ಬಗ್ಗೇನೇ ಯೋಚಿಸ್ತೀನಿ... ಈಗ ಒಂದು ಕೋರ್ಸ್ ಇಂಜೆಕ್ಷನ್ ತಗೊಂಡಿದೀನಿ... ಅದು ಮುಗಿಯುವವರೆಗೂ, ನನ್ನನ್ನು ಡಿಸ್ಟರ್ಬ್ ಮಾಡ್ಬೇಡ... ನನಗೆ ಒಂಥರಾ ಭಯ ಆಗುತ್ತೆ..."

"ಏನು ಭಯ? ಸತ್ತು ಹೋಗ್ತೀನಿ ಅಂತಲಾ...? ಹಾಗೇನೂ ಆಗೋಲ್ಲ.... ನಾವಿಬ್ರೂ ಮದುವೆಯಾಗಿ ಸುಖವಾಗಿರ್ಬೇಕು....ಒಂದೆರಡು ಮಕ್ಕಳಾದ್ರೂ ಆಗ್ಬೇಕು..."

"ಅದೆಲ್ಲಾ ಸುಲಭಾನಾ ಗೌತಮ್.... ಯೋಚಿಸು.... ಕದ್ದು ಮುಚ್ಚಿ ಸಂಸಾರ ಮಾಡೋಕ್ಕೆ ಆಗುತ್ತಾ....? ಪೋಲೀಸರ ಭಯದಲ್ಲಿ ದಿನ ತಳ್ಳೋಕೆ ಆಗುತ್ತಾ...? ನೀನು ಏನೂ ತಪ್ಪು ಮಾಡಿಲ್ಲ ಅಂತ ಒಳ ಮನಸ್ಸು ಹೇಳ್ತಿದೆ.... ನನಗೆ ನಿನ್ನ ಮೇಲೆ ನಂಬಿಕೆ ಇದೆ. ಕಡೇ ಪಕ್ಷ ನನ್ನ ಸಂತೋಷಕ್ಕಾಗಿಯಾದರೂ ಏನು ನಡೆಯಿತು ಅಂತ ಹೇಳು... ನಾನು ನಿನ್ನ ಆಪ್ತ ಸ್ನೇಹಿತೆ ಅಲ್ವಾ..?"

"ಹೀಗೆ ಮಾತಾಡು ಅಂತ ನಿನಗೆ ಯಾರು ಹೇಳಿಕೊಟ್ರು...?"

"ಯಾರೂ ಹೇಳಿಕೊಟ್ಟಿಲ್ಲ...ಕೇಳುವ ಹಕ್ಕು ನನಗಿಲ್ವಾ..?"

"ಮೊದಲು ನಮ್ಮಿಬ್ಬರ ಮದುವೆ ನಡೀಲಿ... ಆಮೇಲೆ ನಿನಗೆ ಆ ಹಕ್ಕು ಬರುತ್ತೆ.... ನನ್ನ ಮೇಲೆ ನಿನಗೆ ನಂಬಿಕೆ ಇದ್ದ ಮೇಲೆ ಈ ಅನುಮಾನದ

ಮ್ಯಾತ್ಯಾಕೆ....?"

"ಸರಿ, ನಾನು ಅನುಮಾನ ಪಡಲ್ಲ. ನನಗಿಂತ ಹೆಚ್ಚಾಗಿ ಕೊರಗುತ್ತಿರುವವರು ನಿನ್ನ ತಾಯಿ... ಮನೆಗೆ ಪೋಲೀಸರು ಬೀಗ ಹಾಕಿರುವುದರಿಂದ ಅವರು ಹೋಟೆಲ್ಲಿನಲ್ಲಿದ್ದಾರಂತೆ... ನೀನು ಅಪರಾಧಿ ಅಲ್ಲ ಅಂತ ಸಾಬೀತು ಮಾಡಿದರೆ, ಎಲ್ಲಾ ಕ್ಲಿಯರ್ ಆಗುತ್ತೆ... ಯಾವ ಭಯವೂ ಇಲ್ಲದೇ ಹಾಯಾಗಿರಬಹುದು..."

"ಈ ಉಪದೇಶ ನನಗೆ ಬೇಕಿಲ್ಲ. ಒಮ್ಮೆ ಪೋಲೀಸರ ಕೈಗೆ ಸಿಕ್ಕಿಬಿದ್ದರೆ ಮುಗೀತು ನನ್ನ ಕತೆ. ಹೊಡೆದು ಬಡಿದು ಸುಳ್ಳನ್ನು ನಿಜ ಮಾಡ್ತಾರೆ. ನನಗೆ ಜೈಲು ಪೋಲೀಸರು ಅಂದ್ರೆ ಭಯ ಸೀಮಾ... ನನ್ನ ಪರಿಸ್ಥಿತೀನ ಸ್ವಲ್ಪ ಅರ್ಥ ಮಾಡ್ಕೋ ಸೀಮಾ......"

"ಹಾಗಾದ್ರೆ, ಅವತ್ತು ಏನು ನಡೀತು ಅಂಥ ನನಗೆ ಹೇಳು ಗೌತಮ್... ನಾನು ನಿನಗೆ ಹೆಲ್ಪ್ ಮಾಡ್ತೀನಿ. ಒಳ್ಳೆಯ ಲಾಯರ್ ಹತ್ರ ಮಾತಾಡಿ, ಏನು ಮಾಡ್ಬೇಕು ಅಂತ ಕೇಳ್ತೀನಿ..." ಅವಳು ಮಾತನ್ನು ಪೂರೈಸುವ ಮೊದಲೇ ಆ ಲೈನ್ ಕಟ್ಟಾಗಿತ್ತು... ನಡೆದುದನ್ನು ತಿಳಿಸಲು ಅವನಿಗೆ ಇಷ್ಟವಿಲ್ಲ ಎಂದು ಅರಿವಾಗಿತ್ತು... ಹೃದಯ ಭಾರವಾಗಿತ್ತು.... ಮನಸ್ಸು ಕುಸಿಯಿತು.

******

ಶಶಾಂಕನಿಗೆ ವಾಣಿ ಕರೆ ಮಾಡಿದಳು. "ಸೀಮಾ ತುಂಬಾ ಹೆದರಿ ಬಿಟ್ಟಿದ್ದಾಳೆ. ಎರಡು ದಿನಗಳ ಹಿಂದೆ ಅವಳಿಗೆ ಗೌತಮನಿಂದ ಫೋನು ಬಂದಿತ್ತು. ಅದಾದ ಮೇಲೆ ಅವನು ಮತ್ತೆ ಫೋನು ಮಾಡಿಲ್ಲವಂತೆ. ಅವನು ಏನೋ ಮಾಡಿಕೊಂಡು ಬಿಟ್ಟಿದ್ದಾನೆ.... ನನ್ನ ಹೆಸರು ಹೊರಕ್ಕೆ ಬರುತ್ತೆ ಅಂತ ಹೆದರಿಬಿಟ್ಟಿದ್ದಾಳೆ. ಬಂದು ಸಮಾಧಾನ ಮಾಡ್ತೀರಾ?"

"ಅವಳೀಗ ಎಲ್ಲಿದ್ದಾಳೆ? ಅವರ ಮನೆಗೆ ನಾನು ಹೇಗೆ ಹೋಗ್ಲೀ...?"

"ಅವಳು ನಮ್ಮ ಮನೇಲಿದ್ದಾಳೆ. ನೆನ್ನೆ ಬಂದಳು...."

"ನಿಮ್ಮ ಮನೆ ಎಲ್ಲಿ...?" ಎಂದು ಕೇಳಿ, ಅವಳ ಅಡ್ರೆಸ್ ತೆಗೆದುಕೊಂಡು ತಕ್ಷಣವೇ ಹೊರಟ. ತಾಯಿ ಕೇಳಿದ್ದಕ್ಕೆ ಸರಿಯಾಗಿ ಉತ್ತರವನ್ನೂ ಹೇಳಲಿಲ್ಲ. ವೇಗವಾಗಿ ಕಾರನ್ನು ಓಡಿಸಿ, ಅವರ ಮನೆಯನ್ನು ತಲುಪಿದ. ವಾಣಿಯ ಮನೆಯಲ್ಲಿ ಇದ್ದದ್ದು ಅವಳು ಹಾಗೂ ಅವಳ ತಮ್ಮ ಇಬ್ಬರೇ... ತಮ್ಮ ಹೊರಗೆಲ್ಲೋ ಹೊರಟು ಹೋಗಿದ್ದ. ಸೋಫಾದ ಮೇಲೆ ಕುಳಿತಿದ್ದ ಸೀಮಾ, ಶಶಾಂಕನನ್ನು ಕಂಡೊಡನೆ ವೇಗವಾಗಿ ಬಂದು ಅವನನ್ನು ತಬ್ಬಿಕೊಂಡಳು. ಅವನು ಅವಳನ್ನು ಸರಿಸಿದ...

"ನನಗೆ ಹೆಲ್ಪ್ ಮಾಡಿ ಶಶಾಂಕ್... ಈಗಲೇ ಅವನು ಇರುವ ಜಾಗಕ್ಕೆ ನನ್ನನ್ನು ಕರೆದುಕೊಂಡು ಹೋಗಿ. ಅವನು ಏನಾದ್ರೂ ಮಾಡ್ಕೊಂಡು ಬಿಟ್ರೆ,

ನನ್ನ ಹೆಸರೂ ಹೊರಬರುತ್ತೆ... ನಾನು ಅವನಿಗೆ ಹೆಲ್ಪ್ ಮಾಡ್ಬೇಕು..."

"ಓ... ಕೇ... ಕೂಲ್ ಡೌನ್... ಅವನು ಎಲ್ಲಿದ್ದಾನೆ ಅಂತ ತಿಳೀತಾ...?"

"ಇಲ್ಲ. ನೀವು ಪತ್ತೆ ಮಾಡಿ ಶಶಾಂಕ್..."

"ಸರಿ ಹಾಗಾದ್ರೆ, ನಿಮ್ಮ ಮೊಬೈಲ್ ಫೋನನ್ನು ಕೊಡಿ.... ಪೋಲೀಸರಿಗೆ ಹೇಳೋಣ. ಈ ಕಾಲ್ ಎಲ್ಲಿಂದ ಬಂತು ಅಂತ ಪತ್ತೆ ಮಾಡ್ತಾರೆ.. ಕೆಲವೇ ಗಂಟೆಗಳಲ್ಲಿ ಅವನು ಎಲ್ಲಿದ್ದಾನೆ ಅಂತ ಪತ್ತೆಯಾಗುತ್ತೆ..."

"ನಂಗೆ ತುಂಬಾ ಭಯ ಆಗ್ತಿದೆ ಶಶಾಂಕ್... ಅವನ್ಯಾಕೆ ಮತ್ತೆ ಕಾಲ್ ಮಾಡಿಲ್ಲ...? ಏನು ಮಾಡಿಕೊಂಡನೋ ಏನೋ...?" ಅವಳು ಅಳತೊಡಗಿದಾಗ ಅವನಿಗೆ ಬೇಸರವಾಗಿತ್ತು.

"ಅಳ್ಬೇಡಿ ಸೀಮಾ... ಅವನಿಗೆ ಏನೂ ಆಗಿರಲ್ಲ... ಅವನಿಗೆ ಏನಾದ್ರೂ ಆಗಕ್ಕೆ ಯಾರೂ ಬಿಡೋಲ್ಲ... ನಾನೀಗ್ಲೇ ಪೋಲೀಸ್ ಸ್ಟೇಷನ್‌ಗೆ ಹೋಗ್ತೀನಿ. ನೀವು ರೆಸ್ಟ್ ತಗೊಳ್ಳೀ." ಎಂದು ಹೊರಟ.

"ನಾನೂ ಬರ್ಲಾ?" ಕೇಳಿದಳು.

"ಬೇಡ ಅಂದ್ನಲ್ಲ. ನಾನು ಮಾತಾಡ್ಕೊಂಡು ಬರ್ತೀನಿ. ಏನಾದ್ರೂ ವಿಷಯ ಇದ್ದರೆ, ನಿಮಗೆ ಫೋನು ಮಾಡ್ತೀನಿ. ನೀವು ವಾಣಿ ಜೊತೇಲಿ ಬನ್ನಿ" ಎಂದು ಹೇಳಿ ಅವಳ ಫೋನನ್ನು ಎತ್ತಿಕೊಂಡು ಹೊರಟ. ಪೋಲೀಸ್ ಇನ್ಸ್‌ಪೆಕ್ಟರ್ ಇವನನ್ನು ಗುರುತಿಸಿ, ಮಾತನ್ನಾಡಿಸಿದರು. "ಏನ್ರೀ ಶಶಾಂಕ್... ಆತುರಾತುರವಾಗಿ ಬಂದಿರುವಂತೆ ಕಾಣುತ್ತೆ... ಏನು ವಿಷಯ...? ಕೊಲೆ ಮಾಡಿದವನ ಪತ್ತೆ ಮಾಡಿದ್ರಾ ಹೇಗೆ....?"

"ನಿಮಗೇನಾದ್ರೂ ವಿಷಯ ತಿಳೀತಾ ಅಂತ ಕೇಳೋಕ್ಕೆ ಬಂದೆ... ಇರಲಿ... ಇದು ಸೀಮಾಳ ಮೊಬೈಲ್ ಫೋನು. ಈ ಫೋನಿಗೆ ಗೌತಮ ಫೋನು ಮಾಡ್ತಾನಂತೆ. ಅವಳನ್ನು ಹೆದರಿಸ್ತಾ ಇದಾನಂತೆ. ಅವಳು ವಿಪರೀತ ಹೆದರಿ ಬಿಟ್ಟಿದ್ದಾಳೆ. ಇಲ್ಲಿ ನಂಬರ್ರು ಇಲ್ಲ... ಈ ಕಾಲ್ ಎಲ್ಲಿಂದ ಬಂತು ಅಂತ ಪತ್ತೆ ಹಚ್ಚಿದರೆ, ಅವನು ಇರುವ ಜಾಗ ಪತ್ತೆಯಾಗುತ್ತೆ.... ಅವನನ್ನು ಅರೆಸ್ಟ್ ಮಾಡಬಹುದು."

"ಈ ವಿಷಯಾನ ಸೀಮಾ ಮೊದಲೇ ಯಾಕೆ ತಿಳಿಸ್ಲಿಲ್ಲ? ಅದು ಅಫೆನ್ಸ್ ಅಂತ ಗೊತ್ತಿಲ್ವಾ ಅವರಿಗೆ.....?"

"ಅವನ ಮನ ವೊಲಿಸಿ, ಹೇಗಾದ್ರೂ ಇಲ್ಲಿಗೆ ಬರುವಂತೆ ಪ್ರಯತ್ನ ಪಡ್ತಾನೇ ಇದ್ರಂತೆ ಸಾರ್... ಆದರೆ ಈಗ ಎರಡು ದಿನಗಳಿಂದ ಅವನು ಫೋನು ಮಾಡಿಲ್ಲವಂತೆ... ಅವನು ತನ್ನ ಪ್ರಾಣಕ್ಕೇ ಅಪಾಯ ಮಾಡಿಕೊಂಡಿರಬಹುದೆಂದು ದಿಗಿಲು ಪಡ್ತಿದಾರೆ ಸಾರ್... ಅವನನ್ನು ಪತ್ತೆ ಹಚ್ಚಕ್ಕೆ ಆಗತ್ತೆ ಅಲ್ವಾ ಸಾರ್..."

"ಓ... ಆಗುತ್ತೆ. ನೆಟ್ ವರ್ಕ್ ಮುಖಾಂತರ ಅವನು ಎಲ್ಲೇ ಇದ್ರೂ ಪತ್ತೆ ಹಚ್ಚಬಹುದು. ನಾನು ಈಗಲೇ ಕಂಟ್ರೋಲ್ ರೂಂನ ಕಾಂಟ್ಯಾಕ್ಟ್ ಮಾಡ್ತೀನಿ..." ಎಂದು ಹೇಳಿ ಕಾರ್ಯಗತರಾದರು. ಇವನು ಥ್ಯಾಂಕ್ಸ್ ಹೇಳಿ ಹಿಂತಿರುಗಿದ. ಮತ್ತೆ ಸೀಮಾಳನ್ನು ನೋಡಿ ಸಮಾಧಾನವನ್ನು ಹೇಳಬೇಕೆಂದೆನಿಸಿತ್ತು. ವಾಣಿಯ ಮನೆಗೆ ಬಂದ...

ಸೀಮಾ ಅತ್ತು ಅತ್ತು ಸೊರಗಿ ಹೋಗಿದ್ದಳು. ಯಾಕೆಂದು ಅವನಿಗೆ ಅರ್ಥವಾಗಿರಲಿಲ್ಲ. ಇದೇನು ಹುಚ್ಚುತನ. ಅನಿಸಿತ್ತು....

"ನೆನ್ನೆಯಿಂದ ಏನನ್ನೂ ತಿಂದಿಲ್ಲ ಶಶಾಂಕ್... ಹೀಗೇ ಮಾಡಿದ್ರೆ ಅವಳ ಹೆಲ್ತ್ ಗತಿ ಏನಾಗುತ್ತೆ ಅಂತ ಭಯ ಆಗ್ತಿದೆ... ಅವಳ ತಾಯಿ ಹತ್ತಿರವೂ ಏನನ್ನೂ ಹೇಳಿಲ್ಲ. ಯಾಕೆ ಹೀಗೆ ಮಾಡ್ತಿದಾಳೋ..."

"ಅವರ ತಾಯಿಗಾದ್ರೂ ಅರ್ಥ ಆಗ್ಬೇಡ್ವಾ...? ಗೌತಮ್, ಸೀಮಾ ಒಬ್ಬರನ್ನೊಬ್ಬರು ಪ್ರೀತಿಸ್ತಿದ್ರು ಅಂಥ ಅವರಿಗೆ ಗೊತ್ತಿಲ್ವಾ...?"

"ಗೊತ್ತಿದೆ. ಆದರೆ ಈ ನೆಪದಲ್ಲಿ ಈ ಸಂಬಂಧ ತಪ್ಪಿದರೂ ತಪ್ಪಲಿ ಅಂತ ಅವರ ತಂದೆ ತಾಯಿಯೊಡನೆ ಹೇಳುತ್ತಿರುವುದನ್ನು ಕೇಳಿಸ್ಕೊಂಡಿದ್ದಾಳೆ... ಎರಡು ವರ್ಷಗಳ ಸ್ನೇಹ... ಅಷ್ಟು ಸುಲಭವಾಗಿ ಬಿಟ್ಟು ಬಿಡೋಕೆ ಆಗುತ್ತಾ ಶಶಾಂಕ್...?"

"ಹಾಗಾದ್ರೆ ಓಡಿ ಹೋಗಿ ಮದುವೆಯಾಗ್ಲಿ... ಯಾರೂ ಏನೂ ಮಾಡೋಕ್ಕಾಗಲ್ಲ. ಹೇಗೂ ಮೆಜಾರಿಟಿಗೆ ಬಂದಿದಾರೆ. ಹಾಗಂತ ನಿಮ್ಮ ಸ್ನೇಹಿತೆಗೆ ಹೇಳಿ...." ಅವನು ರೇಗಿದ.

"ನೀವೂ ಹಾಗೆ ಮಾತಾಡ್ತೀರಲ್ಲ ಶಶಾಂಕ್.... ಅವಳೀಗ ಬಹಳ ಅಪ್ಸೆಟ್ ಆಗಿದಾಳೆ... ಏನ್ಮಾಡ್ಬೇಕು ಅಂತ ತಿಳಿಯದ ಕನ್‌ಫ್ಯೂಷನ್‌ನಲ್ಲಿದ್ದಾಳೆ... ಅವನು ಅಪರಾಧ ಮಾಡಿದಾನೆ ಅಂತ ಅರ್ಥವಾಗಿದೆ. ಆದರೆ ಅದನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿಲ್ಲ..."

"ಹೀಗೇ ಮುಂದುವರೆದರೆ... ಅವರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತೆ... ಮೊದಲು ಯಾರಾದ್ರೂ ಡಾಕ್ಟರ್ ಹತ್ರ ಕರ್ಕೊಂಡು ಹೋಗಿ..."

"ನಾನು ಹೇಳಿದೆ... ಬರಲ್ಲ ಅಂತ ಹಠ ಮಾಡ್ತಾಳೆ. ನೀವಾದ್ರೂ ತಿಳುವಳಿಕೆ ಹೇಳಿ. ನಿಮ್ಮ ಮಾತನ್ನು ಕೇಳಬಹುದು..." ವಾಣಿ ಬಲವಂತ ಮಾಡಿದಾಗ, ಅವನು ಅವಳು ಕುಳಿತಿದ್ದ ರೂಮಿಗೆ ಬಂದ. ಅವನನ್ನು ಕಂಡೊಡನೆ ಸೀಮಾ ಎದ್ದಳು.

"ಏನಾಯ್ತು ಶಶಾಂಕ್... ಪೋಲೀಸರು ಏನಂದ್ರು...? ಗೌತಮ್ ಪತ್ತೆಯಾದ್ನಾ ... ಅವನಿಗೆ ಏನೂ ಆಗಿಲ್ಲ ತಾನೇ?" ಬಡಬಡನೆ ಪ್ರಶ್ನಿಸಿದಳು.

"ಅವನಿಗೆ ಏನೂ ಆಗಿಲ್ಲ... ಏನೂ ಆಗುವುದಿಲ್ಲ... ನೀವು ತುಂಬಾ ವರಿ ಮಾಡ್ಕೋತಿದೀರಿ.... ನಿಮ್ಮ ಹೆಲ್ತ್ ಕೆಟ್ಟರೆ, ಅವನಿಗೆ ಬೇಸರವಾಗೋಲ್ವಾ...? ಈಗ ಹೇಗಿದೆ ಉರಿ? ಮತ್ತೆ ಡಾಕ್ಟರ್ ಹತ್ರ ಹೋಗಿದ್ರಾ...? ವಾಣೀ ಜೊತೇಲಿ ಹೋಗ್ಬನ್ನಿ..."

"ನಂಗೆ ಏನೂ ಬೇಡ. ಗೌತಮನ ವಿಷಯ ತಿಳಿಯೋವರ್ಗೂ ನನಗೆ ನೆಮ್ಮದಿ ಇಲ್ಲ... ನನಗೆ ಯಾರೂ ಏನೂ ಹೇಳ್ಬೇಡಿ..."

"ಸರಿ, ಬೇಡ ಅಂದ್ರೆ ಬೇಡ. ನಾನು ಮತ್ತೆ ಏನೂ ಹೇಳಲ್ಲ. ನಾನು ಹೋಗ್ತೀನಿ....." ಅವನು ಬಾಗಿಲ ಕಡೆಗೆ ಸರಿದ.

"ಹೇಳ್ಬೇಡಿ ಅಂತ ಅಂದೆ, ಹೋಗಿ ಅಂತ ಅಂದ್ನಾ...? ನೀವು ನನಗೆ ಹೆಲ್ಪ್ ಮಾಡ್ತೀನಿ ಅಂತ ಹೇಳಿದ್ದೀರಿ..."

"ಹೆಲ್ಪ್ ಮಾಡ್ತೀನಿ ಅಂತ ಅಂದೆ ಸೀಮಾ... ಆದ್ರೆ ನೀವು ಮಗು ಥರ ಆಡಿದ್ರೆ...? ನೀವು ಚಿಕ್ಕವರಲ್ಲ. ತಿಳುವಳಿಕೆ ಇಲ್ಲದವರಲ್ಲ, ಪ್ರಾಕ್ಟಿಕಲ್ ಆಗಿ ಯೋಚ್ನೆ ಮಾಡಿ... ರೇಣುಕಾಳಿಗೆ ಆದ ಅನ್ಯಾಯವನ್ನು ಮರೆತು, ಗೌತಮ ನನಗೆ ಮಾಡಿದ ದ್ರೋಹವನ್ನು ಮರೆತು, ನಾನು ನಿಮಗೆ ನನ್ನ ಸಹಕಾರವನ್ನು ನೀಡ್ತಿದೀನಿ ಅಂತಂದ್ರೆ, ನನ್ನ ಮಾತಿಗೆ ಸ್ವಲ್ಪ ಬೆಲೆ ಬೇಡ್ವಾ? ನೀವು ತುಂಬಾ ಸ್ವಾರ್ಥಿಗಳು. ನನ್ನ ಬಗ್ಗೆ ಯೋಚಿಸಿ... ಒಂದು ವೇಳೆ ನಾನೇ ಹೀಗೆ ಆಡಿದ್ರೆ ನನಗೆ ಸಮಾಧಾನ ಹೇಳುಕ್ಕೆ ಯಾರಿದಾರೆ... ? ನಿಮಗಾದ್ರೆ, ವಾಣಿ, ನಾನು ಎಲ್ಲಾ ಇದೀವಿ... ಏನೇ ಸಮಸ್ಯೆ ಇದ್ದರೂ ಬಗೆ ಹರಿಯುತ್ತೆ.... ಸ್ವಲ್ಪ ಶಾಂತವಾಗಿ ಯೋಚನೆ ಮಾಡಿ... ಗೌತಮನ ಎದುರಿಗೆ ನೀವು ನಿಮ್ಮ ವೀಕ್‌ನೆಸ್‌ನ ತೋರಿಸ್ಕೊಂಡರೆ ಆಗುತ್ತಾ...? ಅವನಿಗೆ ಅನುಮಾನ ಬರುತ್ತೆ. ಏನೂ ಆಗಿಲ್ಲ ಅನ್ನುವಂತೆ ವರ್ತಿಸಿ. ಅವನಿಗೂ ಧೈರ್ಯ ಬರುತ್ತೆ.....ಇಲ್ಲದಿದ್ರೆ ಅವನು ವಾಪಸ್ಸು ಬರೋದಾದ್ರೂ ಹೇಗೆ...?"

"ಅವನು ವಾಪಸ್ಸು ಬರ್ತಾನೆ ಅಂತೀರಾ...? ಅವನಿಗೆ ಏನೂ ಆಗಿಲ್ಲ ಅಲ್ವಾ...?"

"ಇಲ್ಲ, ಖಂಡಿತಾ ಇಲ್ಲ. ಅವನು ಪತ್ತೆಯಾದ ಕೂಡಲೇ, ನಾನೇ ನಿಮ್ಮನ್ನು ಅವನ ಬಳಿಗೆ ಕರೆದ್ಕೊಂಡು ಹೋಗ್ತೀನಿ."

"ಖಂಡಿತಾ?"

"ಖಂಡಿತಾ... ಪ್ರಾಮಿಸ್... ಈಗ ನೀವು ಸ್ವಲ್ಪ ತಿಂಡಿ ತಿನ್ನಿ... ನೀವು ಸ್ವಲ್ಪ ಸುಸ್ತಾಗಿದೀರಿ.... ಅದಕ್ಕೆ ಅಲರ್ಜಿಯೂ ಕಾರಣ ಇರಬಹುದು... ಯಾವುದಕ್ಕೂ ನೀವು ಒಮ್ಮೆ ಡಾಕ್ಟರನ್ನು ಭೇಟಿ ಮಾಡುವುದು ಒಳ್ಳೆಯದು."

"ಥ್ಯಾಂಕ್ಸ್ ಶಶಾಂಕ್... ನಿಮಗೋಸ್ಕರ ಸ್ವಲ್ಪ ತಿಂಡಿ ತಿಂತೀನಿ..." ಎನ್ನುತ್ತಾ

ಅವನೊಡನೆ ಹೊರಕ್ಕೆ ಬಂದಳು. ವಾಣಿ ಹೋಟೆಲ್ಲಿಂದ ತರಿಸಿಟ್ಟಿದ್ದ ತಿಂಡಿಯನ್ನು ತಟ್ಟೆಗೆ ಹಾಕಿಕೊಟ್ಟಳು. ಮೂವರೂ ಮೌನವಾಗಿ ತಿಂದರು. ಅವಳು ಕೈ ತೊಳೆಯಲು ಎದ್ದು ಹೋಗಿದ್ದಾಗ ಶಶಾಂಕ ವಾಣೀಗೆ ಹೇಳಿದ.

"ನಿಮಗೆ ಪರಿಚಯವಿರುವ ಡಾಕ್ಟರ್ ಬಳಿ ಕರೆದುಕೊಂಡು ಹೋಗಿ... ಹಾಗೇ ಬ್ರೀಫ್ ಆಗಿ ಅಪ್ಸೆಟ್ ಆಗಿರುವ ವಿಷಯವನ್ನು ತಿಳಿಸಿ. ಮೈಂಡ್ ಕಾಮ್ ಆಗಿರುವ ಹಾಗೆ ಏನಾದ್ರೂ ಮೆಡಿಸಿನ್ ಕೊಡುವಂತೆ ಹೇಳಿ. ಹಾಗೇ ಇವಳ ತಾಯಿಯ ಹತ್ತಿರ ಮಾತಾಡಿ, ಈಗ ಇವರಿಗೆ ಅವರ ಅಗತ್ಯವಿದೆ. ಏನೋ ಒಂಥರಾ ಒತ್ತಡ ಇವರನ್ನು ಕಾಡುತ್ತಿರಬಹುದು...." ಎಂದು ಸಲಹೆಯನ್ನು ನೀಡಿದ.

"ನೀವು ಬಂದದ್ದು ಒಳ್ಳೇದಾಯ್ತು... ನನ್ನಿಂದ ಕಂಟ್ರೋಲ್ ಮಾಡುಕ್ಕೆ ಆಗಿರಲಿಲ್ಲ... ಈಗ ಸ್ವಲ್ಪ ಧೈರ್ಯ ಬಂತು" ಎಂದಳು. ಅವನು ಇವರಿಬ್ಬರಿಗೂ ಹೇಳಿ, ಅಲ್ಲಿಂದ ಹೊರಟ.

ಸೀಮಾಳನ್ನು ಚೆಕ್ ಮಾಡಿದ ಲೇಡಿ ಡಾಕ್ಟರ್ ನುಡಿದರು. "ಇವರು ತುಂಬಾ ಟೆನ್ಷನ್ ಮಾಡ್ಕೊಂಡಿದಾರೆ. ಬಿ.ಪಿ. ಕೂಡಾ ಏರುಪೇರಾಗಿದೆ. ಒಂದು ದಿನ ನರ್ಸಿಂಗ್ ಹೋಂನಲ್ಲಿರಲಿ... ಕಾಮ್ ಆಗಿರುವ ಹಾಗೆ ಮೆಡಿಸಿನ್ ಕೊಡ್ತಾರೆ... ಯಂಗ್ ಲೇಡಿ, ನಿಮ್ಮ ಒಳ್ಳೇದಕ್ಕೆ ಹೇಳ್ತಿರೋದು... ನಿಮ್ಮ ಟೆನ್ಷನ್ ಕಡಿಮೆ ಆಗದಿದ್ರೆ, ಕೊಲಾಪ್ಸ್ ಆಗ್ತೀರಿ... ಪ್ಲೀಸ್ ನನ್ನ ಅಡ್ವೈಸ್ ಕೇಳಿ... ಒಂದು ದಿನವನ್ನು ಆರಾಮವಾಗಿ ಕಳೆಯಿರಿ... ಒಳ್ಳೆ ನಿದ್ದೆ ಬರುತ್ತೆ. ಮೈಂಡ್ ಪೀಸ್ ಫುಲ್ ಆಗಿರುತ್ತೆ... ಡಾಕ್ಟರ್ ಮಾತನ್ನು ಕೇಳಿ ಸೀಮಾ ಕೆಟ್ಟ ಮುಖ ಮಾಡಿದಳು.

"ಇನ್ನೂ ಒಂದು ಗುಡ್ ನ್ಯೂಸ್... ನೀವು ಪ್ರೆಗ್ನೆಂಟ್ ಆಗಿದೀರಿ... ಈಗ ನಿಮ್ಮ ಹಾಗೂ ನಿಮ್ಮ ಮಗುವಿನ ಹೆಲ್ತ್ ಬಹಳ ಮುಖ್ಯ..." ಸೀಮಾ ಕಣ್ಣು ಮುಚ್ಚಿ ಹಿಂದಕ್ಕೆ ಒರಗಿದಳು....ಅದು ನಿರೀಕ್ಷಿತವೂ ಅಲ್ಲ; ಅನಿರೀಕ್ಷಿತವೂ ಅಲ್ಲ... ಆದರೆ ಈಗಲೇ ಆಗಬೇಕಿತ್ತೇ...?"

ವಾಣಿ ಬೆಚ್ಚಿದಳು... ಆದರೂ, ಸೀಮಾಳ ನಡವಳಿಕೆಯಿಂದ ಹೀಗೇನಾದರೂ ಇರಬಹುದು ಎಂಬ ಅನುಮಾನವೂ ಸುಳಿದಿತ್ತು...

"ಡೋಂಟ್ ವರೀ, ಎವರೆಥಿಂಗ್ ವಿಲ್ ಬಿ ಆಲ್ ರೈಟ್... ಇನಿಷಿಯಲ್ ಸ್ಟೇಜಸ್‌ನಲ್ಲಿ ಹೀಗೇ ಆಂಕ್ಸೈಟಿ, ಟೆನ್ಷನ್, ಸುಸ್ತು, ಸಂಕಟ, ಎಲ್ಲಾ ಇರುತ್ತೆ... ಆಮೇಲೆ ಎಲ್ಲಾ ಕಡಿಮೆ ಆಗುತ್ತೆ..." ಆಕೆ ಮುಗುಳ್ನಗುತ್ತಾ ಹೇಳಿದಾಗ, ಅವಳಿಗೆ ಬವಳಿ ಬಂದಂತಾಗಿ ಕೆಳಗೆ ಬಿದ್ದು ಬಿಟ್ಟಳು. ತಕ್ಷಣವೇ ಅವಳನ್ನು ಪಕ್ಕದಲ್ಲೇ ಇದ್ದ ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿ ಕೆಲವು ಇಂಜೆಕ್ಷನ್‌ಗಳನ್ನು ಕೊಟ್ಟರು...

ವಾಣೀ ಶಶಾಂಕನಿಗೆ ಫೋನು ಮಾಡಿ, ಅವಳನ್ನು ನರ್ಸಿಂಗ್ ಹೋಂಗೆ ಸೇರಿಸಿರುವ ವಿಷಯವನ್ನು ತಿಳಿಸಿದಳು.

"ಗುಡ್... ಎರಡು ದಿನ ಅಲ್ಲಿರಲಿ... ನಾರ್ಮಲ್ ಆಗ್ತಾಳೆ... ಎಕ್ಸೆಂಟ್ರಿಕ್ ಆಡಿದ ಹಾಗೆ ಆಡ್ತಿದ್ಲು. ಅವಳ ತಾಯಿಗೆ ತಿಳಿಸಿದ್ರಾ?"

"ಇಲ್ಲ ಶಶಾಂಕ್...ವಿಷಯ ಬೇರೇನೇ ಇದೆ... ಅವಳ ತಾಯಿಗೆ ತಿಳಿದ್ರೆ ಏನಾಗುತ್ತೋ ಗೊತ್ತಿಲ್ಲ... ಸೀಮಾ... ಈಸ್... ಪ್ರೆಗ್ನೆಂಟ್...."

"ವ್ಹಾಟ್... ಡಾಕ್ಟರ್ ಹೇಳಿದ್ರಾ? ಕನ್‌ಫರ್ಮಾ....?" ನಂಬದವನಂತೆ ಕೇಳಿದ.

"ಹ್ಞೂಂ ಶಶಾಂಕ್... ಅವಳಿಗೆ ಗೊತ್ತಿತ್ತು ಅಂತ ಕಾಣ್ಸುತ್ತೆ... ಅದಕ್ಕೇ ಹಾಗೆ ಬಿಹೇವ್ ಮಾಡ್ತಿದ್ಲು... ಈಗ ಏನ್ಮಾಡ್ಬೇಕು ಅಂತ ನಂಗೆ ಗೊತ್ತಿಲ್ಲ...."

"ಸರಿ. ನಾನೀಗ್ಲೇ ಬರ್ತೀನಿ. ಡಾಕ್ಟರ್ ಹತ್ರ ಮಾತಾಡ್ತೀನಿ..." ಎಂದು ಹೇಳಿದ.

ಈಗ ಅವನಿಗೆ ಅರ್ಥವಾಗಿತ್ತು. ಸೀಮಾಳ ನಡವಳಿಕೆ ಏಕೆ ವಿಚಿತ್ರವಾಗಿತ್ತು ಅನ್ನೋದಕ್ಕೆ ಕಾರಣ ಸಿಕ್ಕಿತು. ಅವಳು ಭಯ ಯಾಕೆ ಪಡ್ತಾಳೆ ಅನ್ನೋದು ಗೊತ್ತಾಗಿತ್ತು... ಈ ಗೌತಮ ಇವಳ ಮೇಲೂ ಅತ್ಯಾಚಾರವೆಸಗಿರಬಹುದೇ..? ಬಲಾತ್ಕಾರ ಮಾಡಿ, ತನ್ನವಳನ್ನಾಗಿ ಮಾಡಿಕೊಂಡಿದ್ದನೆ, ಈಗ ಬ್ಲ್ಯಾಕ್ ಮೇಲ್ ಮಾಡಿ ಹೆದರಿಸುತ್ತಿದ್ದಾನೆ.... ಅವನಿಗೆ ಇವಳು ಪ್ರೆಗ್ನೆಂಟ್ ಎನ್ನುವ ವಿಷಯ ತಿಳಿಯಕೂಡದು. ಬೇರೆಯವರಿಗೂ ತಿಳಿಯಕೂಡದು... ಅವನು ಮಾಡಿದ ತಪ್ಪಿಗೆ ಇವಳ ಜೀವನ ಹಾಳಾಗಿ ಹೋಗುತ್ತದೆ... ಹಾಗಾಗಬಾರದು ಎಂದುಕೊಂಡು ಎದ್ದ.

"ಪದೇ ಪದೇ ಎಲ್ಲಿಗೆ ಹೋಗ್ತೀಯೋ... ಹೊರಗೆ ಏನು ನಡೀತಿದೆ ಅಂತ ನಮಗೆ ಒಂದ್ಮಾತೂ ತಿಳಿಸುವುದಿಲ್ಲವಲ್ಲ ನೀನು!" ತಾಯಿ ಆಕ್ಷೇಪಣೆ ಮಾಡಿದಳು.

"ಈಗ ನಂಗೆ ಏನು ಕೆಲಸ ಇದೆ? ಫೋನಿನಲ್ಲಿ ಮಾತಾಡ್ತೀನಿ. ಯಾರಾದ್ರೂ ಕರೆದ್ರೆ ಹೋಗ್ತೀನಿ. ನಾನು ಬರೋದು ಲೇಟಾಗಬಹುದು. ನನಗೋಸ್ಕರ ಕಾಯ್ಬೇಡ. ನೀವಿಬ್ರೂ ಊಟ ಮಾಡಿ ರೆಸ್ಟ್ ತಗೊಳ್ಳಿ" ಎಂದು ಹೇಳಿ ಹೊರ ನಡೆದ.

ನರ್ಸಿಂಗ್ ಹೋಂನಲ್ಲಿ ಇವನಿಗಾಗಿ ವಾಣಿ ಕಾಯುತ್ತಿದ್ದಳು.

"ಸಧ್ಯ ನೀವು ಬಂದ್ರಾ..? ಈಗ ಏನ್ಮಾಡೋದು...? ಗೌತಮನಿಗೆ ಗೊತ್ತಾದ್ರೆ, ಇನ್ನೂ ಏನು ಕಿರುಕುಳ ಕೊಡ್ತಾನೋ ಅಂತ ಭಯ ಆಗ್ತಿದೆ...ಮದುವೆಗೆ ಮುಂಚೆ ಯಾಕೆ ಹೀಗೆ ಮಾಡಿಕೊಂಡ್ಲೋ...?"

"ನಿಮ್ಮ ಫ್ರೆಂಡ್‌ಗೆ ವಿವೇಕ ಕಡಿಮೆ... ಅವನು ಹೇಳಿ ಹೇಳಿದ ಹಾಗೆ ಕೇಳಿದಾಳೆ. ಅವನು ಲಫಂಗ... ಈಗ ಹೆದರಿದಾನೆ... ಇವಳನ್ನೂ ಹೆದರಿಸ್ತಿದಾನೆ... ಯಾರಾದ್ರೂ

ಸೈಕ್ರಿಯಾಟ್ರಿಸ್ಟ್‌ನ ಕನ್ಸಲ್ಟ್ ಮಾಡಕ್ಕೆ ಹೇಳಿ, ಎಲ್ಲಾ ಸರಿ ಹೋಗುತ್ತೆ..."

"ನೀವು ಸ್ವಲ್ಪ ಡಾಕ್ಟರ್ ಹತ್ರ ಮಾತಾಡಿ.... ಅವಳು ಪ್ರೆಗ್ನೆಂಟ್ ಅಂತ ತಿಳಿದಾಗಿನಿಂದ ನನಗೆ ತುಂಬಾ ಗೊಂದಲ ಆಗಿದೆ...."

"ಅಲ್ಲಾರೀ... ನಂಗೂ ಇವಳಿಗೂ ಏನು ಸಂಬಂಧ...? ನಾವು ಬರೀ ಸ್ನೇಹಿತರು..."

"ಈಗ ಅವಳ ಕೈ ಬಿಡಬೇಡಿ ಶಶಾಂಕ್.... ಅವಳನ್ನು..."

"ಅಂದರೇ? ಏನು ನಿಮ್ಮ ಮಾತಿನ ಅರ್ಥ?"

"ಅವಳನ್ನು ಮದುವೆಯಾಗ್ತೀರಾ? ಅವಳ ಮಗುವಿಗೆ ತಂದೆಯಾಗ್ತೀರಾ?"

"ಯಾಕ್ರೀ ಇಂಥಾ ಪ್ರಶ್ನೆ ಕೇಳ್ತಿದೀರಾ...? ನಾನೇನು ಬಿಟ್ಟಿ ಬಿದ್ದಿದ್ದೀನಾ?"

"ಹಾಗಲ್ಲ ಶಶಾಂಕ್... ಅವಳು ತಪ್ಪು ಮಾಡಿದಾಳೆ ನಿಜ... ಆದರೆ ರೂಪುಗೊಳ್ಳದೇ ಇರುವ ಆ ಭ್ರೂಣದ್ದು ಏನು ತಪ್ಪು ಹೇಳಿ... ಮಕ್ಕಳಿಗಾಗಿ ಹಂಬಲಿಸುವವರಿಗೆ ಮಕ್ಕಳಾಗುವುದಿಲ್ಲ. ಕೆಲವರಿಗೆ ಹಿಂದೆ ಮುಂದೆ ಯೋಚಿಸದೇ ಹೀಗೆ ಫಲಗಳನ್ನು ಕೊಟ್ಟು ಬಿಡ್ತಾನೆ. ಮದುವೆಯಾಗಿಲ್ಲದವಳು... ತಕ್ಷಣಕ್ಕೆ .... ಗೌತಮನನ್ನು ಮದುವೆಯಾಗಲು ಸಾಧ್ಯವಿಲ್ಲ. ಇಂಥಾ ಸಮಯದಲ್ಲಿ ಏನು ಮಾಡ್ತಾಳೆ...?"

"ಇದಕ್ಕೆ ನಾನು ಹೊಣೇನಾ ವಾಣೀ... ಏನು ಹೇಳ್ತೀರಿ ನೀವು?"

"ಏನೋ ನಂಗೆ ಅನ್ನಿಸಿದ್ದನ್ನು ಹೇಳ್ದೆ... ನಿಮಗೆ ಬೇಕಿಲ್ಲವಾದರೆ ಬಿಟ್ಟು ಬಿಡಿ... ಅವಳ ಹಣೇಬರಹ ಇದ್ದ ಹಾಗೆ ಆಗುತ್ತೆ..."

"ಹಾಗಾದ್ರೆ ಈ ವಿಷಯಾನ ಯಾಕೆ ಪ್ರಸ್ತಾಪ ಮಾಡಿದ್ರಿ...?"

"ನಿಮಗೆ ಮದುವೆ ಗೊತ್ತಾಗಿತ್ತು... ಅನಾಹುತ ನಡೆದು ಹೋಯ್ತು...ಕೇಸು ಮುಗಿಯದೇ ನೀವು ಮದುವೆಯಾಗುವುದಿಲ್ಲವೇನೋ ಅಂತ ಅನ್ನಿಸ್ತು...."

"ಚೆನ್ನಾಗಿದೆ ನಿಮ್ಮ ತರ್ಕ... ನಿಮಗೆ ಯಾರೂ ಹೆಣ್ಣು ಕೊಡಲ್ಲ ಅಂತ ನೇರವಾಗಿ ಹೇಳಿ ಪರವಾಗಿಲ್ಲ..." ಅಸಹನೆಯಿಂದ ಹೇಳಿದ.

"ಸಾರೀ ಶಶಾಂಕ್.... ನಾನು ಹೀಗೆ ಮಾಡಬಾರದಾಗಿತ್ತು... ನೀವು ಸೀಮಾಳ ಒಳಿತಿಗಾಗಿ ಈ ಮಾತನ್ನು ಆಡ್ತಿದೀರಿ ಅಂತ ನಂಗೆ ಗೊತ್ತು... ಗೌತಮ ಈಗ ನನ್ನ ಶತ್ರು. ಸೀಮಾ,ಅವನ ಗರ್ಲ್‌ಫ್ರೆಂಡ್... ಈ ಮಗು ಅವನದ್ದು... ತಿಳಿದೂ ತಿಳಿದೂ ಹೀಗೆ ಮಾತಾಡ್ತೀರಲ್ಲಾ ವಾಣೀ..."

"ಸಾರೀ ಅಂತ ಹೇಳಿದ್ನಲ್ಲ. ಇಷ್ಟಕ್ಕೇ ಬಿಟ್ಟು ಬಿಡಿ..." ಕೈ ಮುಗಿದಳು.

"ಓ.ಕೇ..ಇನ್ನು ಎಂದೂ ಈ ವಿಷಯಾನ ಪ್ರಸ್ತಾಪ ಮಾಡ್ಬೇಡಿ... ಸೀಮಾಳ ತಾಯಿಗೆ ಫೋನು ಮಾಡಿ ತಿಳಿಸಿದ್ರಾ....?"

"ಇಲ್ಲ, ಮೊದಲು ನಿಮಗೆ ತಿಳಿಸಿದ್ದು... ಈಗ ಮಾಡ್ತೀನಿ."

"ತಡೀರಿ, ನಾನು ಮೊದಲು ಡಾಕ್ಟರ್ ಹತ್ರ ಮಾತಾಡ್ತೀನಿ... ಅವಳ ತಂದೆ-ತಾಯಿ ಬಂದು, ಏನ್ಬೇಕಾದ್ರೂ ಮಾಡ್ಕೊಳ್ಳಲಿ. ಮಗಳ ಜವಾಬ್ದಾರಿ ಅವರದ್ದು... ಮೊದಲು ಅವರಿಗೆ ಫೋನು ಮಾಡಿ..." ಎಂದು ಹೇಳಿ ತಾನು ಡಾಕ್ಟರನ್ನು ಕಾಣಲು ಹೋದ.

"ನಾನು ಶಶಾಂಕ್, ನಿಮ್ಮ ಪೇಶಂಟ್ ಸೀಮಾಳ ಸ್ನೇಹಿತ" ಎಂದು ಹೇಳಿ ತನ್ನ ಪರಿಚಯವನ್ನು ಮಾಡಿಕೊಂಡ.

"ಕಂಗ್ರಾಜುಲೇಷನ್ಸ್... ನೀವು ತಂದೆಯಾಗ್ತಿದ್ದೀರ... ಆದರೆ ಸೀಮಾ ತುಂಬಾ ಸೆನ್ಸಿಟೀವ್ ಆಗಿಬಿಟ್ಟಿದ್ದಾಳೆ. ಅವಳನ್ನು ಚೆನ್ನಾಗಿ ನೋಡಿಕೊಳ್ಳಬೇಕಾದದ್ದು ನಿಮ್ಮ ಕರ್ತವ್ಯ" ಅವರ ಮಾತುಗಳಿಂದ ಶಶಾಂಕ ಕೆಂಪಾದ...

"ಏನು ಹೇಳ್ತಿದ್ದೀರಿ?" ತೊದಲಿದ.

"ಯೌವನದ ಕಾವಿನಲ್ಲಿ ಅತಿರೇಕ ನಡೆದು ಹೋಗಿದೆ. ಅದನ್ನು ಸರಿಪಡಿಸಬೇಕಾದದ್ದು ನಿಮ್ಮ ಕರ್ತವ್ಯ... ಆದಷ್ಟು ಬೇಗ ಮದುವೆಯಾಗಿ ಬಿಡಿ... ತಡ ಮಾಡಬೇಡಿ." ಆಕೆ ಸಲಹೆಯನ್ನಿತ್ತಳು...

"ಸೀಮಾಳನ್ನು ಅಬಾರ್ಷನ್‌ಗೆ ಒಪ್ಪಿಸಿ."

"ಏನು ಮಾತಾಡ್ತೀರಿ ಶಶಾಂಕ್... ಅವಳ ಮಾನಸಿಕ ಆರೋಗ್ಯ ಚೆನ್ನಾಗಿಲ್ಲ. ತುಂಬಾ ಹೆದರಿಬಿಟ್ಟಿದ್ದಾಳೆ. ಈಗ ನೀವು ಸಮಾಧಾನ ಹೇಳಿ ಧೈರ್ಯವನ್ನು ತುಂಬಬೇಕು. ಅದು ನಿಮ್ಮಿಂದ ಮಾತ್ರ ಸಾಧ್ಯ... ಅವಿವೇಕ ನಿಮ್ಮಿಬ್ಬರಿಂದಲೂ ನಡೆದಿದೆ ಅಲ್ವಾ.....?"

"ಹಾಗಲ್ಲ ಡಾಕ್ಟರ್..."

"ನೋಡಿ ಮಿಸ್ಟರ್, ನಾನು ನನ್ನ ಸಲಹೆಯನ್ನು ಕೊಟ್ಟಿದ್ದಾಗಿದೆ. ಇನ್ನು ನಿಮ್ಮಿಷ್ಟ... ನೀವೀಗ ಸರಿಯಾದ ನಿರ್ಧಾರವನ್ನು ತೆಗೆದುಕೊಳ್ಳದಿದ್ದರೆ, ಅನಾಹುತವಾಗುತ್ತೆ. ಅವಳನ್ನು ಮಗುವನ್ನು ಉಳಿಸಿಕೊಳ್ಳಿ... ಈಗಲಾದರೂ ನಿಮ್ಮ ಜವಾಬ್ದಾರಿಯನ್ನು ಅರಿತುಕೊಳ್ಳಿ... ಎಂದಳು... ಅವನು ಏನಾದರೂ ಹೇಳುವ ಮೊದಲೇ ಎದ್ದು ನಿಂತಳು...,"ನನಗೆ ಬೇರೆ ಅಪಾಯಿಂಟ್‌ಮೆಂಟ್‌ಗಳಿವೆ. ಎಕ್ಸ್‌ಕ್ಯೂಸ್ ಮಿ.." ಎಂದು ಹೇಳಿ ಹೊರಟೇ ಹೋದಳು. ಇವನು ಅಸಹಾಯಕನಂತೆ ಅಲ್ಲಿಯೇ ಕುಳಿತಿದ್ದ. ಸಿಸ್ಟರ್ ಬಂದು ಎಚ್ಚರಿಸಿದಳು.

"ಈ ರೂಮಿಗೆ ಬೇರೆ ಡಾಕ್ಟರ್ ಬರ್ತಾ ಇದಾರೆ... ಬೇರೆ ಪೇಷಂಟ್ಸ್‌ಗಳು ಕಾಯ್ತಾ ಇದಾರೆ..." ಎಂದಳು. ಇವನು ಅವಳನ್ನೇ ದಿಟ್ಟಿಸಿ ನೋಡಿ ಎದ್ದು ಹೊರಗೆ ಬಂದ. ವಾಣಿ ಇವನನ್ನು ಕಂಡು ಕೈ ಬೀಸಿದಳು.

"ಸೀಮಾ ನಿಮ್ಮ ಹತ್ರ ಮಾತಾಡ್ಬೇಕಂತೆ..."

"ಅವಳ ತಾಯಿ ಬಂದ್ರಾ...?" ಎಂದು ಪ್ರಶ್ನಿಸುತ್ತಾ ಸೀಮಾ ಇದ್ದಲ್ಲಿಗೆ ಬಂದ.

"ಅಮ್ಮನಿಗೆ ಫೋನು ಮಾಡ್ಬೇಡಿ ಅಂತಿದಾಳೆ... ನಾನೇನ್ಮಾಡ್ಲೀ?"

"ನನ್ನ ಕೇಳ್ತಿದೀರಲ್ರೀ... ನಾನೇನಾಗ್ಬೇಕು ಇವರಿಗೆ?" ಪಿಸುದನಿಯಲ್ಲಿ ರೇಗಿದ.

ಸೀಮಾ ಕಣ್ಣು ಬಿಟ್ಟಳು. "ಹೇಗಿದೀರಿ ಸೀಮಾ...." ಅಸಹನೆಯನ್ನು ಅದುಮಿಟ್ಟು ಕೇಳಿದ.

"ಗೌತಮನ ಪತ್ತೆಯಾಯ್ತಾ ಶಶಾಂಕ್... ಅವನಿಗೆ ಏನೂ ಅಪಾಯ ಆಗಿಲ್ಲ ತಾನೇ...?"

"ನಿಮಗೆ ಹುಷಾರಿಲ್ಲ. ಅವನ ಚಿಂತೆ ಯಾಕೆ? ಈಗ ರೆಸ್ಟ್ ತಗೊಳ್ಳಿ. ಅವನ ವಿಷಯ ತಿಳಿದ ಕೂಡ್ಲೇ ತಿಳಿಸ್ತೀನಿ."

"ಅವನ್ಯಾಕೆ ಹೀಗೆ ಮಾಡ್ದಾ....? ಅವನ ವಿಷಯ ತಿಳಿಯದೇ ಇದ್ದರೆ, ನಾನು ಹೇಗೆ ರೆಸ್ಟ್ ತಗೊಳ್ಳಲಿ...?"

"ಡಿಸ್ಚಾರ್ಜ್ ಮಾಡಿಸ್ಕೊಂಡು ಮನೆಗೆ ಹೋಗಿ... ಅಲ್ಲಿ ನಿಮ್ಮ ಮನೆಯವರು ಇರ್ತಾರೆ... ನೀವು ಸರಿ ಹೋಗ್ತೀರಿ..."

"ಗೌತಮನ ವಿಷಯ ತಿಳಿಯುವವರೆಗೂ ನಾನು ಮನೆಗೆ ಹೋಗಲ್ಲ... ಅಮ್ಮನ ಎದುರಿಗೆ ನಿಲ್ಲುವ ಧೈರ್ಯ ನನಗಿಲ್ಲ."

"ಅಂಥಾದ್ದೇನಾಗಿದೆ! ನೀವು ಅವರ ಮಗಳು... ಅವರು ನಿಮಗೆ ಸಮಾಧಾನ ಹೇಳದೇ ಬೇರೆ ಯಾರು ಹೇಳ್ತಾರೆ?"

"ನನ್ನಿಂದ ಒಂದು ದೊಡ್ಡ ತಪ್ಪು ನಡೆದು ಹೋಗಿದೆ ಶಶಾಂಕ್... ಅಪ್ಪನಿಗೆ ಈ ವಿಷಯ ತಿಳಿದ್ರೆ ನನ್ನನ್ನು ಕೊಂದೇ ಹಾಕ್ತಾರೆ..."

"ಅಂದರೇ... ಗೌತಮ ಮಾಡಿರುವ ಅಪರಾಧದಲ್ಲಿ ನಿಮ್ಮದೂ ಸಮಪಾಲು ಇದೆಯಾ... ಹಾಗಾದ್ರೆ...?"

"ಇಲ್ಲ, ಅವನೇನು ಮಾಡಿದಾನೆ ಅಂತ ನಂಗೊತ್ತಿಲ್ಲ. ನಾನು ಪ್ರೆಗ್ನೆಂಟ್ ಆಗಿದೀನಿ. ನಾನು ಮೋಸ ಹೋಗ್ಬಿಟ್ಟೆ" ಅವಳು ಬಿಕ್ಕಿದಳು. ಮುಖವನ್ನು ತಿರುಗಿಸಿದಳು.

"ಆಯಾಸ ಮಾಡ್ಕೋಬೇಡ ಸೀಮಾ... ಮೊದಲೇ ನಿನ್ನ ಹೆಲ್ತ್ ಸರಿಯಾಗಿಲ್ಲ" ವಾಣಿ ಸಮಾಧಾನ ಹೇಳಿದಳು.

"ಅಮ್ಮನಿಗೆ ಈ ವಿಷಯ ತಿಳಿಯ ಕೂಡದು... ಗೌತಮ ಎಲ್ಲಿದ್ದಾನೆ ಅಂತ ತಿಳಿದ್ರೆ ಅಲ್ಲಿಗೇ ಹೋಗಿಬಿಡ್ತೀನಿ..."

"ನೀನು ಈಗ ಎಲ್ಲಿಗೂ ಎದ್ದು ಹೋಗುವ ಸ್ಥಿತಿಯಲ್ಲಿಲ್ಲ. ತುಂಬಾ ನಿಶ್ಶಕ್ತಿ ಇದೆ ಅಂತ ಡಾಕ್ಟರು ಹೇಳಿದ್ದಾರೆ."

"ಅಲ್ಲಿಯವರೆಗೂ ನಾನು ನಿಮ್ಮ ಮನೇಲಿರ್ತೀನಿ ವಾಣೀ... ಈ ಪರಿಸರ ನನಗೆ ಭಯವನ್ನು ಹುಟ್ಟಿಸುತ್ತೆ. ಶಶಾಂಕ್, ಪೋಲೀಸರು ಏನಂದ್ರು? ಗೌತಮನನ್ನು ಪತ್ತೆ ಮಾಡ್ತಾರೆ ಅಲ್ವಾ...?"

"ಹ್ಞೂಂ ಮಾಡ್ತಾರೆ... ಆದರೆ ಸ್ವಲ್ಪ ಟೈಂ ತಗೋಳತ್ತೆ.... ಓ.ಕೇ. ಮೊದಲು ರಿಕವರ್ ಆಗಿ, ಎಲ್ಲಾ ಸರಿ ಹೋಗುತ್ತೆ.... ವಾಣಿ, ಏನಾದ್ರೂ ಬೇಕಾದ್ರೆ ಹೇಳಿ, ತಂದುಕೊಡ್ತೀನಿ."

"ಏನೂ ಬೇಡ ಎಲ್ಲಾ ಇಲ್ಲೇ ಸಿಗುತ್ತೆ... ನೀವು ಒಂದರ್ಧ ಗಂಟೆ ಇಲ್ಲಿ ಇರುವುದಾದರೆ, ನಾನು ಮನೆಗೆ ಹೋಗಿ ಬರ್ತೀನಿ. ತಮ್ಮ ಬರುವ ಹೊತ್ತಾಗಿದೆ. ಬೀಗದ ಕೈ ನನ್ನ ಬಳಿಯೇ ಇದೆ."

"ಸರಿ ಹೋಗ್ಬನ್ನಿ... ಇಲ್ಲೇ ಕೂತಿರ್ತೀನಿ" ಬೇಸರದಿಂದ ನುಡಿದ. ಏನೋ ಹೇಳಲು ಹೊರಟ ಸೀಮಾಳನ್ನು ತಡೆದ. "ನೀವು ಸುಮ್ಮನೆ ಮಲ್ಕೊಳ್ಳಿ.... ವಾಣೀ ನೀವು ಹೋಗಿ ಬನ್ನಿ" ಎಂದು ಹೇಳಿ ಅವಳನ್ನು ಕಳಿಸಿ, ತಾನು ಅಲ್ಲಿದ್ದ ಇನ್ನೊಂದು ಕುರ್ಚಿಯ ಮೇಲೆ ಕುಳಿತ. ಸೀಮಾ ಸಣ್ಣಗೆ ಕೆಮ್ಮಿ ಅವನ ಗಮನವನ್ನು ತನ್ನ ಕಡೆಗೆ ಸೆಳೆದಳು."

"ಏನಾದ್ರೂ ಬೇಕಾ? ಸಿಸ್ಟರ್‌ನ ಕರೀಲಾ?" ಕೇಳಿದ.

"ನನ್ಮೇಲೆ ನಿಮಗೆ ಕೋಪಾನಾ...? ಸೀರಿಯಸ್ ಆಗಿದೀರಿ..."

"ಇಲ್ಲ ಕೋಪ ಯಾಕೆ?" ಮುಖ ಉಬ್ಬಿಸಿ ಕೇಳಿದ.

"ನಾನು ಗೌತಮನ ಸ್ನೇಹಿತೆ. ಅವನು ನಿಮ್ಮ ಶತ್ರು..."

"ಒಂದು ಮಾತು ನಿಜ. ನಿಮ್ಮ ಚೈಲ್ಡಿಷ್ ವರ್ತನೆಯಿಂದ ನನಗೆ ಕಿರಿಕಿರಿ ತುಂಬಾ ಆಗುತ್ತೆ...."

"ಚೈಲ್ಡಿಷ್ ಬಿಹೇವಿಯರ್ ನನಗೆ?"

"ಹ್ಞೂಂ, ಓದಿದೀರಿ... ತಿಳುವಳಿಕೆ ಇದೆ... ಎಕನಾಮಿಕಲಿ ಇಂಡಿಪೆಂಡೆಂಟ್ ಆಗಿದೀರಿ... ಧೈರ್ಯವಾಗಿ ಯೋಚಿಸೋದನ್ನು ಬಿಟ್ಟು... 'ಗೌತಮ ಗೌತಮ' ಅಂಥ ಹಂಬಲಿಸ್ತೀರಲ್ಲ. ಅವನು ದೂರ ಓಡಿ ಹೋಗುವ ಮೊದಲು ನಿಮ್ಮ ಬಗ್ಗೆ ಯೋಚಿಸಿದ್ದಿದ್ದರೆ ಹೀಗೆ ಮಾಡ್ತಿದ್ನಾ ಅಥವಾ ನಿಮಗೋಸ್ಕರ ಬರದೇ ಇರ್ತಿದ್ನಾ...? ಇನ್ನಾದರೂ ಅವನ ಬಗ್ಗೆ ಯೋಚಿಸುವುದನ್ನು ಬಿಡಿ. ನಿಮ್ಮ ಭವಿಷ್ಯದ ಬಗ್ಗೆ ಯೋಚನೆ ಮಾಡಿ."

"ಅವನೇ ಸಿಗದಿದ್ದರೆ ನನ್ನ ಭವಿಷ್ಯ ಏನಿದೆ ಶಶಾಂಕ್.....?"

"ಅವನು ಸಿಕ್ಕರೂ ಅವನು ನಿರಪರಾಧಿ ಅಂತ ಸಾಬೀತು ಆಗದ ಹೊರತು ಅವನಿಗೆ ಬಿಡುಗಡೆ ಇರುವುದಿಲ್ಲ... ಅದೆಲ್ಲಾ ಎಷ್ಟು ಕಾಲ ತೆಗೆದುಕೊಳ್ಳುತ್ತೋ.... ಅಲ್ಲಿಯವರೆಗೂ ಹೀಗೇ ಕಾಯ್ತೀರಾ...? ಕೆಲವೇ ತಿಂಗಳುಗಳ ನಂತರ ನೀವು ತಾಯಿಯಾಗ್ತೀರಿ... ಆಗೇನು ಮಾಡ್ತೀರಿ...? ಕೇಳಿದವರಿಗೆ ಏನ್ಮಾಡ್ತೀರಿ...? ವಾಣಿಯ ಮನೇಲಿ ಎಷ್ಟು ದಿನಾಂತ ಇರ್ತೀರಿ....? ಅಬಾರ್ಷನ್ ಮಾಡಿಸ್ಕೊಳ್ಳಿ..... ಆರಾಮ ವಾಗಿರಿ ಅಥವಾ ಆದಷ್ಟು ಬೇಗ ಬೇರೆ.ಯಾರನ್ನಾದ್ರೂ ಮದುವೆಯಾಗಿ.....ಹುಟ್ಟುವ ಮಗುವಿಗೆ ಒಳ್ಳೆಯ ಭವಿಷ್ಯವನ್ನು ಕೊಡಿ......"

"ನಾನು ತಾಯಿಯಾಗ್ತಿದೀನಿ ಅಂತ ತಿಳಿದ್ರೆ ನನ್ನನ್ನು ಯಾರು ಮದುವೆ ಯಾಗ್ತಾರೆ...? ನಾನು ಎಂತಹ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದ್ದೀನಿ. ನನ್ನ ಪರಿಸ್ಥಿತಿ ನಿಮಗೆ ಅರ್ಥ ಆಗುಲ್ಲ."

"ಅರ್ಥ ಆಗುತ್ತೆ. ಆದರೆ ನೀವು ಯಾರ ಸಲಹೆಯನ್ನೂ ಕೇಳುವುದಿಲ್ಲ. ಅದೇ ದೊಡ್ಡ ಪ್ರಾಬ್ಲಂ..."

"ಹಾಗಾದ್ರೆ ನಾನು ಈಗ ಏನ್ಮಾಡ್ಬೇಕು ಹೇಳಿ... ಕೇಳ್ತೀನಿ..." ಸೋತವಳಂತೆ ನುಡಿದಳು.

"ನನ್ನನ್ನು ಮದುವೆಯಾಗ್ತೀರಾ?" ಅನಿರೀಕ್ಷಿತವಾಗಿ ಅವನು ಕೇಳಿದಾಗ, ಅವಳು ಬೆಪ್ಪಾದಳು..., "ನಾನು ತಮಾಷೆ ಮಾಡ್ತಿಲ್ಲ. ಸೀರಿಯಸ್ ಆಗಿ ಕೇಳ್ತಿದೀನಿ."

"ಆದರೆ... ನಾನು...?" ಬೆಪ್ಪಳಂತೆ ಕೇಳಿದಳು.

"ನೀವು ಗೌತಮನ ಸ್ನೇಹಿತೆ... ಮಗು ಗೌತಮನದ್ದು. ಗೌತಮ, ರೇಣುಕಾಳನ್ನು ನನ್ನಿಂದ ದೂರ ಮಾಡಿದ. ಅವನನ್ನು ನಾನು ದ್ವೇಷಿಸ್ತೀನಿ... ಆದರೂ ನಾನು ನಿಮಗೆ ರಕ್ಷಣೆ ಕೊಡಬೇಕೆಂದು ತೀರ್ಮಾನಿಸಿದ್ದೀನಿ... ಗೌತಮ ನಿರಪರಾಧಿ ಅಂತ ತೀರ್ಪು ಬಂದರೆ, ನೀವು ಮತ್ತೆ ಅವನ ಬಳಿಗೆ ಹೋಗಬಹುದು. ಅಲ್ಲಿಯ ವರೆಗೂ ನೀವು ನನ್ನ ಬಳಿ ಇರ್ತೀರಿ... ಅಲ್ಲಿಯವರೆಗೂ ನಾವಿಬ್ಬರು ಹೊರ ಜಗತ್ತಿಗೆ ದಂಪತಿಗಳು. ಆದರೆ, ನಾವಿಬ್ಬರೂ ಸ್ನೇಹಿತರು... ನನ್ನಿಂದ ನಿಮಗೆ ಯಾವ ತೊಂದರೆಯೂ ಆಗುವುದಿಲ್ಲ. ನೀವು ನಿಶ್ಚಿಂತೆಯಿಂದ ಇರಬಹುದು. ಇದಕ್ಕೆ ನಿಮ್ಮ ಒಪ್ಪಿಗೆ ಇದೆಯಾ ತಿಳಿಸಿ..."

ಅವಳು ತುಟಿಪಿಟಕ್ಕೆನ್ನದೆ ಅವನ ಮಾತುಗಳನ್ನು ಆಲಿಸಿದಳು... ಮುಖದಲ್ಲಿ ಕಸಿವಿಸಿ ಕಂಡಿತು. ಗಂಟಲಿನಿಂದ ಧ್ವನಿ ಹೊರಡುವಂತಿರಲಿಲ್ಲ. "ನಿಮಗೆ ಒಪ್ಪಿಗೆ ಇಲ್ಲದಿದ್ದರೆ ಪರವಾಗಿಲ್ಲ. ಬಲವಂತ ಏನಿಲ್ಲ. ನಾನು ಹೆಣ್ಣು ಮಕ್ಕಳನ್ನು ಗೌರವಿಸು ತ್ತೇನೆ. ಅದರಲ್ಲೂ ತಾಯಿಯಾಗಲಿರುವವರ ಬಗ್ಗೆ ನನಗೆ ಗೌರವ ಇದೆ.. ನೀವು ಮಾಡಿದ್ದು ತಪ್ಪು ಅಂತ ತಿಳಿದರೂ, ನನಗೆ ನಿಮ್ಮ ಬಗ್ಗೆ ಅಸಹ್ಯ ಭಾವನೆ

ಏನಿಲ್ಲ... ಯೋಚಿಸಿ ನಿರ್ಧಾರಕ್ಕೆ ಬನ್ನಿ... ನನಗೆ ಅರ್ಜೆಂಟೇನಿಲ್ಲ... ಆದರೆ ಅತೀ ನಿಧಾನ ಮಾಡಬೇಡಿ. ಅದರಿಂದ ನಿಮಗೇ ತೊಂದರೆ..."

"ನಿಮ್ಮ ತಾಯಿ ತಂದೆ ಒಪ್ತಾರಾ ಶಶಾಂಕ್... ನನ್ನ ಬಗ್ಗೆ ತಿಳಿದರೆ ನನ್ನನ್ನು ಸೊಸೆಯನ್ನಾಗಿ ಸ್ವೀಕರಿಸ್ತಾರಾ...?"

"ಆ ವಿಷಯವನ್ನು ನನಗೆ ಬಿಡಿ... ಅವರುಗಳು ಎಷ್ಟಾಗಲೀ ಹಳೆಯ ಕಾಲದವರು. ಅವರಿಗೆ ಯಾವುದನ್ನೂ ತಿಳಿಸುವುದು ಬೇಡ. ಅವರು ಇದುವರೆಗೂ ನಿಮ್ಮನ್ನು ನೋಡಿಲ್ಲ... ಆದರೆ ನಿಮ್ಮ ತಾಯಿ ತಂದೆಯನ್ನು ಒಪ್ಪಿಸುವ ಜವಾಬ್ದಾರಿ ನಿಮ್ಮದು...."

"ನಾನು ಮದುವೆಯಾಗ್ತೀನಿ ಅಂತ ಹೇಳಿದ್ರೆ, ಈ ಸಮಯದಲ್ಲಿ ಏನು ಅವಸರ ಅಂತ ಭಾವಿಸಬಹುದು. ನೀವೇ ಬಂದು ಮಾತಾಡಿ... ನೀವೇ ತಾನೇ ಈ ಉಪಾಯವನ್ನು ಸೂಚಿಸಿದವರು...."

"ಅಂದರೇ... ನಿಮಗೆ ಒಪ್ಪಿಗೆ ಅಂತಾಯ್ತು..."

"ತಕ್ಷಣಕ್ಕೆ ಬೇರೆ ಯಾವ ಉಪಾಯವೂ ಇಲ್ಲ. ಬೇರೆ ಯಾರನ್ನಾದ್ರೂ ಮದುವೆಯಾಗಿ ನನ್ನ ಬಗ್ಗೆ ಹೇಳಲಾಗದೇ ತೊಳಲಾಡುವುದಕ್ಕಿಂದ, ನನ್ನ ಬಗ್ಗೆ ಎಲ್ಲಾ ತಿಳಿದಿರುವ ನಿಮ್ಮನ್ನು ಮದುವೆಯಾಗುವುದು ಸೇಫ್...."

"ಸರಿ, ತಕ್ಷಣಕ್ಕೆ ಮನಸ್ಸನ್ನು ಬದಲಾಯಿಸುವುದಿಲ್ಲ ತಾನೇ?"

"ಇಲ್ಲ. ಇನ್ನು ಮುಂದೆ ನೀವು ಹೇಳಿದ ಹಾಗೆ ಕೇಳ್ತೀನಿ... ಆದರೆ ಒಂದು ಸಂಶಯ......ಗೌತಮನ ಮೇಲಿನ ಸಿಟ್ಟನ್ನು ನನ್ನ ಮೇಲೆ ತೋರಿಸುವುದಿಲ್ಲ ತಾನೇ...?"

"ಅಂಥಾ ನೀಚ ನಾನಲ್ಲ. ಹಾಗೂ ನಿಮ್ಮನ್ನು ನಾನು ಮದುವೆಯಾಗುವುದರಿಂದ ನನಗೆ ಯಾವ ಲಾಭವೂ ಇಲ್ಲ. ಕೇವಲ ನಿಮ್ಮ ರಕ್ಷಣೆಗಾಗಿ..."

"ಥ್ಯಾಂಕ್ಸ್ ಶಶಾಂಕ್" ಗೆಲುವಿನಿಂದ ನುಡಿದಳು... ಈಗ ನನಗೆ ಧೈರ್ಯ ಬಂತು. ನನ್ನ ಆರೋಗ್ಯ ಸುಧಾರಿಸಿತು."

"ವಾಣಿಗೆ ಈಗಲೇ ಏನನ್ನೂ ಹೇಳ್ಬೇಡಿ. ನಾಳೆ ಡಿಸ್ಚಾರ್ಜ್ ಮಾಡಿಸ್ಕೊಂಡು ಸೀದಾ ನಿಮ್ಮ ಮನೆಗೆ ಹೋಗಿ. ಏನೂ ನಡೆದಿಲ್ಲ ಎನ್ನುವಂತೆ ನಿರಾಳವಾಗಿರಿ. ಗೌತಮನ ಬಗ್ಗೆ ತಲೆ ಕೆಡಿಸ್ಕೋಬೇಡಿ. ನಾನು ಮದುವೆಗೆ ಬೇಕಾಗುವ ವ್ಯವಸ್ಥೆಯನ್ನು ಮಾಡ್ತೀನಿ. ಓ.ಕೇ.?"

"ಓ.ಕೆ..."

"ವಾಣೀ ಬರುವ ಹೊತ್ತಾಯ್ತು. ಇನ್ನು ಈ ಮಾತು ಸಾಕು" ಎಂದ.

ವಾಣಿ ವಾಪಸ್ಸು ಬಂದಾಗ ಅವಳು ನಿದ್ರಿಸುತ್ತಿದ್ದಳು. ಅವನು ಕೈ ಕಟ್ಟಿ ಬಾಗಿಲಲ್ಲಿ ನಿಂತಿದ್ದ. ಅವಳ ಕೈಯಲ್ಲಿ ಹಾಲು, ಬ್ರೆಡ್ಡು, ಹಣ್ಣುಗಳಿದ್ದ ಕೈ ಚೀಲಗಳಿದ್ದವು.

"ನೀವು ಬಂದ್ರಲ್ಲ. ಇನ್ನು ನಿಮ್ಮ ಸ್ನೇಹಿತೆಯ ಜವಾಬ್ದಾರಿ ನಿಮಗೆ ಸೇರಿದ್ದು. ನಾನಿನ್ನು ಬರ್ತೀನಿ... ನನ್ನ ಅಗತ್ಯ ಬಿದ್ದರೆ ಫೋನು ಮಾಡಿ" ಎಂದು ಹೇಳಿ, ಅವನು ಅಲ್ಲಿಂದ ಹೊರಟು ಬಿಟ್ಟ.

"ಸೀಮಾ... ಎಷ್ಟು ಗೆಲುವಾಗಿದ್ದೀಯ... ಶಶಾಂಕ ಏನು ಹೇಳಿದರು? ಗೌತಮನ ಬಗ್ಗೆ ತಿಳೀತಾ?" ವಾಣೀ ಪ್ರಶ್ನಿಸಿದಳು.

"ಗೌತಮ ಸಿಗೋವರ್ಗ್ಗೂ ನಾನು ಹೇಗೆ ಒಂಟಿಯಾಗಿರ್ಲಿ...? ನಾನು ಪ್ರೆಗ್ನೆಂಟ್ ಅಂತ ಗೊತ್ತಾದ್ರೆ ನನ್ನ ತಂದೆ ನನ್ನನ್ನು ಮನೇಲಿಟ್ಕೋತಾರಾ...? ಮೊದಲೇ ಅವರಿಗೆ ಗೌತಮನ ಕಂಡರೆ ಆಗ್ತಿರಲಿಲ್ಲ... ಮಗು ಹುಟ್ಟಕ್ಕೂ ಮುಂಚೇನೇ... ನನಗೆ ಮಗೂಗೆ ಏನಾದ್ರೂ ಮಾಡಿದ್ರೆ?"

"ಅಬಾರ್ಷನ್ ಮಾಡಿಸಿಕೋ ಅಂತ ಶಶಾಂಕ್ ಸಜೆಸ್ಟ್ ಮಾಡಿದ್ನಾ? ಗೌತಮನಿಗೆ ತಿಳಿದ್ರೂ ಅವನೂ ಇದನ್ನೇ ಹೇಳ್ತಾನೆ... ಸಧ್ಯಕ್ಕೆ ಎಲ್ರೂ ಹೇಳೋದೂ ಇದನ್ನೇ..."

"ಇಲ್ಲ ವಾಣೀ.... ಅವನು ಅಂಥಾ ನೀಚ ಸಲಹೆಯನ್ನು ಕೊಡಲಿಲ್ಲ... ನನ್ನನ್ನು ಮದುವೆಯಾಗಿ... ನನಗೂ ನನ್ನ ಮಗುವಿಗೂ ರಕ್ಷಣೆ ಕೊಡ್ತಾನಂತೆ..."

"ಹಾಗಂದ್ನಾ! ಗೌತಮನ ಮಗುವಿಗೆ ರಕ್ಷಣೆ ಕೊಡ್ತಾನಂತಾ...? ನನಗೆ ತುಂಬಾ ಆಶ್ಚರ್ಯ ಆಗ್ತಿದೆ...."

"ನನಗೂ ಆಶ್ಚರ್ಯ ಆಯ್ತು. ಸಂಶಯವೂ ಬಂತು. ಆದರೆ ಶಶಾಂಕ ಕೆಟ್ಟವನು ಅಂತ ನನಗೆ ಅನ್ನಿಸ್ತಿಲ್ಲ... ನನಗೆ ಏನೂ ಕೆಡಕು ಮಾಡಲ್ಲ... ನಾನು ಒಪ್ಪಿಗೆ ಕೊಟ್ಟು ಬಿಟ್ಟೆ... ಅದರಿಂದ ನನ್ನ ಟೆನ್ಷನ್ ಎಷ್ಟೋ ಕಡಿಮೆ ಆಗಿದೆ. ಆದರೆ ಗೌತಮ ಕೇಳಿದ್ರೆ ಏನು ಹೇಳಲಿ ಅಂತ ಯೋಚಿಸ್ತಿದ್ದೆ...."

"ಸಧ್ಯಕ್ಕೆ ಆ ಯೋಚನೆಯನ್ನೆಲ್ಲ ಬಿಟ್ಬಿಡು ಸೀಮಾ... ಗೌತಮನಿಗೆ ನೀನು ಪ್ರೆಗ್ನೆಂಟ್ ಅಂತ ತಿಳಿದಿದ್ರೆ, ನಿನ್ನನ್ನು ಮದುವೆ ಆಗ್ತಿದ್ನೋ ಇಲ್ಲವೋ... ಅವನು ಪಲಾಯನವಾದಿ... ಶಶಾಂಕ ಧೈರ್ಯವಂತ... ಈಗ ಈ ಸಮಯವನ್ನು ನಿನ್ನದಾಗಿಸ್ಕೋ... ಯಾವ ಕೆಟ್ಟ ಯೋಚನೆಯನ್ನೂ ಮಾಡ್ಬೇಡ... ಇನ್ನು ನೀನು ಯಾರಿಗೂ ಹೆದರಬೇಕಾಗಿಲ್ಲ."

"ಶಶಾಂಕನ ತಂದೆ ತಾಯಿ ಒಪ್ಪದಿದ್ದರೆ......"

"ಒಪ್ತಾರೆ ಸೀಮಾ... ಅವರಿಗೂ ಮಗನ ಒಂಟಿತನ ಕಳೆಯಲಿ ಅನ್ನುವ ಆಸೆ ಇರಲ್ವಾ...? ಇವನ ಇಷ್ಟವನ್ನು ಖಂಡಿಸುವುದಿಲ್ಲ...."

"ಗೌತಮನ ಸ್ನೇಹಕ್ಕೆ, ಪ್ರೀತಿಗೆ ನನ್ನನ್ನು ನಾನೇ ಅರ್ಪಿಸಿಕೊಂಡು ಬಿಟ್ಟೆ...ಆದರೆ ಈಗ ಶಶಾಂಕನೊಡನೆ ಹಾಗೆ ಇರುಕ್ಕೆ ಆಗುಲ್ಲ ವಾಣೀ.....ಅದಕ್ಕೆ ಮನಸ್ಸು ಒಪ್ಪಲ್ಲ.

ಮೈಯೂ ಸಹಕರಿಸುಲ್ಲ."

"ಶಶಾಂಕ ಅದನ್ನು ನಿನ್ನಿಂದ ತಕ್ಷಣವೇ ಬಯಸುಲ್ಲ. ನೋಡೋಣ ಮುಂದೇನಾದ್ರೂ ಆ ಸಮಯ ಬಂದಾಗ...."

"ಈ ಕಾಂಪ್ರಮೈಸ್ ಎಲ್ಲಾ ಗೌತಮನ ಬಿಡುಗಡೆ ಆಗೋವರೆಗೆ... ಆಮೇಲೆ ಶಶಾಂಕನ್ನ ನಾನು ಬಿಟ್ಟು ಗೌತಮನ ಬಳಿಗೆ ಬರ್ತೀನಿ.... ಅಲ್ಲಿಯವರೆಗೆ ಮಾತ್ರ..."

ವಾಣಿ ಉತ್ತರಿಸಲಿಲ್ಲ. ಆ ಕಾಲ ಬಂದಾಗ ಎಂದುಕೊಂಡು ಸುಮ್ಮನಾದಳು.

ಶಶಾಂಕ, ಗೌತಮನ ಮೇಲಿನ ಕೋಪಕ್ಕೆ ಈ ನಿರ್ಧಾರ ತೆಗೆದು ಕೊಂಡನೋ... ಅಥವಾ ಸೀಮಾಳ ಮೇಲಿನ ಕನಿಕರದಿಂದಲೋ... ತನಗೆ ಬೇರೆ ಹೆಣ್ಣು ಸಿಗುತ್ತದೋ ಇಲ್ಲವೋ ಅನ್ನುವ ಅನುಮಾನದಿಂದಲೋ... ಅಥವಾ ಸೀಮಾಳನ್ನು ಪ್ರೀತಿಸಲು ಶುರು ಮಾಡಿರಬಹುದೋ... ಅದೇ ನಿಜವಾಗಿರಲಿ... ಶಶಾಂಕ ಪ್ರೀತಿಸುವುದಾದರೆ, ಸೀಮಾಳೂ ಅಷ್ಟೇ ಪ್ರೀತಿಯನ್ನು ಶಶಾಂಕನಿಗೆ ಕೊಡಲಿ, ಗೌತಮನನ್ನು ಮರೆತುಬಿಡಲಿ....

"ಏನು ಯೋಚಿಸ್ತಿದೀರಿ ವಾಣೀ...."

"ಏನೂ ಇಲ್ಲ. ನಿಮ್ಮ ಅಮ್ಮನಿಗೆ ಫೋನು ಮಾಡ್ಲಾ...?"

"ಬೇಡ ವಾಣೀ.... ಈ ರಾತ್ರಿ ನಿದ್ದೆ ಮಾಡಲು ಪ್ರಯತ್ನಿಸ್ತೀನಿ. ನಾಳೆ ಬೆಳಿಗ್ಗೆ ಡಿಸ್‌ಚಾರ್ಜ್ ಮಾಡಿಸಿಕೊಂಡು ನಿಮ್ಮ ಮನೆಗೇ ಬರ್ತೀನಿ...

ಅಲ್ಲಿಯೇ ಒಂದೆರಡು ದಿನ ಇರ್ತೀನಿ... ಶಶಾಂಕ ಬಂದರೆ ಫ್ರೀಯಾಗಿ ಮಾತನಾಡಬಹುದು... ನಮ್ಮ ಮನೆಯ ವಾತಾವರಣವೇ ಚೆನ್ನಾಗಿಲ್ಲ....."

"ನಿಮ್ಮಮ್ಮ ವರಿ ಮಾಡ್ಕೊಳಲ್ವಾ ಸೀಮಾ?"

"ವರಿ ಮಾಡ್ಕೊಳ್ಳೋಕೆ ಅವಳಿಗೆ ಸಮಯ ಎಲ್ಲಿದೆ...? ನಾನು ಒಂದು ವಾರ ನಿಮ್ಮ ಮನೆಲಿರ್ತೀನಿ ಅಂತ ಹೇಳಿ ಬಂದು ಬಿಟ್ಟಿದ್ದೀನಿ..ನನ್ನಿಂದ ನಿಮಗೆ ತೊಂದರೆ ಆಗೋದಾದ್ರೆ ಹೇಳ್ಬಿಡಿ... ಬೇರೆ ವ್ಯವಸ್ಥೆ ಮಾಡ್ಕೊಳ್ತೀನಿ..."

"ಛೆ... ಸೀಮಾ... ಇಷ್ಟೇನಾ ನೀನು ನನ್ನನ್ನು ತಿಳ್ಕೊಂಡಿರೋದು... ನಮ್ಮ ಮನೇಲಿ ಎಷ್ಟು ದಿನಗಳು ಬೇಕಾದ್ರು ಇರಬಹುದು..."

"ಥ್ಯಾಂಕ್ಸ್ ವಾಣೀ... ನೀವು ಯಾವುದೋ ಜನ್ಮದ ತಾಯಿ ನನಗೆ..."

"ಇರಬಹುದು. ಅದಕ್ಕೇ ನನಗೆ ಈ ಜನ್ಮದಲ್ಲಿ ಮಕ್ಕಳೇ ಆಗಲಿಲ್ಲ... ನನಗೆ, ನಿನ್ನ ಮಗುವನ್ನು ನನಗೆ ಕೊಟ್ಬಿಡು ಸೀಮಾ; ನಾನು ಸಾಕಿಕೊಳ್ತೇನೆ...."

"ನನಗೆ ಮತ್ತೆ ಮಕ್ಕಳಾಗುಲ್ಲ.... ನಾಸ್ಹೇಗೆ ಕೊಡ್ಲಿ?"

"ಶಶಾಂಕ, ಅವಸದೇ ಮಗುವೊಂದು ಅವನಿಗೆ ಬೇಕು ಅಂತ ಅಂದರೆ... ಆಗ್ಲಾದ್ರೂ ನನಗೆ ಈ ಮಗೂನ ಕೊಡ್ತೀಯಾ.....?"

"ಇಲ್ಲ, ನಾನು ಶಶಾಂಕನ್ನ ಹತ್ತಿರಕ್ಕೆ ಸೇರಿಸುಲ್ಲ. ಗೌತಮನ್ನ ಹತ್ತಿರಕ್ಕೆ ಕರೆದಿದ್ದಕ್ಕೆ ಸಾಕಷ್ಟು ಅನುಭವಿಸಿದೀನಿ...."

"ಸೀಮಾ, ನೀನು ದುಡುಕಿಬಿಟ್ಟೆ....." ಎಂದು ಹೇಳಬೇಕೆಂದುಕೊಂಡವಳು ಏಕೋ ಏನೋ ಸುಮ್ಮನಾದಳು....

"ಗೌತಮನಿಗೆ, ನಾನು ಶಶಾಂಕನನ್ನು ಮದುವೆ ಆಗಿದೀನಿ ಅಂತ ಗೊತ್ತಾಗ ಬಾರದು.... ಗೌತಮನಿಗೆ, ನಾನು ಅವನನ್ನು ಎಷ್ಟು ಪ್ರೀತಿಸ್ತೀನಿ ಅಂತ ಗೊತ್ತಾಗ ಬೇಕು.... ಅವನಿಗಾಗಿ ಕಷ್ಟಪಟ್ಟು ನಾನು ಒಂದು ಮಗುವನ್ನು ಹೊತ್ತು ಹೆತ್ತಿದ್ದೀನಿ ಅಂತ ಮಾತ್ರ ಅವನಿಗೆ ತಿಳಿಯಬೇಕು. ಅವನು ನನ್ನ ನಿಷ್ಕಲ್ಮಷ ಪ್ರೀತಿಯನ್ನು ಮೆಚ್ಚಬೇಕು...." ಸೀಮಾ ತನ್ನಲ್ಲೇ ಯೋಚಿಸುತ್ತಿದ್ದಳು...

"ಅಮ್ಮಾ ನಾನು ಆದಷ್ಟು ಬೇಗ ಮದುವೆಯಾಗ್ಬೇಕು ಅಂತ ಅಂದ್ಕೊಂಡಿ ದೀನಿ." ಶಶಾಂಕ ತಾಯಿಯ ಕಡೆ ನೋಡದೇ ಹೇಳಿದ. ಅವಳು ಅವನನ್ನು ದಿಟ್ಟಿಸಿದಳು.

"ನಾನೇ ನಿಂಗೆ ಹೇಳೋಣಾಂತ ಇದ್ದೆ. ಆದರೆ ನಿನ್ನ ಮನಸ್ಸಲ್ಲಿ ಏನಿದೆಯೋ ಅಂತ ಹಿಂಜರಿದಿದ್ದೆ.... ನೀನಾಗಿಯೇ ಹೇಳಿದ್ದು ಒಳ್ಳೇದಾಯ್ತು. ನಾಳೆಯಿಂದಲೇ ಹುಡುಗೀನ ಹುಡುಕ್ತೀನಿ... ರೇಣುಕಾಳಿಗಿಂತ ರೂಪವತಿ ಹುಡುಗೀನ ನೋಡ್ತೀನಿ...." ಆಕೆ ಉತ್ಸಾಹದಿಂದ ನುಡಿದಳು.

"ಹುಡ್ಗೀನ ನಾನೇ ನೋಡ್ಕೊಂಡಿದೀನಿ. ನೀವು ಹ್ಞೂಂ ಅನ್ಬೇಕು ಅಷ್ಟೇ..."

"ಏನಂದೆ.....? ಯಾರು ಆ ಹುಡುಗಿ....? ನಿನ್ನ ಪರಿಚಯದವಳಾ? ರೇಣುಕಾ ಸಾಯಲಿ ಅಂತ ಕಾದಿದ್ಲೇನೋ.....?"

"ಹಾಗೆಲ್ಲಾ ಮಾತಾಡ್ಬೇಡಮ್ಮ. ರೇಣುಕಾಳ ಕೊಲೆಗೂ ಇವಳಿಗೂ ಏನೂ ಸಂಬಂಧವಿಲ್ಲ. ನನಗೆ ಇವಳು ಇಷ್ಟವಾಗಿದ್ದಾಳೆ..."

"ಹೋಗ್ಲೀ ಹುಡುಗಿ ಯಾರೂಂತಲಾದ್ರೂ ಹೇಳು."

"ಸೀಮಾ ಅಂತ. ಗೌತಮನ ಜೊತೇಲಿ ಕೆಲಸ ಮಾಡ್ತಿದ್ದೋಳು..."

"ಗೌತಮನ ಜೊತೆ ತಿರುಗಾಡಿದ್ಲಲ್ಲಾ... ಆ ಸೀಮಾಳೇನೋ... ಅವಳೀಗ ನಿಂಗೆ ಬಲೆ ಬೀಸಿದ್ಲಾ.....?"

"ಇಲ್ಲಮ್ಮಾ... ನಾನೇ ಅವಳಿಗೆ ಬಲೆ ಬೀಸಿದೀನಿ..."

"ಏನೂಂತ ಮೆಚ್ಕೊಂಡಿದೀಯೋ ಅವಳನ್ನು... ನಂಗೆ ಇಷ್ಟವಾಗಲಿಲ್ಲ..."

"ನೀನು ಅವಳನ್ನು ನೋಡಿಲ್ಲ... ನೋಡಿದ್ರೆ ನೀನೂ ತಕ್ಷಣ ಒಪ್ಕೋತೀಯಾ... ಒಳ್ಳೇ ಕೆಲಸದಲ್ಲಿದ್ದಾಳೆ... ತಿಂಗಳಿಗೆ ಅರವತ್ತು ಸಾವಿರ ರೂಪಾಯಿ ಸಂಬಳ ಬರುತ್ತೆ...."

"ಹಣದ ಆಸೆಗೆ ಅವಳನ್ನು ಮದುವೆ ಆಗ್ತಿದೀಯೇನೋ ಪೆದ್ದೆ...ಅವಳು ಗೌತಮನ ಜೊತೇಲಿ ಓಡಾಡುತ್ತಿದ್ದವಳು... ತಿಳಿದೂ... ತಿಳಿದೂ... ಏನು ಕಂಡೆ ಅವಳಲ್ಲಿ?"

"ಈಗ ನಂಗೆ ಅಗತ್ಯವಿರುವ ಎಲ್ಲಾ ಗುಣಗಳೂ ಅವಳಲ್ಲಿವೆ. ಎಲ್ಲಕ್ಕಿಂತ ಮುಖ್ಯವಾಗಿ ಗೌತಮನ ಹೊಟ್ಟೆ ಉರಿಸೋಕೆ ಇವಳನ್ನು ಮದುವೆ ಆಗ್ತಿದೀನಿ... ಅವನಿಗೆ ತಕ್ಕ ಬುದ್ಧಿ ಕಲಿಸ್ತೀನಿ....."

"ಅವನು ನಿನ್ನನ್ನು ಸುಮ್ಮನೇ ಬಿಡ್ತಾನೇನೋ...ರೇಣುಕಾಳಿಗೆ ಮಾಡಿದ ಹಾಗೇ ಇವಳನ್ನು ಕೆಡಿಸಿ ಕೊಂದು ಹಾಕಿ, ನಿನ್ನ ತಲೆ ಮೇಲೆ ಅಪರಾಧ ಹೊರಿಸಿದರೆ...?"

"ಅವನೀಗ ಏನನ್ನೂ ಮಾಡುಕ್ಕಾಗುಲ್ಲ... ಹತ್ತು ಹನ್ನೆರಡು ವರ್ಷ ಜೈಲು ಶಿಕ್ಷೆಯಾಗುತ್ತೆ... ಬಿಡುಗಡೆಯಾಗಿ ಹೊರಗೆ ಬಂದ್ರೂ ಏನನ್ನೂ ಮಾಡುವ ಛಲ ಅವನಲ್ಲಿರುಲ್ಲ"

"ಇದರಿಂದ ನೀನೇನು ಸಾಧಿಸ್ತೀಯೋ? ಅವಳ ಗೋಜು ಬೇಡ... ಅವನ ದ್ವೇಷವೂ ಬೇಡ. ಬೇರೆ, ಲಕ್ಷಣವಾದ ಹುಡುಗಿಯನ್ನು ಮದುವೆಯಾಗಿ, ನಿನ್ನ ಪಾಡು ನೀನು ನೋಡ್ಕೋ, ಅಷ್ಟೇ ಸಾಕು..."

"ಯಾಕಮ್ಮಾ... ಗೌತಮನ ಮೇಲೆ ಪ್ರತೀಕಾರ ತಗೋತಿದೀನಿ ಅಂತ ನಿಂಗೆ ಸಂತೋಷ ಆಗ್ಲಿಲ್ವಾ?"

"ಇದು ಸಂತೋಷ ಪಡುವ ವಿಷಯ ಅಲ್ಲ. ಅವಳು ಗೌತಮನನ್ನು ಮರೆತು ನಿನ್ನನ್ನು ಪ್ರೀತಿಸಲು ಸಾಧ್ಯವಿಲ್ಲ. ಅಣ್ಣ ಅತ್ತಿಗೆ ಏನಂದ್ಕೊಳ್ತಾರೆ...?"

"ಮಾವ ಏನೂ ಅಂದ್ಕೊಳಲ್ಲ... ಅವಳು ನನ್ನನ್ನು ಪ್ರೀತಿಸದಿದ್ದರೂ ಪರವಾಗಿಲ್ಲ. ರೇಣುಕಾಳ ಯೋಚನೆಯಲ್ಲಿ ದಿನ ಕಳೆಯುವುದಕ್ಕಿಂತ, ಇದು ವಾಸಿ ಅಂತ ಅನ್ನಿಸ್ತು...."

"ಅವಳು ಒಪ್ಪಿದ್ದಾಳೇನೋ......?"

"ಹ್ಞೂಂ ಒಪ್ಪಿಸ್ದೆ......"

"ಒಪ್ದೇ ಏನ್ಮಾಡ್ತಾಳೆ! ಅವನು ಕಣ್ಣಿಗೆ ಕಾಣದಂತೆ ತಪ್ಪಿಸ್ಕೊಂಡು ಪರಾರಿ ಯಾಗಿದ್ದಾನೆ... ನೀನು ಕೈಗೆ ಸಿಕ್ಕಿ ಬಿಟ್ಟಿದ್ದೀಯ... ಅನುಭವಿಸ್ತೀಯ ನೋಡು..." ಬೆರಳನ್ನು ತೋರುತ್ತಾ ಹಲ್ಲು ಕಡಿದಳು.

"ನನಗೆ ಈಗಾಗ್ಲೇ ಸಾಕಷ್ಟು ಅನುಭವಗಳಾಗಿವೆ. ಅದರಲ್ಲಿ ಇದೂ ಒಂದು. ನಾನಂತೂ ನನ್ನ ನಿರ್ಧಾರವನ್ನು ಬದಲಾಯಿಸುವುದಿಲ್ಲ. ನಿನಗೆ, ನಾನು ಇಲ್ಲಿ ಜೊತೆಯಲ್ಲಿ ಇರುವುದು ಇಷ್ಟವಿಲ್ಲ ಅಂತಿದ್ರೆ ಹೇಳ್ಬಿಡು... ಬೇರೆ ವ್ಯವಸ್ಥೆಯನ್ನು ಮಾಡಿಕೊಳ್ತೀನಿ..."

"ಸರಿ ಈ ಬೆದರಿಕೆ ಬೇರೆ. ಆಮೇಲೆ ಎಲ್ರೂ ನನ್ನನ್ನೇ ಅಂತೀರಿ. ಏನಾದ್ರೂ ಮಾಡ್ಕೋ... ಅವಳಿಂದ ನಿನಗೆ ಏನಾದರೂ ಅನಾಹುತ ಆದ್ರೆ ಮಾತ್ರ ನಂಗೆ ಹೇಳ್ಬೇಡ..."

"ನಾನು ಅನಾಹುತ ಮಾಡ್ಬೇಕು ಅಷ್ಟೇ... ಆದ್ರೆ ನಾನು ಅಂಥೋನಲ್ಲ ಅಂತ ಎಲ್ರಿಗೂ ಗೊತ್ತು. ಅವನಿಗೂ ಗೊತ್ತಾಗಲೀ... ಮುಹೂರ್ತಕ್ಕೆ ದಿನವನ್ನು ಫಿಕ್ಸ್ ಮಾಡಿಸು... ನಾನು ಆದಷ್ಟು ಬೇಗ ಮದುವೆ ಆಗ್ಬೇಕು. ಇಲ್ಲದಿದ್ರೆ ನನಗೆ ರೇಣುಕಾಳನ್ನು ಮರೆಯಲು ಆಗುವುದೇ ಇಲ್ಲ."

"ಸೀಮಾಳನ್ನು ಮದುವೆ ಆದ್ರೆ, ಅವಳ ನೆನಪು ಪ್ರತಿದಿನ ಕಾಡುತ್ತೆ. ಗೌತಮ ಮಾಡಿದ ಕೃತ್ಯ ಅವಳನ್ನು ನೀನು ಮರೆಯಲು ಬಿಡುವುದೇ ಇಲ್ಲ."

"ಇಲ್ಲಮ್ಮ ಹಾಗಾಗೋಲ್ಲ. ಸೀಮಾಳನ್ನು ಅವನಿಂದ ದೂರ ಮಾಡಿ, ಅವನ ಕಣ್ಣೆದುರಿಗೇ ಅವಳೊಡನೆ ಚೆನ್ನಾಗಿ ಸಂಸಾರ ಮಾಡಿ, ಅವನ ಹೊಟ್ಟೆ ಉರಿಸ್ತೀನಿ ನೋಡ್ತಿರು. ಇದೇ ನಾನು ಅವನಿಗೆ ಕೊಡುವ ಶಿಕ್ಷೆ."

"ಕಾನೂನು ಅವನಿಗೆ ಶಿಕ್ಷೆ ಕೊಡುತ್ತದೆ. ನಿಂಗ್ಯಾಕೆ ಬಿಡು."

"ಇಲ್ಲಮ್ಮ... ಇದರಿಂದ ನನಗೆ ಒಂಥರಾ ತೃಪ್ತಿ ಸಿಗುತ್ತೆ. ಕಾನೂನು ಅವನಿಗೆ ಏನೇ ಶಿಕ್ಷೆಯನ್ನು ಕೊಟ್ಟರೂ, ನಂಗೆ ರೇಣುಕಾ ಮತ್ತೆ ಸಿಗುವುದಿಲ್ಲ... ಅದಕ್ಕೇ ಸೀಮಾ ಅವನಿಗೆ ಸಿಗದಂತೆ ಮಾಡುವುದೇ ನನ್ನ ಉದ್ದೇಶ."

"ಚೆನ್ನಾಗಿದೆ ನನ್ನ ತರ್ಕ. ಇದರಿಂದ ನಿನಗೂ ಅವನಿಗೂ ಏನು ವ್ಯತ್ಯಾಸ ಬಂತು?"

"ವ್ಯತ್ಯಾಸ ಇರಬೇಕಾಗಿಲ್ಲ... ನಾನು ಮಾಡುತ್ತಿರುವುದು ನನಗೆ ನಾನೇ ತಂದುಕೊಳ್ಳುತ್ತಿರುವ ನ್ಯಾಯ. ಇದಕ್ಕೆ ನೀನು ಅಡ್ಡ ಬರಬೇಡ. ನೀವು ಒಪ್ಪಲಿ, ಬಿಡಲಿ ನಾನು ಅವಳನ್ನೇ ಮದುವೆಯಾಗುವುದು. ಇದು ನನ್ನ ಅಂತಿಮ ನಿರ್ಧಾರ." ಅವನು ಕಟುವಾಗಿ ನುಡಿದು ಅವಳಿಗೆ ಬೆನ್ನು ಮಾಡಿ ನಿಂತ. ಅವಳನ್ನು ಚಿಂತೆ ಕಾಡಿತು. ನಿಟ್ಟುಸಿರು ಹೊರಬಂದಿತು. ವಾಕಿಂಗ್ ಹೋಗಿದ್ದ ಗಂಡ ಮನೆಗೆ ಹಿಂತಿರುಗಿ ಬರುವುದನ್ನೇ ಕಾದಳು. ಆತ ಬರುತ್ತಿದ್ದಂತೆ ಮಗನ ನಿರ್ಧಾರವನ್ನು ತಿಳಿಸಿದಳು.

"ಅವನ ನಿರ್ಧಾರ ಸರಿ ಅಂತ ನಂಗೆ ಅನ್ನಿಸುತ್ತೆ. ಗೌತಮನನ್ನು ಪೋಲೀಸರು ಹಿಡಿದು, ಜೈಲಿಗೆ ಹಾಕಿದ ಮೇಲೆ, ಇನ್ನು ಅವನಿಗೆ ಬಿಡುಗಡೆ ಎಲ್ಲಿ...? ಆ ಹುಡುಗಿಗೂ ಗೌತಮನ ಮೇಲೆ ತಿರಸ್ಕಾರವಿದೆ. ಇಲ್ಲದಿದ್ದರೆ ಒಪ್ಕೋತಿದ್ಲಾ?"

"ನಂಗ್ಯಾಕೋ ಸಮಾಧಾನವೇ ಇಲ್ಲ. ಗೌತಮ ರೇಣುಕಾಳನ್ನು ರೇಪ್ ಮಾಡಿದ ಅನ್ನೋ ಆಪಾದನೆ ಇದೆ... ಈ ಹುಡುಗಿ ಅವನ ಜೊತೇಲಿ

ಒಡನಾಟವನ್ನಿಟ್ಟುಕೊಂಡಿದ್ದಳು. ಇಬ್ಬರ ಮಧ್ಯೆ ಅದೇನು ಸಂಬಂಧವಿತ್ತೋ ಏನೋ? ಪವಿತ್ರತೆ ಎಲ್ಲಿ ಉಳಿದಿರುತ್ತೆ?"

"ಸುಮ್ನಿರು ನೀನು. ನಿನ್ನ ಮಗನೂ ಪವಿತ್ರತೆ ಇಟ್ಕೊಂಡಿದಾನೋ ಇಲ್ಲವೋ ಯಾರಿಗೆ ಗೊತ್ತು....? ಲಗ್ನಪತ್ರಿಕೆ ಶಾಸ್ತ್ರ ನಡೆದಾಗಿನಿಂದ ರೇಣುಕಾಳ ಜೊತೆ ಸುತ್ತಾಡ್ತಿದ್ದ. ಅವನ ಮೇಲೆ ಯಾಕೆ ಅನುಮಾನವಿಲ್ಲ ನಿನಗೆ?"

"ಶಶಾಂಕ ಅಂಥೋನಲ್ಲ..."

"ನಿನಗೆ ನಿನ್ನ ಮಗನ ಮೇಲೆ ನಂಬಿಕೆ ಇದೆ... ಆ ಹೆಣ್ಣಿನ ಮೇಲೆ ಯಾಕೆ ನಂಬಿಕೆ ಇಲ್ಲ...? ಗೌತಮ ಕೆಟ್ಟೋನು ಅಂದ ಮಾತ್ರಕ್ಕೆ ಸೀಮಾಳೂ ನಡತೆ ಇಲ್ಲದವಳಾಗಿರಬೇಕಾಗಿಲ್ಲ. ಶುಭ ಕಾರ್ಯಕ್ಕೆ ಅಡ್ಡಿ ಮಾಡ್ಬೇಡ."

"ನೀವೂ ಹೀಗೆ ಮಾತಾಡ್ತೀರಿ ಅಂತ ಅಂದ್ಕೊಂಡಿರಲಿಲ್ಲ. ನಾನು ವಿಜಯನಿಗೆ ಹೇಳ್ತೀನಿ. ಅವಳಾದ್ರೂ ಶಶಾಂಕನಿಗೆ ತಿಳುವಳಿಕೆಯನ್ನು ಹೇಳಲಿ." ಎನ್ನುತ್ತಾ ಮಗಳಿಗೆ ಫೋನು ಮಾಡಿದಳು. ಮಗನ ನಿರ್ಧಾರವನ್ನು ತಿಳಿಸಿ ತನ್ನ ಅಸಮಾಧಾನ ವನ್ನು ವ್ಯಕ್ತಪಡಿಸಿದಳು. "ವಿಜೀ, ನೀನಾದ್ರೂ ಬುದ್ಧಿ ಹೇಳೇ ನಿನ್ನ ತಮ್ಮಂಗೆ.. ಬೇರೆ ಯಾವ ಹುಡುಗಿಯೂ ಇಲ್ವಾ...? ಈ ಸೀಮಾನೇ ಆಗ್ಬೇಕಾ ಇವನಿಗೆ?"

"ಶಶಾಂಕನ ನಿರ್ಧಾರ ಸರಿಯಾಗಿಯೇ ಇದೆ. ಗೌತಮ ಶಶಾಂಕನಿಗೆ ಅನ್ಯಾಯವನ್ನು ಮಾಡಿದ ತಾನೇ... ಅವನ ಸ್ನೇಹಿತೆಯನ್ನು ಇವನು ತನ್ನವಳನ್ನಾಗಿ ಮಾಡ್ಕೊಂಡ್ರೆ ಅದ್ರಲ್ಲಿ ತಪ್ಪು ಏನೂ ಇಲ್ಲ. ನಿನಗೆ ಬೇಗ ಒಂದು ಮೊಮ್ಮಗುವೂ ಹುಟ್ಟುತ್ತೆ.... ಆಗ ನೀನು ಇದನ್ನೆಲ್ಲ ಮರೆತೇ ಬಿಡ್ತೀಯಾ ನೋಡ್ತಿರು."

"ನಿಮಗೆಲ್ಲಾ ನನ್ನ ಸಂಕಟ ಅರ್ಥವಾಗೋದೇ ಇಲ್ಲ. ಅವಳು ಗೌತಮನ್ನ ಪ್ರೀತಿಸ್ತಿದ್ಲು. ಅವಳು ಶಶಾಂಕನನ್ನು ಪ್ರೀತಿಸೋಕೆ ಸಾಧ್ಯವೇ ಇಲ್ಲ. ಇವನು ಮದುವೆ ಯಾಗಿಯೂ ಬ್ರಹ್ಮಚಾರಿಯಾಗಿರಬೇಕಾಗುತ್ತೆ... ಅವನಿಗೂ ಸುಖವಿಲ್ಲ, ಇನ್ನು ಮೊಮ್ಮಕ್ಕಳೆಲ್ಲಿ?"

"ಹಣ ಹೆಣ್ಣು ಎರಡೂ ಮಾಯೆ ಕಣೇ ವಿಜೀ.. ಅದಕ್ಕಾಗಿ ಶಶಾಂಕ ಮದುವೆಯಾಗಿ ಯಾವ ಸುಖವೂ ಇಲ್ಲದಿದ್ರೆ ದುಃಖ ಆಗುಲ್ವೇನೇ? ಅವನ ಹತ್ರ ಮಾತಾಡು. ನಿಜವಾದ ಉದ್ದೇಶ ಏನೂಂತ ತಿಳ್ಕೋ... ಗೌತಮನಿಂದ ಆಗಿರುವ ಅನ್ಯಾಯವೇ ಸಾಕಾಗಿದೆ. ಈ ಹುಡುಗಿಯೂ ಇವನ ಜೀವನವನ್ನು ನರಕ ಮಾಡಿದರೆ ಅಂತ ನನಗೆ ಚಿಂತೆ... ನನಗೆ ಸರಿಯಾಗಿ ಏನನ್ನೂ ಹೇಳುವುದಿಲ್ಲ. ನಿನಗೆ ಹೇಳಬಹುದು..."

"ಸರಿಯಮ್ಮ. ನಿನ್ನ ಸಮಾಧಾನಕ್ಕೋಸ್ಕರ ಮಾತಾಡ್ತೀನಿ..." ಎಂದು ಮಗಳು ಹೇಳಿದರೂ, ಇವಳಿಗೆ ಅಷ್ಟೇನೂ ಸಮಾಧಾನವಾಗಿರಲಿಲ್ಲ.

"ನನ್ನ ಹಾಗೆ ಇವರ್‍ಯಾರೂ ಯಾಕೆ ಯೋಚಿಸೋಲ್ಲ. ಎಲ್ಲರರೂ ಒಂದೇ... ನಾನೇ ಬೇರೆ...." ಅಂತಂದುಕೊಂಡು ಮಾತನ್ನು ಮುಗಿಸಿದ್ದಳು.

******

"ಯಾಕೆ ಸೀಮಾ ಹೀಗಾಗಿ ಹೋಗಿದೀಯ... ಬಿಳಿಚ್ಕೊಂಡು ಹತ್ತಿ ತರಹ ಕಾಣ್ತಿದೀಯ.......ಇನ್ನಾದರೂ ಅವನ ಬಗ್ಗೆ ಕೊರಗೋದನ್ನು ನಿಲ್ಲಿಸು... ನಿನ್ನ ಆರೋಗ್ಯ ನೋಡ್ಕೋ... " ಮಗಳನ್ನು ನೋಡಲೆಂದು ಬಂದ ಸಂಧ್ಯಾ ರೇಗಿದಳು. ಸೀಮಾ ಉತ್ತರಿಸಲಿಲ್ಲ..., "ನೀವಾದ್ರೂ ಹೇಳ್ಬಾರ್ದಾ ವಾಣೀ... ಆ ಅಯೋಗ್ಯನಿಗಾಗಿ ಇವಳ್ಯಾಕೆ ಕಣ್ಣೀರು ಸುರಿಸ್ಬೇಕು... ತಾನು ಪ್ರೀತಿಸಿದವಳಿಗೆ ದ್ರೋಹ ಮಾಡ್ತಿದೀನಿ ಅನ್ನೋ ಜ್ಞಾನ ಅವನಿಗಿರಬೇಕು..."

ವಾಣೀ ಆಕೆಯನ್ನು ಸಂಜ್ಞೆಯಿಂದ ಹೊರಕ್ಕೆ ಕರೆದೊಯ್ದಳು. "ಈಗ ಅವಳನ್ನು ಬೈಯಬೇಡಿ... ತುಂಬಾ ಸೆನ್ಸಿಟೀವ್ ಆಗಿಹೋಗಿದ್ದಾಳೆ...."

"ಅಂಥೋನನ್ನು ಪ್ರೀತಿಸಿದ್ರೆ ಆಗೋದು ಹೀಗೇನೇ... ಇನ್ನಾದ್ರೂ ಅವನನ್ನು ಮರೆಯಬಾರದಾ...? ಅವನೀಗ ಅಪರಾಧಿ..."

"ಅವನನ್ನು ಹೇಗೆ ಮರೀತಾಳೆ ಆಂಟೀ...? ಸೀಮಾ ಈಗ ಪ್ರೆಗ್ನೆಂಟ್..."

"ಏನು! ಪ್ರೆಗ್ನೆಂಟಾ? ನಂಗೆ ಗೊತ್ತಿತ್ತು. ಹೀಗೇ ಏನಾದ್ರೂ ಎಡವಟ್ಟು ಮಾಡ್ಕೋತಾಳೆ ಅಂತ... ಪ್ರಿಕಾಷನ್ ತಗೊಂಡಿದ್ರೆ ಹೀಗಾಗ್ತಿರ್ಲಿಲ್ಲ. ಅಷ್ಟು ತಿಳೀ ಬೇಡ್ವಾ ಇವಳಿಗೆ? ಅಬಾರ್ಷನ್ ಮಾಡಿಸ್ಕೋ ಅಂತ ಹೇಳ್ತೀನಿ."

"ಬೇಡ, ಅವಳಿಗೆ ಹುಟ್ಟುವ ಮಗುವನ್ನು ನಾನು ದತ್ತು ತಗೋತೀನಿ... ಡಾಕ್ಟರು ನನಗೆ ಮಕ್ಕಳಾಗುಲ್ಲ ಅಂತ ಹೇಳಿದಾರೆ."

"ನಿನ್ನ ಗಂಡ ದುಬೈನಲ್ಲಿ ಕೂತಿದ್ರೆ ನಿಂಗೆ ಹೇಗಮ್ಮ ಮಕ್ಕಳಾಗುತ್ತೆ... ನಿಮಗೇನಮ್ಮ ಕರ್ಮ, ಗೌತಮನ ಮಗೂನ ಸಾಕೋಕೆ...? ಸೀಮಾ ಅಬಾರ್ಷನ್ ಮಾಡಿಸ್ಕೊಳ್ಳುವಂತೆ ನೀವೂ ಹೇಳಿ. ಗೌತಮನ್ನ ಮರೆತು ಬೇರೆ ಮದುವೆಯಾಗಲಿ... ರೂಪ ಇದೆ, ಯೌವನ ಇದೆ, ಕೆಲಸ, ಸಂಪಾದನೆ ಇದೆ.....ಯಾರಾದ್ರೂ ಡೀಸೆಂಟ್ ಆಗಿರುವ ಹುಡುಗನ ಜೊತೆ ಮದುವೆ ಮಾಡ್ಕೊಂಡು ಸುಖವಾಗಿರಲಿ." ಹಾಗಂತ ತಿಳುವಳಿಕೆ ಹೇಳಿ.

"ಅದು ಅಷ್ಟು ಸುಲಭವಲ್ಲ. ಗೌತಮ ಬೆದರಿಕೆ ಹಾಕ್ತಿದಾನೆ... ಅವನಿರುವ ಜಾಗಕ್ಕೆ ಬಾ ಅಂತ ಪೀಡಿಸ್ತಿದಾನಂತೆ...."

"ಎಲ್ಲಿದಾನಂತೆ...? ಮನೆ ಊರು ಬಿಟ್ಟು ಪರದೇಶಿಯಂತೆ ಎಲ್ಲೋ ಇದಾನೆ, ಕೆಲಸವಿಲ್ಲ, ಸಂಪಾದನೆ ಇಲ್ಲ... ಅವನಿಗೆ ಇವಳು ಬೇಕಂತಾ...? ಹೋಗದಿದ್ರೆ ಏನ್ಮಾಡ್ತಾನಂತೆ?"

"ಕಿಡ್ನಾಪ್ ಮಾಡಬಹುದು, ಕೊಲೆ ಮಾಡಬಹುದು..."

"ಅವನಿಗೆ ಹೇಳಿಬಿಟ್ಟಿದ್ದಾಳಾ ತಾನು ಪ್ರೆಗ್ನೆಂಟ್ ಅಂತ..."

"ಹ್ಞೂಂ ಅಂತ ಕಾಣುತ್ತೆ...".

"ದಡ್ಡಿ ದಡ್ಡಿ... ಬದುಕಲು ಗೊತ್ತಿಲ್ಲದವಳು... ಮೊದಲಿಗೆ ಪ್ರೆಗ್ನೆಂಟ್ ಆಗದ ಹಾಗೆ ಹುಷಾರಾಗಿರಬೇಕಾಗಿತ್ತು... ಅವನಿಗ್ಯಾಕೆ ಹೇಳ್ಬೇಕಾಗಿತ್ತು... ಅವನಿಗೂ ಇವಳಿಗೂ ಏನು ಸಂಬಂಧ...? ಮೊದಲು ಈ ಪಿಂಡಾನ ತೆಗೆಸಿಬಿಡ್ಲಿ...ಇಲ್ಲದಿದ್ರೆ ಇವಳನ್ನು ಬೇರೆ ಯಾರು ಮದುವೆ ಆಗ್ತಾರೆ...?"

"ಭ್ರೂಣ ಹತ್ಯೆ ಮಹಾಪಾಪ... ಅಲ್ಲದೇ ಡಾಕ್ಟರು, ಇವಳ ಕೇಸ್‌ನಲ್ಲಿ ಅಬಾರ್ಷನ್ ಅಪಾಯ ಅಂತ ಹೇಳಿದಾರೆ..."

"ಓ.. ಡಾಕ್ಟರ್ ಹತ್ರ ಹೋಗಿ ಬಂದಾಯ್ತಾ...?" ವ್ಯಂಗ್ಯದಿಂದ ಕೇಳಿದಳು.

"ಎರಡು ದಿನಗಳ ಕೆಳಗೆ ಹೆಲ್ತ್ ಅಪ್ಸೆಟ್ ಆಗಿತ್ತು. ನಾನೇ ಕರ್ಕೊಂಡು ಹೋದೆ. ಟೆಸ್ಟ್ ಮಾಡಿ ಪ್ರೆಗ್ನೆಂಟ್ ಆಗಿರುವ ವಿಷಯವನ್ನು ತಿಳಿಸಿದರು. ಕೇರ್ ಫುಲ್ ಆಗಿ ನೋಡಿಕೊಳ್ಳುವಂತೆ ಹೇಳಿದ್ದಾರೆ."

"ಇವಳು ಈ ಸ್ಥಿತೀಲಿ ನಮ್ಮ ಮನೆಗೆ ಬರುವುದು ಬೇಡ. ಇವಳ ತಂದೆಗೆ ಗೊತ್ತಾದರೆ ಸಿಗಿದು ಹಾಕಿಬಿಡ್ತಾರೆ... ಎಲ್ಲಾ ಕ್ಲೀನ್ ಮಾಡಿಸ್ಕೊಂಡು ಬರಲಿ... ರೆಸ್ಟ್ ತಗೊಳ್ಳಲಿ. ಆದಷ್ಟು ಬೇಗ ರಿಕವರ್ ಆಗುಕ್ಕೆ ನಾನು ಹೆಲ್ಪ್ ಮಾಡ್ತೀನಿ."

"ಅವಳ ಪ್ರಾಣಕ್ಕೆ ಅಪಾಯ ಅಂತ ಡಾಕ್ಟರು ಹೇಳಿದಾರೆ..."

"ಹಾಗಾದ್ರೆ, ಈ ಮಗುವನ್ನು ಹೆರುವ ತನಕ, ಇವಳು ಯಾರ ಕಣ್ಣಿಗೂ ಬೀಳದಂತೆ ಎಲ್ಲಾದರೂ ಇರಲಿ. ಅದಕ್ಕೆ ವ್ಯವಸ್ಥೆ ಮಾಡಿ....ಮಗುವನ್ನು ನಿಮಗೆ ಕೊಟ್ಟು ಆಮೇಲೆ ನಮ್ಮ ಮನೆಗೆ ಬರಲಿ... ಕಂಪೆನಿಯಿಂದ ಫಾರಿನ್ನಿಗೆ ಕಳಿಸ್ತಿದಾರೆ ಅಂತ ನನ್ನ ಗಂಡನಿಗೆ ಹೇಳ್ತೀನಿ... ಉಳಿದವರೂ ಹಾಗೇ ತಿಳ್ಕೋತಾರೆ...."

"ಆಫೀಸ್ನಲ್ಲಿ ಎಲ್ರಿಗೂ ಇವಳಿಗೆ ಮದುವೆ ಆಗಿಲ್ಲ ಅಂತ ಗೊತ್ತು. ಹಿಂದೆ ಆಡಿಕೊಂಡು ನಗುಲ್ವಾ..?"

"ನಗ್ತಾರೆ, ಅನುಭವಿಸ್ಲಿ... ನನ್ನನ್ನು ಕೇಳಿ ಅವನನ್ನು ಪ್ರೀತಿಸಿದ್ಲಾ...? ಮದುವೆಗೆ ನನ್ನ ಗಂಡನನ್ನು ಒಪ್ಪಿಸಿದ್ದೆ... ಮದುವೆಗೆ ಮೊದಲು ಪ್ರೆಗ್ನೆಂಟ್ ಆಗಬಾರ್ದು ಅಂತ ಅಷ್ಟೂ ತಿಳೀಬೇಡ್ವಾ..? ಈಗ ನಾನೇನು ಮಾಡೋಕ್ಕೆ ಆಗುತ್ತೆ?"

"ಒಬ್ಬ ಹುಡುಗ ಇವಳನ್ನು ಮದುವೆಯಾಗೋಕೆ ಒಪ್ಪಿಕೊಂಡರೆ... ಆದಷ್ಟು ಬೇಗ ಮದುವೆ ಮಾಡಿಕೊಡ್ತೀರಾ...?"

"ಅಂಥಾ ಗಂಡು ಯಾರಮ್ಮಾ ಇದಾನೆ...? ಇವಳು ಗೌತಮನ ಜೊತೇಲಿ ಓಡಾಡ್ತಿದ್ಲು ಅಂತ ಎಷ್ಟೋ ಜನಕ್ಕೆ ಗೊತ್ತು... ಇನ್ನು ಇದು ಬೇರೆ.... ನಾಚಿಗೆ

ಗೇಡು ಅವಮಾನ ಏನೇನು ನೋಡ್ಬೇಕೋ?"

"ಇಲ್ಲ, ಒಬ್ಬ ಯುವಕ ಒಪ್ಪಿಕೊಂಡಿದಾನೆ"

"ಅವನಿಗೆ ಇವಳು ಪ್ರೆಗ್ನೆಂಟ್ ಅಂತ ಗೊತ್ತಾ?"

"ಹ್ಞೂಂ ಗೊತ್ತಿದೆ... ಆದರೂ ಮದುವೆಯಾಗಲು ಸಿದ್ಧವಾಗಿದಾನೆ."

"ಯಾರೋ ಗೌತಮನ ಫ್ರೆಂಡ್ ಇರಬಹುದು. ಮೊದಲ್ನಿಂದ ಇವಳ ಮೇಲೆ ಕಣ್ಣು ಇತ್ತೇನೋ... ಯಾರವನು...?"

"ಗೌತಮನ ಕಸಿನ್ ಶಶಾಂಕ್... ಶಶಾಂಕ್ ಸೀಮಾಳನ್ನು ಈಗಿರುವ ಸ್ಥಿತಿಯಲ್ಲೇ ಮದುವೆಯಾಗಲು ಒಪ್ಪಿಕೊಂಡಿದಾನೆ...."

"ಶಶಾಂಕನ....? ಅವನಿಗೆ ಗೊತ್ತಾದವಳನ್ನೇ ಅಲ್ವಾ ಈ ಗೌತಮ್ ರೇಪ್ ಮಾಡಿ, ಕೊಂದದ್ದು.... ಅವನಿಗೆ ಏನೋ ದುರುದ್ದೇಶ ಇದೆ. ಇಲ್ಲದಿದ್ರೆ ತಿಳಿದೂ ತಿಳಿದೂ, ಗೌತಮನ ಲವರ್‌ನ ಮದುವೆಯಾಗೋದು ಅಂದ್ರೇ...?"

"ಹಾಗೇನೂ ಇರುವಂತೆ ಅನ್ನಿಸ್ಲಿಲ್ಲ....."

"ಯಾಕಿಲ್ಲ......? ಶಶಾಂಕನ ಮದುವೆಗೆ ಮುಂಚೆ ಅವನ ಲೈಫನ್ನು ಹಾಳು ಮಾಡಿದ ಆ ಕೋಪಾನ ಈಗ ಸೀಮಾಳ ಮೇಲೆ ತೀರಿಸ್ಕೋತಾನೆ.. ಗೌತಮನಿಗೆ, ಸೀಮಾಳಾಗಲೀ, ಅವಳ ಸಂಪಾದನೆಯಾಗಲಿ ಅಥವಾ ಅವನ ಮಗುವಾಗಲಿ, ಅವನಿಗೆ ದಕ್ಕದೆ ಇರುವಂತೆ ಮಾಡುವ ಪ್ಲಾನ್ ಇದು...ಇಲ್ಲದಿದ್ರೆ ಅವನಿಗೆ ಇವಳೇ ಆಗ್ಬೇಕಾ? ಸೀಮಾಗೂ ಅವನಿಗೂ ಏನು ಸ್ನೇಹ? ತನ್ನ ಪ್ರೆಗ್ನೆನ್ಸಿ ವಿಷಯ ವನ್ನು ಅವನಿಗ್ಯಾಕೆ ಹೇಳಿದ್ಲು?"

"ಏನೋ ನಂಗೊತ್ತಿಲ್ಲ. ಸೀಮಾ, ಅವನನ್ನು ಮದುವೆಯಾಗಲು ಒಪ್ಕೊಂಡಿ ದಾಳೆ."

"ರಿಯಲಿ? ತಮಾಷೆಯಾಗಿದೆ. ಅವನೂ ಇವಳನ್ನು ಕೊಂದು ಹಾಕಿ ತನ್ನ ಸೇಡನ್ನು ತೀರಿಸ್ಕೋಳ್ತಾನೆ... ಅದೇ ಅವನ ಉದ್ದೇಶ... ನನಗೆ ಈ ಮದುವೆ ಇಷ್ಟವಿಲ್ಲ... ಹಾಗಂತ ಹೇಳ್ಬಿಡಿ."

"ಹಾಗಂದ್ರೆ ಹೇಗೆ? ಇವಳು ತಾಯಿಯಾಗಬಾರದು, ಮದುವೆಯಾಗ ಬಾರದು... ನಿಮ್ಮ ಮನೆಯಲ್ಲಿ ಇರುವಂತಿಲ್ಲ... ಗೌತಮನ ಬಳಿ ಹೋಗುವಂತಿಲ್ಲ... ಹಾಗಾದ್ರೆ ಏನ್ಮಾಡ್ಬೇಕು?"

"ವಾಣೀ... ನಾನು ಇವಳ ತಾಯಿ... ಇವಳ ಮೇಲಿನ ಹಕ್ಕು ನನಗೆ ಜಾಸ್ತಿ ಇದೆ... ಇವಳು ನಾನು ಹೇಳಿದ ಹಾಗೆ ಕೇಳಬೇಕು... ಇಲ್ಲದಿದ್ದರೆ ಇವಳ ಪಾಡು ಇವಳಿಗೆ... ನಾನು ಯಾವುದರಲ್ಲೂ ತಲೆ ಹಾಕುವುದಿಲ್ಲ. ಮುಂದೇನಾದರೂ ಹೆಚ್ಚು ಕಡಿಮೆ ಆದರೆ ನಾನು ಜವಾಬ್ದಾರಳಲ್ಲ..."

"ಜವಾಬ್ದಾರಿ ಇರೋರು ಹೀಗೆ ಮಾತಾಡಬಾರದು. ಆಂಟೀ ಸೀಮಾಳಿಗೆ ಒಬ್ಬಳು ತಂಗಿ ಕೂಡಾ ಇದ್ದಾಳೆ. ಅವಳ ಭವಿಷ್ಯದ ಬಗ್ಗೆ ಯೋಚಿಸಿ...ಗೌರವವಾಗಿ, ಇವಳು ಶಶಾಂಕನೊಡನೆ ಮದುವೆಯಾದರೆ, ಎಲ್ಲವೂ ಸರಿಯಾಗಿರುತ್ತೆ......."

"ಏನು ಸರಿ ಹೋಗುತ್ತೋ... ಎಲ್ರಿಗೂ ಎಲ್ಲಾ ವಿಷಯವೂ ಗೊತ್ತು... ಜನರು ತಲಾತಟ್ಟಿ ಮಾತಾಡ್ದೇ ಇರ್ತಾರಾ?"

"ಮಾತಾಡೋರು ನಮಗೆ ಯಾವ ಹೆಲ್ಪನ್ನೂ ಮಾಡುಲ್ಲ. ಸೀಮಾಳ ಆಪ್ತ ಗೆಳತಿಯಾಗಿ ನಾನು ನಿಮ್ಮೊಡನೆ ಇದನ್ನೆಲ್ಲ ಹೇಳಿದೆ. ತಾಯಿ ಮಗಳ ಮಧ್ಯೆ ಬರುವ ಅಧಿಕಾರ, ಆಸೆ ನನಗಿಲ್ಲ. ಆದರೆ ಒಂದು ಮಾತು... ಸೀಮಾ ಮೆಜಾರಿಟಿಗೆ ಬಂದಿದಾಳೆ. ಅವಳ ಇಷ್ಟದಂತೆ ಅವಳು ಯಾವ ನಿರ್ಧಾರವನ್ನು ಬೇಕಾದರೂ ತೆಗೆದುಕೊಳ್ಳಬಹುದು... ಬೇಸರವಾದರೆ, ಆತ್ಮಹತ್ಯೆ ಕೂಡಾ ಮಾಡಿಕೊಳ್ಳಬಹುದು ... ಆಗ ಪೇಪರ್‌ನಲ್ಲಿ, ಟೀವೀಲಿ ಇವಳನ್ನು ಎಲ್ಲರೂ ನಿಮ್ಮ ಮಗಳೆಂದೇ ಗುರುತಿಸು ತ್ತಾರೆ... ಆಗ ಜನರು ಇನ್ನೂ ಹೆಚ್ಚು ಹೆಚ್ಚು ನಿಮ್ಮ ಬಗ್ಗೆ ಆಡಿಕೊಳ್ತಾರೆ...ಅದನ್ನೆಲ್ಲ ಹೇಗೆ ಎದುರಿಸ್ತೀರಿ?"

"ನೋಡೋಣ, ಆ ಸಮಯ ಬಂದಾಗ..." ಎಂದು ಹೇಳಿ ಅಲ್ಲಿ ನಿಲ್ಲದೇ ಅಲ್ಲಿಂದ ಹೊರಟು ಬಿಟ್ಟಳು. ನಿದ್ದೆಯನ್ನು ನಟಿಸುತ್ತಿದ್ದ ಸೀಮಾ ವಾಣಿ ಒಳಗೆ ಬಂದೊಡನೆ ನುಡಿದಳು.

"ನೋಡಿದ್ರಾ ವಾಣೀ, ನನ್ನ ಅಮ್ಮನಿಗೆ ನನ್ನ ಮೇಲೆ ಪ್ರೀತೀನೇ ಇಲ್ಲ. ಹೇಗೆ ಮಾತಾಡಿದ್ಲು? ಗೌತಮನೂ ಮೋಸ ಮಾಡಿದ. ಈಗ ನಾನು ಯಾರನ್ನು ನಂಬಲಿ? ಶಶಾಂಕನೂ ಮೋಸ ಮಾಡಿಬಿಟ್ಟರೇ..........ನನಗೆ, ನನ್ನ ಮಗುವಿಗೆ ಕಷ್ಟ ಆಗುಲ್ವಾ?"

"ಶಶಾಂಕ ಅಂಥೋನು ಅಂತ ನಂಗೆ ಅನ್ಸುಲ್ಲ. ನೀನ್ಯಾಕೆ ಹೆದರ್ಬೇಕು? ಕೆಲಸ ಇದೆ... ಸಂಪಾದನೆ ಇದೆ... ಧೈರ್ಯ ತಂದುಕೋ..." ಸಮಾಧಾನವನ್ನು ಹೇಳಿದಳು.

"ನೀವೂ ನನ್ನನ್ನು ದೂರ ಮಾಡುಲ್ಲ ತಾನೇ...?"

"ಇಲ್ಲ ಸೀಮಾ... ನನಗೆ ನಿನ್ನ ಮಗು ಬೇಕು" ಎಂದು ಹೇಳಲಿದ್ದವಳು ಈಗ ಆ ಮಾತು ಬೇಡ ಎಂದುಕೊಂಡು ಸುಮ್ಮನಾದಳು. "ಶಶಾಂಕ ನಿನ್ನನ್ನು ಒಪ್ಪಿದ್ದಾನೆ. ಈ ಸಮಯವನ್ನು ಕೈಯಿಂದ ಜಾರಿ ಹೋಗಳು ಬಿಡ್ಬೇಡ. ಅದೇ ಜಾಣತನ... ಬೇರೆ ಯಾರು ಒಪ್ಲಲಿ ಬಿಡಲಿ... ನಾನು ನಿನ್ನ ಕಡೆಗಿದೀನಿ." ಎಂದು ಹೇಳಿ ಅವಳ ಭುಜವನ್ನು ತಟ್ಟಿದಳು.

******

"ಗೌತಮ ಕೊನೆಗೂ ಸಿಕ್ಕಿಬಿದ್ದಿದ್ದಾನೆ. ಆಂಧ್ರ ಪೋಲೀಸರು ಅರೆಸ್ಟ್ ಮಾಡಿದಾರೆ. ಫೋನು ಬಂದಿತ್ತು." ಶಶಾಂಕ ತಂದೆ ತಾಯಿಯೊಡನೆ ಹೇಳಿದಾಗ ಅವರು ನಿಟ್ಟುಸಿರು ಬಿಟ್ಟರು....

"ಸಿಗದೇ ಎಲ್ಲಿ ಹೋಗ್ತಿದ್ದ... ಒಂದು ತಿಂಗಳ ಮೇಲಾಯ್ತು... ಅವನ ತಂದೆ ತಾಯಿಗೆ ತಿಳಿಸಿದಾರೋ ಇಲ್ವಂತೋ?"

"ತಿಳಿಸ್ದೇ ಇರ್ತಾರೇನಮ್ಮ... ಅಲ್ಲದೇ ಅವನಿಗೆ ಹುಷಾರಿಲ್ಲದೇ ಕುಸಿದು ಬಿದ್ದಿದ್ದನಂತೆ. ಹೋಟೆಲ್ಲಿನವನು ಆಸ್ಪತ್ರೆಗೆ ಸೇರಿಸಿ, ಪೋಲೀಸರಿಗೆ ತಿಳಿಸಿದನಂತೆ. ಅವರಿಗೆ ಅನುಮಾನ ಬಂದು ಇಲ್ಲಿಯ ಪೋಲೀಸರಿಗೆ ತಿಳಿಸಿ, ಅರೆಸ್ಟ್ ಮಾಡಿದಾರೆ... ಸ್ವಲ್ಪ ರಿಕವರ್ ಆದ ಮೇಲೆ ಇಲ್ಲಿಗೆ ಕರ್‍ಕೊಂಡು ಬರ್ತಾರಂತೆ..."

"ಕೇಸು ಗಟ್ಟಿಯಾಗಿರಬೇಕು. ವಿಚಾರಣೆ ಬಲವಾಗಿರ್ಬೇಕು. ಯಾವುದೇ ಕಾರಣಕ್ಕೂ ಅವನಿಗೆ ಬೇಲ್ ಕೂಡಾ ಸಿಗಬಾರದು... ಹಾಗಂತ ಲಾಯರ್ರಿಗೆ ಹೇಳಬೇಕು. ಜೀವಾವಧಿ ಶಿಕ್ಷೆ ಅನುಭವಿಸಬೇಕು ಅವನು..." ತಾಯಿ ಉದ್ವೇಗದಿಂದ ಹೇಳಿದಾಗ ತಂದೆ ಸಾಂತ್ವನಗೊಳಿಸಿದರು.

"ಸಾಕ್ಷಿ, ಪುರಾವೆ ಎಲ್ಲಾ ಸ್ಟ್ರಾಂಗ್ ಆಗಿದ್ದರೆ, ಅವನಿಗೆ ಬಿಡುಗಡೆಯೇ ಇಲ್ಲ. ಅದನ್ನೆಲ್ಲ ಕೋರ್ಟು ಲಾಯರ್ರು ನೋಡ್ಕೋತಾರೆ. ವಿಚಾರಣೆಗೆ ಕರೆದಾಗ ನಾವುಗಳು ಹೋಗ್ಬೇಕು... ರೇಣುಕಾಳ ತಂದೆ ತಾಯಿ ಅವನನ್ನು ಸುಮ್ಮನೆ ಬಿಡ್ತಾರಾ...? ಅಣ್ಣನ ಮಗ ಅಂತ ನೀನು ಸಡಿಲ ಬಿಟ್ಟರೂ ಬಿಡಬಹುದು... ಅವರಿಗೇನು ಮುಲಾಜು...?"

"ಯಾರಿಗೂ ಮುಲಾಜಿಲ್ಲ. ಸೀಮಾ 'ಗೌತಮ ಗೌತಮ' ಅಂತ ಹಂಬಲಿಸ್ತಿದ್ಲು ಅಂಥ ಅವಳ ಫ್ರೆಂಡು ಹೇಳ್ತಿದ್ಲು... ಶಶಾಂಕ ಅವಳನ್ನು ಮದುವೆಯಾಗ್ತೀನಿ ಅಂತ ನಿರ್ಧರಿಸಿದ್ದಾನೆ. ಈಗ ಈ ವಿಷಯ ತಿಳಿದು ಅವಳು ಮನಸ್ಸು ಬದಲಾಯಿಸಿ ಬಿಟ್ರೇ...?"

"ಹೇಗಮ್ಮ ಬದಲಾಯಿಸ್ತಾಳೆ.... ಈಗಾಗ್ಲೇ ಮದುವೆಗೆ ದಿನಾಂಕವನ್ನು ಕೂಡಾ ಗೊತ್ತು ಮಾಡಿದ್ದಾಗಿದೆ. ಅವನು ಜೈಲಿನಲ್ಲಿರ್ತಾನೆ, ಇವಳಿಗೆಲ್ಲಿ ಸಿಗ್ತಾನೆ...? ಅಲ್ಲದೇ ಮದುವೆ ಆಗೋವರ್‍ಗೂ ಅವನಿಗೆ ತಿಳೀಬಾರ್‍ದು ಅಷ್ಟೇ.... ನಾನು ಈಗ್ಲೇ ವಾಣಿಗೆ ಫೋನು ಮಾಡ್ತೀನಿ." ಎಂದು ಶಶಾಂಕ ಫೋನಿನ ಬಳಿಗೆ ಬಂದ. ಅಷ್ಟರಲ್ಲಿ ಅವನ ಮೊಬೈಲ್ ರಿಂಗಾಗಿತ್ತು. ಸೀಮಾಳೇ ಅವನಿಗೆ ಫೋನು ಮಾಡಿದ್ದಳು.

"ಹಲೋ ಸೀಮಾ ಹೇಗಿದೀರಿ...?" ವಿಶ್ವಾಸದಿಂದ ವಿಚಾರಿಸಿದ.

"ಶಶಾಂಕ್, ಗೌತಮನ್ನ ಅರೆಸ್ಟ್ ಮಾಡಿದಾರಂತೆ. ವಾಣಿಗೆ ಪೋಲೀಸರು

ವಿಷಯ ತಿಳ್ಸಿದಾರೆ. ನಿಮಗೇನಾದ್ರೂ ವಿಷಯ ಗೊತ್ತಾಯ್ತಾ?"

"ಹ್ಞೂಂ ನಂಗೂ ಈಗ ಸ್ವಲ್ಪ ಹೊತ್ನಲ್ಲಿ ವಿಷಯ ತಿಳೀತು. ನಾನೇ ಫೋನು ಮಾಡೋಣ ಅಂತಿದ್ದೆ... ಅವನು ಸಧ್ಯಕ್ಕೆ ಇಲ್ಲಿಗೆ ಬರಲ್ಲ. ನೀವೇನು ಗಾಬರಿ ಯಾಗ್ಬೇಡಿ..."

"ಗಾಬರಿಯಾಗ್ದೆ ಇರುತ್ತಾ ಶಶಾಂಕ್... ಅವನು ತಪ್ಪಿಸ್ಕೊಂಡು ಬಂದು ನನ್ನನ್ನು ಅಟ್ಯಾಕ್ ಮಾಡಿದ್ರೆ?"

"ಹಾಗೇನೂ ಆಗೋಲ್ಲ. ನನ್ನ ಮಾತಿನ ಮೇಲೆ ನಿಮಗೆ ನಂಬಿಕೆ ಇಲ್ವಾ..?"

"ನಾನು ನಿಮ್ಮ ಮನೆಗೆ ಬರ್ಲಾ? ನಾನು ಅಲ್ಲಿದೀನಿ ಅಂತ ಅವನಿಗೆ ಅನುಮಾನ ಸಹ ಬರಲ್ಲ... ನಿಮ್ಮ ಪೇರೆಂಟ್ಸ್‌ಗೆ ಹೇಳ್ತೀರಾ?"

"ಹಾಗೇ ಮಾಡಿ...ಈಗಲೇ ವಾಣಿಯ ಜೊತೇಲಿ ಬನ್ನಿ... ನಾನು ಅಮ್ಮಂಗೆ ಹೇಳಿರ್ತೀನಿ...." ಎಂದ. ಅವನ ಮಾತುಗಳನ್ನು ಕೇಳಿಸಿಕೊಂಡಿದ್ದ ತಾಯಿ ಒಪ್ಪಲಿಲ್ಲ.

"ಈಗಾಗ್ಲೇ ನಿನ್ನ ಮೇಲೆ ಅಪವಾದವಿದೆ... ನೀನು ತಾಳಿ ಕಟ್ಟೋವರೆಗೂ ಅವಳು ಈ ಮನೆಗೆ ಕಾಲಿಡುವಂತಿಲ್ಲ. ಅವಳ ಅಪ್ಪನ ಮನೆಯಲ್ಲೇ ಯಾಕಿರ ಬಾರದು?"

"ಅವಳಿಗೆ ಭಯ.... ಶಶಾಂಕ ಅವಳ ಭಾರವನ್ನು ಹೊತ್ತಿದ್ದಾನೆ... ಅದನ್ನು ನಾವು ಪುರಸ್ಕರಿಸಬೇಕು... ಬರಲಿ ಬಿಡು... ಹೇಗೂ ಮುಂದಿನ ವಾರವೇ ಮದುವೆ... ಅಲ್ಲಿಯವರೆಗೆ ನಮ್ಮ ಕಣ್ಣೆದುರಿಗೇ ಇರ್ತಾಳೆ...." ಗಂಡ ಮಗನ ಪರ ವಹಿಸಿದಾಗ ಅವಳಿಗೆ ಸರಿ ಎನಿಸಲಿಲ್ಲ.

"ಬೇಡ, ಅವಳನ್ನು ತಾನೇ ಹೇಗೆ ನಂಬೋಕೆ ಆಗುತ್ತೆ. ಇಲ್ಲಿಂದ ಓಡಿ ಹೋದರೆ ಏನ್ಮಾಡ್ತೀರಿ...? ಶಶಾಂಕ ಕಿಡ್ನಾಪ್ ಮಾಡಿದ ಅಂತ ಕಂಪ್ಲೇಂಟ್ ಕೊಟ್ರೇ....? ಗೌತಮನ ತಂದೆ ತಾಯಿಗೂ ಶಶಾಂಕನ ಮೇಲೆ ಸಿಟ್ಟು. ಆ ಕೋಪಕ್ಕೆ ಇವನನ್ನೇ ದೂಷಣೆ ಮಾಡ್ತಾರೆ. ಎಲ್ರೂ ಸೇರಿ, ಶಶಾಂಕನಿಗೆ ಮತ್ತೆ ಜೈಲು ಶಿಕ್ಷೆ ಕೊಡಿಸ್ತಾರೆ."

"ಹಾಗೆಲ್ಲಾ ಏನೂ ಆಗಲ್ಲಮ್ಮಾ. ನೀನು ಹೀಗೆ ಮಾತಾಡಿದ್ರೆ, ನಾನೇ ಹೋಗಿ ವಾಣೀ ಮನೆಯಲ್ಲಿ ಇದ್ದು ಬಿಡ್ತೀನಿ.... ಅದು ಚೆನ್ನಾನಾ?"

"ಯಾಕೋ.... ಈಗ ... ನಮಗಿಂತ ಅವಳೇ ಹೆಚ್ಚಾದ್ಲಾ....? ಮದುವೆಗೆ ಮೊದಲೇ ಅವಳ ಜೊತೇಲಿ ಇರ್ತೀನಿ.... ಅವಳನ್ನು ರಕ್ಷಿಸ್ತೀನಿ ಅನ್ನೋ ಹುಚ್ಚಾಟ ನಿಂಗ್ಯಾಕೆ?"

"ರೇಣುಕನ್ನ ನಾನು ರಕ್ಷಿಸೋಕೆ ಆಗ್ಲಿಲ್ಲ. ಕಳ್ಕೊಂಡು ಬಿಟ್ಟೆ... ಈಗ ಇವಳನ್ನು

ಕಳೆದುಕೊಳ್ಳೋಕೆ ನಾನು ರೆಡಿ ಇಲ್ಲ... ಈಗೇನ್ಮಾಡ್ಲೀ ನೀನೇ ಹೇಳು..."

"ಅದೇನ್ಮಾಡ್ಕೋತೀಯೋ ಮಾಡು... ಆದರೆ ಅವಳು ಈ ಮನೆಯ ಹೊಸಿಲೊಳಗೆ ಕಾಲಿಡುವ ಮುನ್ನ ಅವಳ ಕೊರಳಲ್ಲಿ ಮಾಂಗಲ್ಯವಿರಬೇಕು...

ಹಾಗೇ ಅವಳು ಇಲ್ಲಿಗೆ ಬರುವಂತಿಲ್ಲ."

"ಇದೇನೇ ನಿನ್ನ ಕಂಡೀಷನ್.? ದಿಢೀರನೇ ಹೀಗೆ ಮಾಡೋಕ್ಕೆ ಆಗುತ್ತಾ?"

"ಯಾಕೆ ಆಗೋಲ್ಲ? ಹೇಗೂ ರೇಣುಕಾಳಿಗೆ ಅಂತ ತಂದಿದ್ದ ಮಾಂಗಲ್ಯದ ಸರ ಇದೆ. ತಗೊಂಡು ಹೋಗಿ ಅವಳಿಗೆ ತೊಡಿಸಿ ಕರ್ಕೊಂಡು ಬರಲಿ."

"ಈ ಮದುವೆಗೆ ಸಾಕ್ಷಿ ಬೇಡ್ವೇನೇ?"

"ವಾಣೀ, ಅವಳ ತಮ್ಮ, ನಾನು, ನೀವು, ವಿಜಯ ಇಷ್ಟು ಸಾಕ್ಷಿ ಸಾಕು... ಹೋಗು, ಅವಳನ್ನು ಕರ್ಕೊಂಡು ಬಾ" ಎಂದು ಹೇಳಿ ಮಾಂಗಲ್ಯದ ಸರವನ್ನು ಒಳಗಿನಿಂದ ತಂದು ಅವನ ಕೈಗಿತ್ತಳು. ತಾಯಿಯ ವರ್ತನೆ ಅವನಿಗೆ ಬೇಸರ ವನ್ನುಂಟು ಮಾಡಿತು.... ಆದರೆ ತಾಯಿಯ ಈ ನಿಬಂಧನೆಯನ್ನು ಒಪ್ಪುವುದು ಸರಿಯೋ ಒಪ್ಪದಿರುವುದು ಸರಿಯೋ ಅಂತ ಇನ್ನೂ ಯೋಚಿಸುತ್ತಿರುವಷ್ಟರಲ್ಲಿ ಮನೆಯ ಮುಂದೆ ಟ್ಯಾಕ್ಸಿ ನಿಂತಿತು. ಸದ್ದು ಕೇಳಿ, ಶಶಾಂಕ ಮುಂಬಾಗಿಲಿಗೆ ಬಂದ. ಟ್ಯಾಕ್ಸಿಯಿಂದ ಸುಧಾಮ ಹಾಗೂ ಅವನ ತಂದೆ ಇಳಿದರು. ಇವನ ಹುಬ್ಬುಗಳು ಗಂಟಿಕ್ಕಿದವು.

"ಮಾವ, ಸುಧಾಮ ಬಂದ್ರು... ಯಾತಕ್ಕೋ.." ಎಂದು ಗೊಣಗುತ್ತಾ ತನ್ನ ರೂಮಿಗೆ ಹೊರಟು ಹೋದ. ಮುಂಬಾಗಿಲಿಗೆ ಬಂದವರನ್ನು ತಂದೆ, ಬಿಗುಮಾನ ದಿಂದಲೇ ಸ್ವಾಗತಿಸಿದರು.

"ಏನಮ್ಮ ರುಕ್ಮಿಣೀ... ಎಲ್ಲ ಹೇಗಿದೀರಿ...? ಆತ ವಿಚಾರಿಸಿದ.

"ನನ್ನಿಂದ ಏನಾಗ್ಬೇಕಾಗಿದೆ? ಇಲ್ಲಿಯ ತನಕ ಬಂದಿದೀಯ...?"

"ಸುಧಾಮನ ಹೆಂಡತಿಗೆ ಗಂಡು ಮಗುವಾಯ್ತು... ಹೇಳಿ ಹೋಗೋಣ ಅಂತ ಬಂದೆವು... ಸ್ವೀಟ್ಸ್ ತಗೋ..." ಸುಧಾಮ ಕೈ ಚೀಲವನ್ನು ಮೇಲಿಟ್ಟ.

"ನಮ್ಮ ಮನೆಯ ಸಂತೋಷವನ್ನು ಹಾಳು ಮಾಡಿ, ನಿನ್ನ ಮನೆಯ ಖುಷಿಯನ್ನು ಹಂಚಿಕೊಳ್ಳಲು ಬಂದಿದೀಯಾ... ಏನೂ ಅನ್ನಿಸೋಲ್ವಾ ನಿನಗೆ?"

"ಹೀಗಾಗಬಾರದಾಗಿತ್ತು, ಅಣ್ಣನನ್ನು ಮೂದಲಿಸಿದಳು ಆಕೆ. ಇದರಲ್ಲಿ ಗೌತಮನ ತಪ್ಪು ಎಷ್ಟಿದೆ ಏನಿಲ್ಲ ಅಂಥ ವಿಚಾರಣೆ ನಡೆದ ಮೇಲೇ ತಿಳಿಯೋದು... ಗೌತಮ ಸೀಮಾಳನ್ನು ಮದುವೆಯಾಗ್ಬೇಕು ಅಂತಿದ್ದ... ಅಂಥಾದ್ದರಲ್ಲಿ ನಿನ್ನ ಸೊಸೆಯಾಗಲಿದ್ದವಳ ಜೊತೆ ಹಾಗೆಲ್ಲಾ ನಡೆದುಕೊಳ್ಳೋದು ಸಾಧ್ಯಾನಾ...? ಇದನ್ನು ಬೇರೆ ಯಾರೋ ಮಾಡಿ, ಇವನ ತಲೆ ಮೇಲೆ ಹಾಕಿ ಹೆದರಿಸಿದಾರೆ."

"ನಿಜ ಏನೂಂತ ಎಲ್ಲಾ ಬಯಲಾಗುತ್ತೆ.....ಈಗ್ಯಾಕೆ ಈ ಮಾತು?"

"ಸೀಮಾನ ನಿನ್ನ ಸೊಸೆ ಮಾಡ್ಕೋಬೇಕು ಅಂತ ತೀರ್ಮಾನಿಸಿನಿದ್ದೀರಂತೆ... ಗೌತಮ ಇನ್ನೂ ಬದುಕಿದಾನೆ... ಅವನು ನಿರಪರಾಧಿ ಅಂತ ಸಾಬೀತಾಗುತ್ತದೆ... ಅಷ್ಟರಲ್ಲೇ ಇದೆಲ್ಲಾ ಏನು ಅಂತ...? ಆ ಹುಡುಗಿಯ ತಲೇನ ಯಾಕೆ ಕೆಡಿಸ್ತಿದೀರಿ?"

"ಯಾರು ಆ ಹುಡುಗಿ? ಗೌತಮನ ಫ್ರೆಂಡ್ ಅಷ್ಟೇ... ನಿಮಗೂ ಅವಳಿಗೂ ಏನು ಸಂಬಂಧ...? ಗೌತಮ ಹೇಳದೇ ಕೇಳದೇ ಊರನ್ನು ಬಿಟ್ಟು ಓಡಿ ಹೋದ ದಿನವೇ ಅವಳ ಸಂಬಂಧ ಕಡಿದಿದೆ... ಅವಳ ತಲೆಯನ್ನು ಯಾರೂ ಕೆಡಿಸ ಬೇಕಾಗಿಲ್ಲ... ಶಶಾಂಕನನ್ನು ತಾನೇ ಇಷ್ಟಪಟ್ಟು ಮದುವೆ ಆಗ್ತಿದಾಳೆ... ಶಶಾಂಕ ದೊಡ್ಡ ಮನಸ್ಸು ಮಾಡಿ ಒಪ್ಪಿಕೊಂಡಿದ್ದಾನೆ. ಅವಳ ಲೈಫು ಹಾಳಾಗದಂತೆ ನೋಡ್ಕೋತಾನೆ. ಇದರಿಂದ ನಿಮಗೇನು ಕಷ್ಟ...?"

"ಇದೇ ಹುಡುಗಿ ಆಗ್ಬೇಕಾ ನಿನ್ನ ಮಗನಿಗೆ?"

"ರೇಣುಕಾನೇ ಬೇಕಾಗಿತ್ತಾ ನಿನ್ನ ಮಗನಿಗೆ ಕೆಡಿಸೋಕ್ಕೇ...?"

"ಓ..ಇದು ಪ್ರತೀಕಾರ... ಈಗ ಅರ್ಥವಾಯ್ತು... ಗೌತಮ ಶಶಾಂಕನನ್ನು ಸುಮ್ಮನೆ ಬಿಡೋಲ್ಲ..."

"ಮೊದಲು ಕೋರ್ಟು, ಕಾನೂನು ಅವನನ್ನು ಸುಮ್ಮನೆ ಬಿಡಲಿ. ಆಮೇಲೆ ಬಂದು ಮಾತಾಡುವಂತೆ..."

"ಹಾಗಾದರೆ, ಇದೇ ಕಡೇ ನಿರ್ಧಾರಾನಾ...?"

"ಹೋಗಲಿ ಹೇಳಿ ಅತ್ತೇ... ಗೌತಮ ನಿರಪರಾಧಿ ಅಂತ ಸಾಕ್ಷಿ ಹೇಳೋಕೆ ನಿಮಗೆ ಎಷ್ಟು ಹಣ ಬೇಕು... ? ಶಶಾಂಕ ರೇಣುಕಾದೇ ತಪ್ಪು ಅಂತ ಒಂದ್ಮಾತು ಹೇಳ ಬಿಡಲಿ... ಗೌತಮನಿಗೆ ಬಿಡುಗಡೆಯಾಗಬಹುದು..." ಸುಧಾಮ ಹೇಳಿದ.

"ಗೌತಮ ಭಿಕಾರಿ ಥರ ಗಲ್ಲೀಲಿ ಎಲ್ಲೋ ಅವಿತು ಕೂತಿದಾನೆ. ಮೊದಲು ಅವನ ಬಾಯಿಂದ ನಿಜ ಏನೂಂತ ಹೊರಡಿಸಿ... ನಮಗೆ ಯಾವ ದುಡ್ಡೂ ಕಾಸೂ ಬೇಡ. ನಾವು ಯಾವ ಸುಳ್ಳು ಸಾಕ್ಷಿಯನ್ನೂ ಹೇಳುವುದಿಲ್ಲ. ಕೊಲೆಗಾರ ತಮ್ಮನನ್ನು ನಿರಪರಾಧಿ ಅಂತ ಸಾಬೀತು ಮಾಡೋಕೆ ಹೊರಟಿದ್ದೀಯಲ್ಲ, ನಿಂಗೆ ನಾಚ್ಕೆ ಆಗೋಲ್ವಾ? ಅವನು ನಿನ್ನ ಹೆಂಡತಿಯ ಮೇಲೆ ಅತ್ಯಾಚಾರ ಮಾಡಿದ್ದಿದ್ರೆ ಏನ್ಮಾಡ್ತಿದ್ದೆ?" ರುಕ್ಮಿಣಿ ಕಿರುಚಾಡಿದಳು.

"ರುಕ್ಕೂ, ಸುಮ್ನಿರು. ಹಾಗೆಲ್ಲಾ ಮಾತಾಡ್ಬಾರ್ದು." ಗಂಡ ಸಮಾಧಾನ ಹೇಳಿದರು.

"ನೀವು ಸುಮ್ನಿರಿ, ಇವರುಗಳು ನಾವು ತಲೆ ಎತ್ತಿ ತಿರುಗಾಡದಂತೆ ಮಾಡಿದ್ರಲ್ಲ. ರೇಣುಕಾಳ ತಂದೆ ತಾಯಿಗಳ ಕಣ್ಣಿನಲ್ಲಿ ನಮ್ಮನ್ನು ಅಪರಾಧಿಗಳನ್ನಾಗಿ ಮಾಡಿದ್ರು...

ನಾನ್ಯಾಕೆ ಸುಮ್ನಿರ್ಬೇಕು?"

"ಹೋದ ರೇಣುಕಾ ವಾಪಸ್ಸು ಬರೋಲ್ಲ. ಆ ಅರಿವು ಅವಳ ತಂದೆ-ತಾಯಿಗಳಿಗಿದೆ. ಕೋರ್ಟಿನಲ್ಲಿ ನಮ್ಮ ಕಡೆ ಸಾಕ್ಷಿ ಹೇಳುವುದಕ್ಕೆ ಒಪ್ಪಿಕೊಂಡಿದ್ದಾರೆ ....."

"ಸುಳ್ಳು! ಯಾವ ಮರ್ಯಾದಸ್ಥ ತಂದೆ ತಾಯಿಗಳೂ, ಮಗಳಿಗೆ ಅನ್ಯಾಯವಾದುದನ್ನು ಮರೆಯುವುದಿಲ್ಲ... ಕತೆ ಕಟ್ಟಿದೀರಿ....."

"ರೇಣುಕಾಳನ್ನು ಇಷ್ಟು ಬೇಗ ಮರೆತು, ಮತ್ತೆ ಮದುವೆಯಾಗೋಕೆ ಹೊರಟಿರುವ ಅಳಿಯನ ಬಗ್ಗೆ ತಾತ್ಸಾರ, ಕೋಪ ಎಲ್ಲಾ ಇದೆ ಅವರಿಗೆ"

"ಚೆನ್ನಾಗಿದೆ... ಮದುವೆ ನಡೆದಿರ್ಲಿಲ್ಲ...ಅದಕ್ಕೆ ಇವನ್ಯಾಕೆ ಹೊಣೆಯಾಗ್ಬೇಕು? ಒಂದು ವೇಳೆ ಸೀಮಾಳೊಡನೆ ಬಲಾತ್ಕಾರ ನಡೆದು, ಕೊಲೆ ನಡೆದಿದ್ದರೆ, ಗೌತಮ ಹಾಗೇ ಜೀವನ ಪರ್ಯಂತ ಒಂಟಿಯಾಗಿ ಇರ್ತಿದ್ನಾ...?"

"ಇರ್ತಿದ್ದ. ನಿಜವಾಗಿ ಪ್ರೀತಿಸ್ತಿದ್ದಾನೆ ಸೀಮಾಳನ್ನು..."

"ಹಾಗಾದ್ರೆ ರೇಣುಕಾಳನ್ನು ತನ್ನ ಮನೆಗೆ ಯಾಕೆ ಕರೆಸಿಕೊಂಡ? ರೇಪ್ ಯಾಕೆ ಮಾಡ್ದ? ಕತ್ತು ಹಿಸುಕಿ ಯಾಕೆ ಕೊಂದ? ಇದು ನಿಷ್ಠಾವಂತ ಪ್ರೇಮಿಯ ಲಕ್ಷಣಾನಾ...? ಸೀಮಳಿಗೆ ಗೌತಮನ ದ್ರೋಹದ ಅರಿವಾಗಿದೆ. ಅವಳೇ ಅವನ ಪರ ಇಲ್ಲ...ಇನ್ನು ಎಷ್ಟೇ ಮಾತಾಡಿದ್ರೂ ಅಷ್ಟೇ...ಅವನನ್ನು ಉಳಿಸೋಕ್ಕೆ ಆಗೋಲ್ಲ..."

"ಅವನನ್ನು ಉಳಿಸ್ಕೋತೀನಿ. ಅದಕ್ಕೆ ಏನು ಮಾಡ್ಬೇಕು ಅಂತ ನಮಗೆ ಗೊತ್ತು." ಎಂದು ಅವರಿಬ್ಬರೂ ಎದ್ದು ಹೋದರು. ಅವರುಗಳು ಅತ್ತ ಹೋದ ಕೂಡಲೇ ರುಕ್ಮಿಣಿ ಮಗನಿಗೆ ಆಜ್ಞೆ ಮಾಡಿದಳು.

"ಈಗ್ಲೇ ಹೋಗಿ ಸೀಮನ್ನ ಕರ್ಕೊಂಡು ಬಾ..." ತಂದೆ ಮಗ ಮುಖ ಮುಖ ನೋಡಿಕೊಂಡರು.

"ಈ ರಂಗಣ್ಣ ಏನು ಬೇಕಾದ್ರೂ ಮಾಡ್ತಾನೆ. ಸೀಮಾ ಅಲ್ಲಿ ಒಂಟಿಯಾಗಿ ಇರುವುದು ಸರಿಯಲ್ಲ... ಈಗ್ಲೇ ಕರ್ಕೊಂಡು ಬಾ... ಬರ್ತಿದ್ದ ಹಾಗೇ ದೇವರ ಮುಂದೆ ಕುಳಿತು ತಾಳೀ ಕಟ್ಟು... ಆಮೇಲೆ ಯಾರೂ ಏನೂ ಮಾಡೋಕ್ಕಾಗುಲ್ಲ. ಹಾಗೇ ವಾಣೀನ, ಅವಳ ತಮ್ಮನ್ನ ಕರ್ಕೊಂಡು ಬಾ..." ಎಂದು ಹೇಳಿ, ಸಮೀಪದಲ್ಲಿದ್ದ ಅರ್ಚಕರ ಮೊಬೈಲ್‌ಗೆ ಫೋನು ಮಾಡಿದಳು.

"ಇನ್ನರ್ಧ ಗಂಟೇಲಿ ನಮ್ಮ ಮನೆಗೆ ಬನ್ನಿ. ಮುಖ್ಯವಾದ ಕಾರ್ಯವಿದೆ..." ಎಂದು ಹೇಳಿ, ಗಂಡನ ಕಡೆ ತಿರುಗಿದಳು. ಏನು ಹಾಗೆ ಮುಖ ನೋಡ್ತಾ ನಿಂತುಬಿಟ್ರಿ... ಹೂವಿನ ಅಂಗಡಿಗೆ ಹೋಗಿ ಎರಡು ಹಾರಗಳನ್ನು ತನ್ನಿ... ಹಾಗೇ

ಒಂದಿಷ್ಟು ಹಣ್ಣುಗಳನ್ನು ತನ್ನಿ... ಹೋಗೋ ಶಶಿ, ನೀನು ಹೋಗ್ತಾ ಇವರನ್ನು ಮಾರ್ಕೆಟ್ಟಿನ ಹತ್ತಿರ ಇಳಿಸು, ಬರ್ತಾ ಆಟೋದಲ್ಲಿ ಬನ್ನಿ..."ಎಂದು ಅವಸರ ಪಡಿಸಿದಳು. ಅವರಿಬ್ಬರನ್ನೂ ಕಳಿಸಿ, ದೇವರ ಮನೆಗೆ ಬಂದಳು. ದೇವರ ಮುಂದೆ ತುಪ್ಪದ ದೀಪಗಳನ್ನು ಹಚ್ಚಿಟ್ಟಳು. ಸರಸರನೆ, ಕಡಲೇ ಬೇಳೆಯ ಪಾಯಸವನ್ನು ಮಾಡಿ, ದ್ರಾಕ್ಷಿ, ಗೋಡಂಬಿಯನ್ನು ಹುರಿದು ಹಾಕಿದಳು. ಚಿತ್ರಾನ್ನವನ್ನು ಕಲೆಸಿಟ್ಟಳು. ಎಲ್ಲರಿಗೂ ಕುಡಿಯಲು ಕೊಡಲೆಂದು ನಿಂಬೆ ಹಣ್ಣಿನ ಪಾನಕವನ್ನು ಮಾಡಿ, ತಟ್ಟೆ ಲೋಟ, ಬಟ್ಟಲುಗಳನ್ನು ಜೋಡಿಸಿಟ್ಟಳು. ಅಷ್ಟರಲ್ಲಿ ಅರ್ಚಕರು ತಮ್ಮ ಪೂಜಾ ಸಾಮಗ್ರಿಗಳೊಡನೆ ಹಾಜರಾದರು.

"ಅರ್ಚಕರೇ, ನನ್ನ ಮಗನ ಮದುವೆಯನ್ನು ಅರ್ಜೆಂಟಾಗಿ ಮಾಡಬೇಕಾಗಿದೆ. ಇಲ್ಲದಿದ್ರೆ ಹುಡುಗಿ ಕೈ ತಪ್ಪಿ ಹೋಗ್ತಾಳೆ.... ದೇವರ ಮುಂದೆ ಎಲ್ಲಾ ರೆಡಿ ಮಾಡಿಟ್ಟಿದೀನಿ. ಮಂತ್ರ ಹೇಳಿ, ತಾಳಿ ಕಟ್ಟಿಸಿ. ಅಷ್ಟು ಈಗ ಆಗಲೇ ಬೇಕು" ಎಂದಳು.

"ಹೀಗೆ ಅವಾಂತರದಲ್ಲಿ ಯಾಕಮ್ಮಾ? ಮುಂದಿನ ವಾರ ಹೇಗೂ ಮುಹೂರ್ತ ನಿಶ್ಚಿತವಾಗಿದೆಯಲ್ಲ."

"ಅಲ್ಲಿಯವರೆಗೆ ತಾಳುವುದಕ್ಕಾಗುವುದಿಲ್ಲ. ಹುಡುಗಿಗೆ ಬೆದರಿಕೆ ಇದೆ. ಒಂದು ಸಾರಿ ಅವಳು ನಮ್ಮ ಮನೆಯನ್ನು ಸೇರಿಬಿಟ್ಟರೆ ನಿಶ್ಚಿಂತೆ. ಅವಳ ರಕ್ಷಣೆ ನಮ್ಮದು..."

"ಹಾಗಂತ, ದಿನ, ಘಳಿಗೆ, ನಕ್ಷತ್ರ ಯೋಗ ಒಂದನ್ನೂ ನೋಡಿಲ್ಲವಲ್ಲಮ್ಮ. ಅಪಚಾರವಾಗುತ್ತೆ........ತಾರಾಬಲ, ಚಂದ್ರಬಲ ಎಲ್ಲಾ ಹೇಗಿದೆಯೋ?"

"ಈಗ ಅವಳು ಕೈ ತಪ್ಪಿ ಹೋದರೆ ಇನ್ನೂ ಅಪಚಾರವಾಗುತ್ತೆ... ನೀವೇನೂ ಚಿಂತಿಸ್ಬೇಡಿ. ನಿಮಗೆ ಯಾವ ಅಪವಾದವೂ ಬರಲ್ಲ.... ಎಲ್ಲಾ ಬಲಕ್ಕಿಂತ ಮನೋ ಬಲ ಮುಖ್ಯ... ನಮ್ಮ ಮನೆದೇವರು ಮಹಾಬಲೇಶ್ವರ... ಅವನ ಅನುಗ್ರಹವಿದ್ದರೆ, ಯಾವ ಅಡೆತಡೆಯೂ ಆಗಲ್ಲ. ಆದದ್ದಾಗಲೀ, ಮುಂದೆ ಏನಾಗುತ್ತೆ ಅಂತ ಆತಂಕವಿಲ್ಲ..ಈ ತಕ್ಷಣಕ್ಕೆ ಆಗುವ ಅಚಾತುರ್ಯವನ್ನು ತಪ್ಪಿಸಬೇಕು..."

"ಏನೋಮ್ಮ ನೀವು ಹೇಳುತ್ತಿರುವುದು ವಿಚಿತ್ರವಾಗಿದೆ. ಆದರೆ, ನಿಮಗೆ ಸಹಾಯ ಮಾಡುವುದು ನನ್ನ ಕರ್ತವ್ಯ.... ದೈವೇಚ್ಛೆ ಹೇಗಿದೆಯೋ ಹಾಗಾಗಲಿ..." ಎಂದು ಹೇಳಿ, ಕೈ ಕಾಲು ತೊಳೆದು, ದೇವರ ಮನೆಗೆ ಬಂದರು. ಅರ್ಧ ಗಂಟೆ ಯೊಳಗೆ, ಹೂವು, ಹಣ್ಣು, ಎಲೆ ಅಡಿಕೆ ಎಲ್ಲವನ್ನೂ ತಂದದ್ದಾಗಿತ್ತು. ಅರ್ಚಕರು ಎಲ್ಲವನ್ನೂ ಜೋಡಿಸಿ, ಇಟ್ಟರು.

"ನನ್ನ ಮಗ ಭಾವೀ ಸೊಸೆಯನ್ನು ಕರೆದುಕೊಂಡು ಬರಲು ಹೋಗಿದ್ದಾನೆ. ನೀವು ದೇವರ ಪೂಜೆಯನ್ನು ಶುರು ಮಾಡಿ..." ಎಂದಳು.

"ಸೀಮಾಳ ತಂದೆ ತಾಯಿಗೆ ವಿಷಯವನ್ನು ತಿಳಿಸದಿದ್ದರೆ ಚೆನ್ನಾಗಿರುಲ್ಲ. ಅವರಿಗೂ ಬರುವಂತೆ ತಿಳಿಸಬೇಕು."

"ಸರಿ, ಶಶಾಂಕನಿಗೆ ಫೋನು ಮಾಡಿ... ಹಾಗೇ ಬರ್ತಾ ಅವರನ್ನೂ ಕರೆದುಕೊಂಡು ಬರಲಿ..." ಎಂದಳು. ಆತ ಶಶಾಂಕನಿಗೆ ಫೋನು ಮಾಡಿ ವಿಷಯವನ್ನು ತಿಳಿಸಿದರು. ಶಶಾಂಕ ಹ್ಞೂಂ ಗುಟ್ಟಿದ.

ಶಶಾಂಕ, ಸೀಮಾ ಹಾಗೂ ವಾಣೀಯನ್ನು ಕರೆತಂದ. "ವಾಣಿಯ ತಮ್ಮ ಕಾಲೇಜಿಗೆ ಹೋಗಿದ್ದಾನೆ. ಸೀದಾ ಇಲ್ಲಿಗೇ ಬರುವಂತೆ ಹೇಳಿದೀನಿ." ಎಂದಳು ವಾಣಿ.... ಸೀಮಾ ಅನುಮಾನಿಸುತ್ತಾ ತುಸು ನಾಚಿಕೆಯಿಂದ ನಿಂತಿದ್ದಳು. ರುಕ್ಮಿಣಿ ಇಬ್ಬರನ್ನೂ ಒಳಗಿನ ರೂಮಿಗೆ ಕರೆದುಕೊಂಡು ಹೋದಳು. ಬೀರುವಿನ ಬಾಗಿಲನ್ನು ತೆಗೆದು ಹೊಸ ಹೊಸ ಸೀರೆಗಳನ್ನು ಅವಳಿಗೆ ತೋರಿಸಿದಳು.

"ಇವೆಲ್ಲಾ ಶಶಾಂಕನ ಹೆಂಡತಿಗಾಗಿ ತಂದ ಬೆಲೆ ಬಾಳುವ ಸೀರೆಗಳು. ಇವುಗಳಲ್ಲಿ ನಿನಗೆ ಯಾವುದು ಇಷ್ಟವೋ ಅದನ್ನು ಉಟ್ಟು ಬಾ. ಹಾಗೇ ಒಡವೆ ಗಳಲ್ಲಿ ಯಾವುದು ಬೇಕೋ ಅದನ್ನು ಧರಿಸಿಕೋ..." ಎಂದು ಹೇಳಿದಳು.

ಮನೆಯ ಮುಂಬಾಗಿಲಿಗೆ ಮಾವಿನೆಲೆಯನ್ನು ಸಿಕ್ಕಿಸಿ, ಹೂವುಗಳ ಹಾರವನ್ನು ಹಾಕಿ ಶುಭಾರಂಭವನ್ನು ಮಾಡಿದರು. ಅರ್ಚಕರು ದೇವರ ಪೂಜೆಯನ್ನು ಮಾಡುವಷ್ಟರಲ್ಲಿ ವಾಣಿ ಸೀಮಾಳಿಗೆ ಸಹಾಯ ಮಾಡಿ, ಮದುಮಗಳ ಅಲಂಕಾರವನ್ನು ಮಾಡಿದಳು. ಅಷ್ಟರಲ್ಲಿ ವಾಣಿಯ ತಮ್ಮ ಹಾಗೂ ಸೀಮಳ ತಾಯಿ ಹಾಗೂ ತಂಗಿ ಬಂದಿಳಿದರು. ವಾಣಿ ಸಂಧ್ಯಾಳಿಗೆ ವಿಷಯವನ್ನು ವಿವರಿಸಿ ದಳು. ಆಕೆ ಯಾವ ಭಾವನೆಯನ್ನೂ ಹೊರಗೆಡವಲಿಲ್ಲ. "ನಿನ್ನ ತಂದೆ ಊರಿನಲ್ಲಿಲ್ಲ. ಬಂದ ಮೇಲೆ ಏನಂತಾರೋ?" ಎಂದಷ್ಟೇ ನುಡಿದಳು.

"ಮುಂದಿನ ವಾರ ಹೇಗೂ ಶಾಸ್ತ್ರೋಕ್ತವಾದ ಮದುವೆ ಸಮಾರಂಭ ಇದ್ದೇ ಇದೆಯಲ್ಲ. ಅದಕ್ಕೆ ಮುಂಚೆ ಸೀಮಾಗೆ ಏನೂ ಅಪಾಯ

ಸಂಭವಿಸದಿರಲಿ ಅಂತ ಅವಳು ಇಲ್ಲೇ ಇರಲಿ" ಎಂದು ಆಕೆ ಹೇಳಿದಾಗ ಅವಳು ಸುಮ್ಮನೇ ಮಗಳ ಕಡೆ ನೋಡಿದಳು.

"ಅಕ್ಕಾ ಹಾಗಾದ್ರೆ ನೀನು ಗೌತಮನ್ನ ಮರೆತು ಬಿಡ್ತೀಯೇನೇ?" ಎಂದು ತಂಗಿ ಸೋನಿ ಕೇಳಿದಾಗ, ಸೀಮಾ ಪೆಚ್ಚು ಮುಖ ಮಾಡಿದಳು.

"ಈಗ ಗೌತಮನ ವಿಷಯವನ್ನು ಯಾರೂ ಎತ್ಬೇಡಿ..." ಎಂದು ಹೇಳಿ ವಾಣಿ ಎಲ್ಲರನ್ನೂ ಎಬ್ಬಿಸಿದಳು. ಅಷ್ಟರಲ್ಲಿ ಶಶಾಂಕ, ತನಗಾಗಿ ತಂದಿದ್ದ ಹೊಸ ಪಂಚೆ ಜುಬ್ಬಾ ಧರಿಸಿ ಹೊರಬಂದ. ಸೀಮಾಳನ್ನು ನೋಡಿ ಮೆಚ್ಚುಗೆಯನ್ನು ಸೂಸಿ, ಕೈ ಚಾಚಿದ. ಅವಳು ತನ್ನ ಕೈ ನೀಡಿದಳು. ಅವಳ ಕೈ ಹಿಡಿದು ಅವಳನ್ನು

ದೇವರ ಮನೆಗೆ ಕರೆತಂದ. ಇಬ್ಬರೂ ಅವರಿಗಾಗಿ ಸಿದ್ಧ ಮಾಡಿದ್ದ ಹಸೆ ಮಣೆಯ ಮೇಲೆ ಕುಳಿತರು... ದೇವರ ಪೂಜೆಯನ್ನು ಮಾಡಿ ಮುಗಿಸಿದ್ದ ಅರ್ಚಕರು, ಇವರಿಬ್ಬರಿಗೂ ಹೂವು ಅಕ್ಷತೆಯನ್ನು ಕೊಟ್ಟು ದೇವರಿಗೆ ಪೂಜೆ ಮಾಡಿಸಿ, ವಂದಿಸಿ, ಪ್ರಾರ್ಥಿಸುವಂತೆ ಹೇಳಿದರು. ಇಬ್ಬರ ಕೈಗೂ ಹೂವಿನ ಹಾರವನ್ನು ಕೊಟ್ಟು ಪರಸ್ಪರ ಹಾಕಿಕೊಳ್ಳಲು ಹೇಳಿದರು. ನಂತರ ಮಂತ್ರ ಪಠಣವನ್ನು ಮಾಡಿ, ಘಂಟೆಯ ನಾದವನ್ನು ಮಾಡುತ್ತಾ ಶಶಾಂಕ ಅವಳ ಕೊರಳಿಗೆ ಮಾಂಗಲ್ಯ ಧಾರಣೆಯನ್ನು ಮಾಡುವಂತೆ ಸೂಚಿಸಿದರು.

ಶಶಾಂಕ ನಗುಮುಖದಿಂದ ಅರ್ಚಕರು ಹೇಳಿದ್ದನ್ನೆಲ್ಲವನ್ನೂ ಪಾಲಿಸಿದ. ವಾಣಿಯ ತಮ್ಮ ತನ್ನ ಬಳಿ ಇದ್ದ ಕ್ಯಾಮೆರಾದಲ್ಲಿ ಪ್ರತಿಯೊಂದು ವಿಧಿ ವಿಧಾನವನ್ನೂ ಸೆರೆ ಹಿಡಿದ. ಶಶಾಂಕ, ಸೀಮಾಳ ಹಣೆಗೆ ಕುಂಕುಮವನ್ನಿಟ್ಟು ಕೆನ್ನೆಗೆ ಅರಿಶಿನ ಹಚ್ಚಿ, ಹೂವು ಮುಡಿಸುವಾಗ ಸಮೀಪದಿಂದ ಸೀಮಾಳ ಭಾವನೆಗಳನ್ನು ಗುರುತಿಸಲು ಪ್ರಯತ್ನಿಸಿದ. ಸಪ್ಪೆಯಾಗಿದ್ದ ಮುಖವನ್ನು ಕಂಡು ಅವಳ ಬಗ್ಗೆ ಅಯ್ಯೋ ಅಂತ ಅನ್ನಿಸದೇ ಇರಲಿಲ್ಲ. ಅತಿ ಸರಳವಾಗಿ ನೆರವೇರಿದ ಕಲಾಪಗಳ ಮಧ್ಯೆ, ಶಶಾಂಕ, ಸೀಮಾ ದಂಪತಿಗಳಾದರು... ವಾಣಿ ಹಾಗೂ ಸಂಧ್ಯಾ, ನವದಂಪತಿಗಳಿಗೆ ಆರತಿಯನ್ನೆತ್ತಿ ಶುಭವನ್ನು ಕೋರಿ, ಆಶೀರ್ವಾದವನ್ನು ಮಾಡಿದರು. ನಂತರ, ಅರ್ಚಕರು ದೇವರಿಗೆ ಮಹಾ ಮಂಗಳಾರತಿಯನ್ನು ಮಾಡಿದರು. ಎಲ್ಲರಿಗೂ ತೀರ್ಥ ಪ್ರಸಾದವನ್ನು ಕೊಟ್ಟು, ವಧೂವರರಿಗೆ ಶುಭವನ್ನು ಹಾರೈಸಿದರು. ತಾವು ತಂದಿದ್ದ ಯಡುಗೊರೆಯನ್ನು ಕೊಟ್ಟು ಆಶೀರ್ವದಿಸಿದರು. ಪಾನಕ ಕೋಸಂಬರಿಯನ್ನು ಸ್ವೀಕರಿಸಿ ತಮ್ಮ ಸಂಭಾವನೆಯನ್ನು ತೆಗೆದುಕೊಂಡು ಹೊರಟರು.

ರುಕ್ಮಿಣಿ, ವಾಣಿಯ ಸಹಾಯದಿಂದ ಎಲ್ಲರಿಗೂ ತಾನೇ ಮಾಡಿದ್ದ ಪಾಯಸದ ಅಡಿಗೆಯನ್ನು ಬಡಿಸಿದಳು... ಶಶಾಂಕನ ಮಗ್ಗುಲಲ್ಲಿ ಕುಳಿತಿದ್ದ ಸೀಮಾ ಗೌತಮನ ಬಗ್ಗೆ ಯೋಚಿಸುತ್ತಿದ್ದಳು. ಶಶಾಂಕ ಸೀಮಾಳ ಬಗ್ಗೆಯೇ ಯೋಚಿಸುತ್ತಿದ್ದ. ಸೀಮಾಳ ಪರಿಚಯವಿದ್ದರೂ ಕೆಲವೇ ದಿನಗಳಿಂದ ಇವಳೊಡನೆ ಒಡನಾಟವಾಗಿದೆ. ತಾನು ಇವಳನ್ನು ಪ್ರೀತಿಸಲು ತೊಡಗಿದ್ದೇನೆ ಎಂದು ಅರಿವಾಗಿತ್ತು...

ಎಲ್ಲರ ಊಟದ ನಂತರ, ರುಕ್ಮಿಣಿ ಉಳಿದವರಿಗೆ ಎಲೆ ಅಡಿಕೆ, ತಾಂಬೂಲ, ರವಿಕೆ, ಕಣವನ್ನು ಕೊಟ್ಟಳು.."ನನ್ನ ಮಗನ ಇಚ್ಛೆಯಂತೆ, ನಾನು ಸೀಮಾಳನ್ನು ನನ್ನ ಸೊಸೆಯನ್ನಾಗಿ ಸ್ವೀಕರಿಸಿದ್ದೀನಿ. ಇಂದಿನಿಂದ ಇವಳು ನನ್ನ ಮಗಳಂತೆ... ಇವಳನ್ನು ನಮಗೆ ಒಪ್ಪಿಸಿಕೊಡಿ." ಎಂದಳು.

ಸಂಧ್ಯಾ ಮುಜುಗರಗೊಂಡಳು. "ಹೀಗೆಲ್ಲಾ ಒಂದು ಬೆಳವಣಿಗೆ, ಒಂದು

ತಿರುವು ಬರುತ್ತೆ ಅಂತ ನಾನು ಅಂದುಕೊಂಡಿರಲಿಲ್ಲ... ನೀವೆಲ್ಲಾ ಇವಳ ಒಳಿತನ್ನು ಕುರಿತು ಇಷ್ಟೆಲ್ಲಾ ಶ್ರಮ ವಹಿಸಿದ್ದೀರಿ. ಇದಕ್ಕಿಂತ ಬೇರೆ ಏನು ಬೇಕು... ನನ್ನ ಮಗಳು ಇಂದಿನಿಂದ ನಿಮ್ಮ ಮನೆಯ ಸೊಸೆ... ನನಗೆ ಸಂಪೂರ್ಣ ಒಪ್ಪಿಗೆ ಇದೆ" ಎಂದು ಹೇಳಿ, ಸೀಮಾಳ ಕೈ ಹಿಡಿದು ರುಕ್ಮಿಣಿಯ ಕೈಗೆ ಒಪ್ಪಿಸಿದಳು. ಫೊಟೋ ಫ್ಲಾಷ್ ಬೆಳಗಿತು.

"ನಾವಿನ್ನು ಬರ್ತೀನಿ... ಮದುವೆ ಮನೆಯಲ್ಲಿ ಭೇಟಿಯಾಗೋಣ" ಎಂದು ಹೇಳಿ ಎಲ್ಲರಿಗೂ ವಂದಿಸಿ ಹೊರಟಳು. ಅವಳ ಕಣ್ಣುಗಳಲ್ಲಿ ನೀರಿರಲಿಲ್ಲ. ಸೀಮಾಳ ಕಣ್ಣುಗಳಲ್ಲೂ ಸಹ ತೇವವಿರಲಿಲ್ಲ. ಅತ್ತವಳು ತಂಗಿ ಸೋನಿ ಮಾತ್ರ. ವಾಣಿ ಅವಳನ್ನು ಸಮಾಧಾನಗೊಳಿಸಿದಳು.

ವಾಣಿ, ಅವಳ ತಮ್ಮನೊಡನೆ ಹೊರಟಾಗ ಸೀಮಾ, ಅವಳ ಕೈ ಹಿಡಿದು ಪಿಸುದನಿಯಲ್ಲಿ "ಇವತ್ತು ಇಲ್ಲೇ ಇರಿ ವಾಣೀ... ನಂಗೆ ಕಸಿವಿಸಿಯಾಗ್ತಿದೆ" ಎಂದಳು. ವಾಣಿ ರುಕ್ಮಿಣಿಯ ಕಡೆ ನೋಡಿದಳು. ಆಕೆ, ವಿಷಯ ಏನಿರಬಹುದೆಂದು ಗ್ರಹಿಸಿದಳು.

"ಶಶಾಂಕ, ನಿನ್ನನ್ನು ಪ್ರೀತಿಸಿ ಮದುವೆಯಾಗಿದ್ದಾನೆ... ಈಗಾಗ್ಲೇ ನಿಮ್ಮಿಬ್ಬರ ಮಧ್ಯೆ ಏನು ಗೊಂದಲವೂ ಬರುಲ್ಲ. ಆತಂಕ ಪಡ್ಬೇಡ. ವಾಣಿ ನೀವು ಹೋಗಿ" ಎಂದಳು.

ಶಶಾಂಕ ಮಧ್ಯೆ ಬಾಯಿ ಹಾಕಿದ. "ಅಕ್ಕ ಬರುವವರೆಗೂ, ವಾಣಿ ಇಲ್ಲಿರಲಿ. ಇಲ್ದಿದ್ರೆ ಸೀಮಾ ಒಂಟಿಯಾಗಿ ಬಿಡ್ತಾಳೆ..." ಎಂದ. ಆಕೆ ಸುಮ್ಮನಾದಳು. ವಾಣಿ ಅಲ್ಲೇ ಉಳಿದಳು. ಅವಳ ತಮ್ಮ ಹೊರಟು ಹೋದ.

ವಾಣಿ, ಸೀಮಾ ಇಬ್ಬರೇ ಇರುವಾಗ, ವಾಣಿ ನುಡಿದಳು..."ಸೀಮಾ ನಿಮ್ಮ ಅತ್ತೆಗೆ ಬೇಜಾರಾಯ್ತು. ಶಶಾಂಕ ಏನು ಹೊಸಬನಾ...? ನಾನು ಹೊರಟು ಹೋಗ್ಬೇಕಾಗಿತ್ತು..."

"ಮೆಂಟಲಿ ನಾನು ಈ ಮನೆಗೆ ಇನ್ನೂ ಪ್ರಿಪೇರ್ ಆಗಿಲ್ಲ. ಶಶಾಂಕ ಒಳ್ಳೆಯವನೇ ಇರಬಹುದು... ಆದರೂ...."

"ಸರಿ, ಇವತ್ತು ಒಂದು ರಾತ್ರಿ ನಾನು ಇಲ್ಲಿರ್ತೀನಿ. ನಾನು ನಾಳೆ ಹೋಗಲೇ ಬೇಕು. ನನ್ನ ತಮ್ಮನಿಗೆ ಕಷ್ಟವಾಗುತ್ತೆ. ಅಷ್ಟರಲ್ಲಿ ನೀನು ಈ ಮನೆಗೆ ಅಡ್ಜಸ್ಟ್ ಮಾಡಿಕೊಂಡಿರ್ಬೇಕು. ನಿನ್ನ ತಾಯಿಗೆ ಹೇಳಿದ್ದರೆ ಅವರೂ ಇಲ್ಲಿರುತ್ತಿದ್ದರು."

"ಅಮ್ಮ, ಗೌತಮನ್ನ ಮರೆಯೋಕೆ ಬಿಡೋಲ್ಲ. ಪದೇ ಪದೇ ಅದೇ ಮಾತಾನ್ನಾಡ್ತಾಳೆ. ಇವರೆಲ್ಲಾ ಏನಂದ್ಕೊಳ್ತಾರೆ....? ಈಗ ಇಲ್ಲಿ ಹೀಗೆ ಕೂತು ಏನ್ಮಾಡೋದು ವಾಣೀ...?"

"ಶಶಾಂಕನಿಗೆ ಹೇಳ್ತೀನಿ. ಹೊರಗೆ ಎಲ್ಲಾದ್ರೂ ತಿರುಗಾಡ್ಕೊಂಡು ಬನ್ನಿ..." ಎಂದು ಹೇಳಿ, ಶಶಾಂಕನನ್ನು ಕರೆಯಲು ಹೊರಬಂದಳು. ಅವನು ಸೋಫಾ ಮೇಲೆ ಮಲಗಿ ನಿದ್ದೆ ಹೋಗಿದ್ದ.

"ನಿನ್ನ ಗಂಡ ಮಲಗಿಬಿಟ್ಟಿದ್ದಾನೆ. ನಾವೂ ರೆಸ್ಟ್ ತೆಗೆದುಕೊಳ್ಳೋಣ" ಎಂದು ಹೇಳಿ ಇಬ್ಬರೂ ಮಲಗಿದರು. ಇದು ಶಶಾಂಕನ ರೂಮು. ಅವನು ಈ ಮಂಚದ ಮೇಲೆ ಮಲಗಿ, ರೇಣುಕಾಳ ಬಗ್ಗೆ ಕನಸು ಕಂಡಿರಬಹುದು ಅಂತ ಅನ್ನಿಸಿದಾಗ ಅವಳ ಮನಸ್ಸು ಮುದುಡಿತು. ಸಣ್ಣಗೆ ಬಿಕ್ಕಿದಳು. ವಾಣಿ ಇತ್ತ ತಿರುಗಿದಳು.

"ಯಾಕೆ ಸೀಮಾ ಈಗ ಅಳ್ತಿದೀಯ...? ಅಮ್ಮ, ತಂಗಿ, ಈಗ ನೆನಪಿಗೆ ಬಂದ್ರಾ?"

"ಇಲ್ಲ, ನನಗೆ ಗೌತಮನ್ನ ಮರೆಯೋಕೆ ಆಗೋಲ್ಲ. ಶಶಾಂಕ, ರೇಣುಕಾನ್ನ ಮರೆಯೋಕೆ ಆಗೋಲ್ಲ... ಮುಂದೆ ಏನಾಗುತ್ತೋ ಅಂತ ಭಯ ಆಗುತ್ತೆ.... ಯಾಕೆ ಹೀಗೆಲ್ಲಾ ಆಯ್ತು?"

"ಇವತ್ನಿಂದ್ಲೇ ಆ ಯೋಚ್ನೆ ಮಾಡ್ಬೇಡ... ಹೇಗೂ ಶಶಾಂಕ ಕೆಲಸ ಹುಡುಕ್ತಿದಾನೆ. ಬೇರೆ ಯಾವ್ದಾದ್ರೂ ಊರ್ನಲ್ಲಿ ಕೆಲಸವನ್ನು ಹುಡುಕಿಕೊಳ್ಳಲಿ... ಹೊಸ ಊರ್ನಲ್ಲಿ ಹೊಸ ಬಾಳನ್ನು ಪ್ರಾರಂಭಿಸಿ... ಎಲ್ಲಾ ಹೊಸ ಹೊಸದಾಗಿರುತ್ತೆ..." ಎಂದು ಸಲಹೆಯನ್ನಿತ್ತಳು.

******

ರಾತ್ರಿಯ ಊಟವಾಗಿತ್ತು. ಎಲ್ಲರೂ ಮಲಗುವ ಸನ್ನಾಹದಲ್ಲಿದ್ದಾಗ, ರುಕ್ಮಿಣಿ ಸೀಮಾಳನ್ನು ಕರೆದಳು. ಅವಳೊಂದಿಗೆ ವಾಣಿಯೂ ಇದ್ದಳು. "ವಾಣೀ, ನೀವು ಇನ್ನೊಂದು ರೂಮಿನಲ್ಲಿ ಮಲಕ್ಕೊಳ್ಳಿ... ಸೀಮಾ, ಈ ಲೋಟಗಳಲ್ಲಿ ಸಕ್ಕರೆ ಹಾಕಿದ ಬಾದಾಮಿ ಕೇಸರಿ ಬೆರೆಸಿರುವ ಹಾಲಿದೆ. ಇದನ್ನು ಶಶಾಂಕನಿಗೂ ಕೊಟ್ಟು ನೀನೂ ಕುಡಿ... ಈ ರಾತ್ರಿ ನಿಮ್ಮಿಬ್ಬರಿಗೂ ಹರ್ಷದಾಯಕವಾಗಿರಲಿ" ಎಂದು ಹಾರೈಸಿದಳು.

ಸೀಮಾ ವಾಣಿಯ ಮುಖವನ್ನು ನೋಡಿದಳು. "ಆಂಟೀ... ಮದುವೆ ಇನ್ನೂ ಒಂದು ವಾರದ ನಂತರ... ಇವತ್ತೇ ಇದೆಲ್ಲಾ ಏನು?" ವಾಣಿ ಕೇಳಿದಳು.

"ಇವತ್ತು ನಡೆದದ್ದು ಮದುವೇನೇ ಕಣಮ್ಮಾ... ಮುಂದಿನ ವಾರ ನಡೆಯೋದು ಬರೀ ಆರತಕ್ಷತೆ ಅಷ್ಟೇ..... ಬೆಳಿಗ್ಗೆ ಶುಭ ಘಳಿಗೆ, ರಾತ್ರಿ ಶುಭರಾತ್ರಿಯಾಗಲಿ... ಒಂದೇ ಮನೆಯಲ್ಲಿದ್ದು ನವದಂಪತಿಗಳು ಬೇರೆ ಬೇರೆ ಮಲಗಿದರೆ ಏನು ಚೆನ್ನಾ? ನಾನು ಎಲ್ಲವನ್ನೂ ಯೋಚಿಸಿಯೇ ಹೇಳ್ತಿದೀನಿ..."

"ಶಶಾಂಕನ್ನ ಕೇಳಿದೀರಾ ಆಂಟಿ?"

"ಅವನು ನನ್ನ ಮಗ. ನನ್ನ ಮಾತಿಗೆ ಎದುರಾಡೋಲ್ಲ... ಇವಳನ್ನು ಮದುವೆಯಾಗಲು ನಾನೂ ಒಪ್ಪಿಗೆ ಕೊಟ್ಟಿದ್ದೀನಿ... ಅಂದಮೇಲೆ ಎಲ್ಲದಕ್ಕೂ ಒಪ್ಪಿಗೆಯೇ... ಶಶಾಂಕ ಹಿಂದಿನದೆಲ್ಲವನ್ನೂ ಮರೆಯುವಂತೆ ನೀನು ಅವನಿಗೆ ಪ್ರೀತಿಯನ್ನು ತೋರಿಸಬೇಕು. ಅವನಿಗೆ ಸಹಕರಿಸಬೇಕು... ಆಗಲೇ ನಿಮ್ಮಿಬ್ಬರ ಜೀವನ ಹಾಲು ಜೇನು ಆಗುವುದು. ನೀನು ಇದೇ ರೂಮಿನಲ್ಲಿರು. ನಾನು ಅವನನ್ನು ಕಳಿಸ್ತೀನಿ" ಎಂದು ಹೇಳಿ ಹೊರಗೆ ನಡೆದಳು.

"ವಾಣೀ... ಇದೆಲ್ಲಾ ಏನು? ನನ್ನ ಕೈ ಕಾಲು ನಡುಗ್ತಿದೆ... ನಾನು ಶಶಾಂಕನನ್ನು ಹೇಗೆ ಪ್ರೀತಿಸಲಿ? ಅವನಿಗೆ ಎಲ್ಲಾ ವಿಷಯವೂ ತಿಳಿದಿದೆಯಲ್ಲ...."

"ಈಗ ನಿನ್ನ ಅತ್ತೆ ಹೇಳಿದ ಹಾಗೆ ಕೇಳಿಬಿಡು... ರೂಮಿನ ಒಳಗೆ ಶಶಾಂಕನ ಜೊತೆ ಮಾತನಾಡು. ಅವನಿಗೆ ನಿನ್ನ ಬಗ್ಗೆ ಗೊತ್ತಿರುವುದರಿಂದ ನಿನಗೆ ಏನೂ ತೊಂದರೆ ಮಾಡಲ್ಲ. ಧೈರ್ಯವಾಗಿರು" ಎಂದು ತಿಳುವಳಿಕೆಯನ್ನು ಹೇಳಿದಳು. ಸೀಮಾ ಅಲ್ಲಿಎ ಉಳಿದಳು.

ರೂಮಿನ ಒಳಗೆ ಬಂದ ಶಶಾಂಕ, ಮೆಲ್ಲನೆ ಬಾಗಿಲನ್ನು ಭದ್ರಪಡಿಸಿದ. ಸೀಮಾ ಬೆವೆತಳು. ಕುಳಿತಿದ್ದವಳು ಎದ್ದು ನಿಂತಳು. "ಸೀಮಾ ನೀವೇನೂ ಹೆದರ್ಬೇಡಿ... ಅಮ್ಮನ ಮಾತನ್ನು ಮೀರಲಾರದೇ ಇಲ್ಲಿಗೆ ಬಂದಿದೀನಿ. ಇಲ್ಲಿನ ವಿಷಯ ಕೇವಲ ನಮ್ಮ ಪರ್ಸನಲ್... ಇದರ ಬಗ್ಗೆ ಅಮ್ಮನಿಗೆ ಗೊತ್ತಾಗಬಾರದು."

"ಇದೆಲ್ಲಾ ಏನು ಶಶಾಂಕ್... ಮದುವೆಗೆ ಇನ್ನೂ ಒಂದು ವಾರ ಇದೆ ಎನ್ನುವಾಗ ಬಲವಂತವಾಗಿ ಕರೆತಂದು, ಮದುವೆಯಾಗಿ, ಈಗ ಈ ಕಾರ್ಯಕ್ರಮ. ನನಗೆ ಇದೆಲ್ಲಾ ಬೇಕಾಗಿಲ್ಲ."

"ನನಗೆ ಗೊತ್ತು. ಆದರೆ ಇದನ್ನೆಲ್ಲ ಅಮ್ಮನಿಗೆ ಹೇಳೋಕಾಗುತ್ತಾ...? ಹಾಲು ತಣ್ಣಗಾಗಿ ಹೋಗುತ್ತೆ. ಕುಡಿದು ಬಿಡಿ." ಎಂದು ಹೇಳಿ ಅವಳ ಕೈಗೆ ಒಂದು ಲೋಟವನ್ನು ಕೊಟ್ಟ, ತಾನು ಇನ್ನೊಂದು ಲೋಟದ ಹಾಲನ್ನು ಕುಡಿದ. ಓ...ಕೇ...ಈಗ ಇಲ್ಲಿ ಇರೋದು ಒಂದೇ ಮಂಚ. ನೀವು ಇಲ್ಲಿ ಮಲಗಿ. ನಾನು ಅಲ್ಲಿ ಕುರ್ಚಿಯ ಮೇಲೆ ರೆಸ್ಟ್ ತಗೋತೀನಿ." ಎಂದು ಹೇಳಿ ಕುರ್ಚಿಯ ಮೇಲೆ ಕುಳಿತ. ಅವಳು ಬೇಡ ಅನ್ನಲಿಲ್ಲ. ಗೋಡೆಯ ಕಡೆಗೆ ಮುಖ ಮಾಡಿ ಮಲಗಿದಳು.

"ಪ್ಲೀಸ್, ದೀಪವನ್ನು ಆರಿಸಬೇಡಿ. ನಂಗೆ ಭಯ ಆಗುತ್ತೆ" ಎಂದಳು.

"ಓ.ಕೇ. ಗುಡ್‌ನೈಟ್" ಎಂದು ಹೇಳಿ, ಕುರ್ಚಿಯ ಬೆನ್ನಿಗೆ ಒರಗಿ ಕಣ್ಣುಗಳನ್ನು ಮುಚ್ಚಿಕೊಂಡು ಕೈ ಕಟ್ಟಿದ. ಅವಳಿಗೆ ಎಷ್ಟೋ ಹೊತ್ತಿನವರೆಗೆ ನಿದ್ದೆ ಬಂದಿರಲೇ ಇಲ್ಲ. ಆಗಾಗ್ಗೆ ಕುಳಿತಿದ್ದವನ ಕಡೆ ನೋಡುತ್ತಿದ್ದಳು. ಹೊರಳಾಡುತ್ತಲೇ ಇದ್ದಳು. ಬೆಳಗಿನ ಜಾವದ ಹೊತ್ತಿಗೆ ಸ್ವಲ್ಪ ನಿದ್ದೆ ಹತ್ತಿತು.

ಬೆಳಿಗ್ಗೆ ಅವಳಿಗೆ ಎಚ್ಚರವಾದಾಗ, ತಕ್ಷಣಕ್ಕೆ ತಾನು ಎಲ್ಲಿದ್ದೇನೆಂಬ ಅರಿವು ಆಗಲಿಲ್ಲ. ನಿಧಾನವಾಗಿ ಇತ್ತಲಾಗೆ ತಿರುಗಿದಳು. ಅಲ್ಲಿ ಶಶಾಂಕ್ ಇರಲಿಲ್ಲ. ಬಾಗಿಲನ್ನು ಮರೆ ಮಾಡಿಕೊಂಡು ಹೊರಗೆ ಹೋಗಿದ್ದ. ಅವನ ಬಗ್ಗೆ ಮಧುರ ಭಾವನೆ ಮೂಡಿತು. ತಾನು ಏಳಬೇಕೋ ಬೇಡವೋ, ಎದ್ದರೂ ಮಾಡುವುದೇನಿದೆ ಅಂತಂದುಕೊಂಡು ಹಾಗೆಯೇ ಮಲಗಿದ್ದಳು. ಶಶಾಂಕ್ ಬಾಗಿಲನ್ನು ಸರಿಸಿ ಒಳಬಂದ. "ಗುಡ್ ಮಾರ್ನಿಂಗ್ ಸೀಮಾ....ರಾತ್ರಿ ಚೆನ್ನಾಗಿ ನಿದ್ದೆ ಬಂತಾ? ಸೊಳ್ಳೆ ಕಚ್ಚಲಿಲ್ಲವಲ್ಲ" ಎಂದು ತಮಾಷೆ ಮಾಡಿದ.

"ಸೊಳ್ಳೆ ಕಚ್ಚಲಿಲ್ಲ, ಆದರೂ ನಿದ್ದೆ ಬರಲಿಲ್ಲ. ನನ್ನಿಂದ ನಿಮಗೂ ತೊಂದರೆ ಆಯ್ತು. ಸಾರೀ" ಎಂದಳು.

"ಓ.. ಕಮಾನ್, ಸಾರೀ ಎಲ್ಲಾ ಯಾಕೆ? ನಿಮಗೋಸ್ಕರ ತಾನೇ ನಾನು ತೊಂದರೆ ತಗೊಂಡಿದ್ದು... ಮದುವೆಗೆ ಹೇಗೂ ಒಂದು ವಾರ ಸಮಯ ಇದೆಯಲ್ಲ... ಎಲ್ಲಾದ್ರೂ ಹೋಗಿ ಬರೋಣ್ವಾ... ಏನನ್ನಿಸುತ್ತೆ?"

"ಹನಿಮೂನ್ ಹೋಗಿ ಅಂತ ನಿಮ್ಮ ತಾಯಿ ಹೇಳಿದ್ರಾ?"

"ಹನಿಮೂನ್ ಅಂತ ಅಲ್ಲ. ಮನೇಲೇ ಕೂತು ಕಾಲ ಕಳೆಯುವ ಬದಲು ತಿರುಗಾಡಿಕೊಂಡು ಬರೋಣ, ನಿಮಗೂ ಚೇಂಜ್ ಇರುತ್ತೆ ಅಂತ."

"ಓ.ಕೇ ನಂಗೂ ಇಲ್ಲಿ ಸಮಯ ಕಳೆಯೋದು ಕಷ್ಟ ಆಗುತ್ತೆ...."

"ಸರಿ, ಹಾಗಾದ್ರೆ ಎದ್ದು ಸ್ನಾನ, ತಿಂಡಿ, ಕಾಫಿ ಇತ್ಯಾದಿ ಮುಗಿಸಿ. ವಾಣಿ ಎದ್ದಿದ್ದಾರೆ. ನಾನು ಅರೇಂಜ್ ಮಾಡ್ತೀನಿ" ಅಂತಂದ. ಇಬ್ಬರೂ ಹೊರಬಂದರು. ವಾಣಿ, ಇವಳ ಕಡೆ ನೋಡಿ, ಕಣ್ಣು ಹೊಡೆದು.....ಏನೆಂದು ವಿಚಾರಿಸಿದಳು.

"ಸ್ನಾನ ಮಾಡ್ಕೊಂಡು ಬಂದ್ಬಿಡು...." ಎಂದು ಹೇಳಿ ರುಕ್ಮಿಣಿ, ಸೀಮಾಳನ್ನು ಬಚ್ಚಲು ಮನೆಗೆ ಕಳಿಸಿದಳು.

"ಏನು ತಿಂಡಿ ಮಾಡಲೋ... ನಿನ್ನ ಹೆಂಡ್ತಿಗೆ ಏನು ಇಷ್ಟ?" ಕೇಳಿದಳು.

"ನಂಗದೆಲ್ಲಾ ಗೊತ್ತಾಗೋಲ್ಲ. ಅಷ್ಟ ಕ್ಕೂ ಅದೆಲ್ಲಾ ಯಾಕೆ? ನೀನು ಏನು ಮಾಡ್ತೀಯೋ ಮಾಡು. ಅದನ್ನೇ ಎಲ್ರೂ ತಿಂತೀವಿ... ಅಲ್ವಾ ವಾಣೀ.." ಅವಳ ಕಡೆ ನೋಡಿ ಕೇಳಿದ. ವಾಣೀ ಮುಗುಳ್ನಕ್ಕು ಹೌದು ಎನ್ನುವಂತೆ ತಲೆಯಾಡಿಸಿದಳು. ರುಕ್ಮಿಣಿ ಅಡಿಗೆ ಮನೆಯ ಕಡೆಗೆ ತೆರಳಿದ್ದಾಗ ವಾಣಿಯೊಡನೆ, ಶಶಾಂಕ ಮಾತನಾಡಿ, ಒಂದು ವಾರ ತಾನು ಸೀಮಾ ಹೊರಗೆ ಹೋಗಿ ಬರುವ ವಿಷಯವನ್ನು ತಿಳಿಸಿದ.

ವಾಣಿ ಕಣ್ಣರಳಿಸಿದಳು. ಯೋಚಿಸಿ ಹೇಳಿದಳು, "ಮದುವೆಗೆ ಇನ್ನೂ ಒಂದು ವಾರ ಮಾತ್ರ ಇದೆ. ಸೀಮಾಳ ಆರೋಗ್ಯ ಈಗ ಸುಧಾರಿಸಿದೆ....ಹೆಚ್ಚು ಪ್ರಯಾಣ ಮಾಡುವುದು ಬೇಡ. ಹತ್ತಿರದ ಯಾವುದಾದರೂ ಸ್ಥಳಕ್ಕೆ ಹೋಗಿ ಬನ್ನಿ. ಅವಳಿಗೆ

ರೆಸ್ಟಿನ ಅಗತ್ಯವಿದೆ. ಮದುವೆಯ ಹೊತ್ತಿಗೆ ಅವಳ ಆರೋಗ್ಯ ಕೆಡಬಾರದು ಅಲ್ವಾ....?"

"ಅದಕ್ಕೇ ಕರ್ರೊಂಡು ಹೋಗ್ತಿದೀನಿ. ಇಲ್ಲಿ ಅವಳಿಗೆ ಹೊತ್ತು ಹೋಗುವುದಿಲ್ಲ. ಸುಮ್ಮನೇ ಕುಳಿತು ಹಳೆಯದನ್ನು ಚಿಂತೆ ಮಾಡಿದರೆ ಏನು ಉಪಯೋಗ?"

"ರಾತ್ರಿ ಗೌತಮನ ಬಗ್ಗೆ ಏನಾದ್ರೂ ಮಾತಾಡಿ ಬೇಜಾರು ಮಾಡಿದ್ಲಾ?"

"ಇಲ್ಲ. ನಮ್ಮ ನಮ್ಮ ಪಾಡಿಗೆ ನಾವು ನಿದ್ದೆ ಮಾಡಿದೆವು" ಎಂದು ಹೇಳಿ ಕಿರುನಗೆಯನ್ನು ನಕ್ಕ.

"ತಿಂಡಿ, ಕಾಫಿ ಆದ ಮೇಲೆ, ನಾನು ನಮ್ಮ ಮನೆಗೆ ಹೋಗ್ತೀನಿ ಶಶಾಂಕ್... ನೀವು ಸೀಮನ್ನ ಚೆನ್ನಾಗಿ ನೋಡ್ಕೋತೀರಿ ಅನ್ನುವ ನಂಬಿಕೆ ನನಗಿದೆ. ಅವಳಿಗೆ ಈಗ ತಾಯಿ ಮನೆಯ ಸಪೋರ್ಟ್ ಸಹ ಇಲ್ಲ... ಹನಿಮೂನ್‌ನಿಂದ ಬಂದ ಮೇಲೆ ನಾನು ಬಂದು ಮೀಟ್ ಮಾಡ್ತೀನಿ" ಎಂದಳು.

"ಥ್ಯಾಂಕ್ಸ್ ವಾಣಿಯವರೇ...ಸೀಮಾ ಬಗ್ಗೆ ನಿಮಗೆ ಬಹಳ ಮುತುವರ್ಜಿ ಇದೆ... ಗೌತಮನ ಬಗ್ಗೆ ಏನಾದ್ರೂ ವಿಷಯ ತಿಳಿದ್ರೆ ನನಗೆ ಫೋನು ಮಾಡಿ. ಸೀಮಾಳಿಗೆ ತಿಳಿಸಲೇ ಬೇಡಿ"

"ನಾನು, ನನ್ನ ತಮ್ಮ ತೆಗೆದಿರುವ ಫೋಟೋಗಳನ್ನೆಲ್ಲ ಡೆವಲಪ್ ಮಾಡಿಸಿ, ಇಲ್ಲಿಗೆ ತಲುಪಿಸ್ತೀನಿ... ಅದು ತುಂಬಾ ಮುಖ್ಯವಾದ ಸಾಕ್ಷಿ... ಅದನ್ನು ಜೋಪಾನವಾಗಿಟ್ಟುಕೊಳ್ಳಿ."

"ಎಸ್ಸೆಸ್... ಅದು ಬೇಕೇ ಬೇಕು... ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು" ಎಂದ. ಅಷ್ಟರಲ್ಲಿ ಸೀಮಾ ಸ್ನಾನವನ್ನು ಮುಗಿಸಿ ಬಂದಿದ್ದಳು... ಶಶಾಂಕ್ ಅವಳನ್ನೇ ಓರೆಗಣ್ಣಿನಿಂದ ನೋಡಿದ. ಈ ಹೆಣ್ಣು, ರಾತ್ರಿ ನನ್ನ ಕಣ್ಣೆದುರಿಗೇ ಮಲಗಿದ್ದರೂ, ತಾನು ಮುಟ್ಟುವಂತಿರಲಿಲ್ಲ.... ಒಂದು ವೇಳೆ ರೇಣುಕಾ ತನ್ನ ಪತ್ನಿಯಾಗಿ ಬಂದಿದ್ದರೇ... ಮೊದಲ ರಾತ್ರಿಯ ಮಜವೇ ಬೇರೆ ಇರುತ್ತಿತ್ತು... ಅದಕ್ಕೆ ಕಲ್ಲು ಹಾಕಿದವನು ಗೌತಮನೇ... ಆ ಗೌತಮನ ಪ್ರಿಯತಮೆ ಈ ಸೀಮಾ... ಈ ಸಂಬಂಧ ಒಂದು ಥರ ವಿಚಿತ್ರ... ಈ ಹೆಣ್ಣನ್ನು ಮದುವೆಯಾಗಿದ್ದಾಗಿದೆ ... ಪ್ರೀತಿಯಿಂದ ಇವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕು... ಅಲ್ಲಿಯವರೆಗೂ ತಾನು ಸಂಯಮ, ಸಹನೆಯಿಂದ ವರ್ತಿಸಬೇಕು ಎಂದುಕೊಂಡ.

"ಏನೋ... ಏನು ಚಿಂತೆ ಮಾಡ್ತಿದೀಯೋ... ಒಂದು ರಾತ್ರಿಗೇ ಜವಾಬ್ದಾರಿ ಹೆಚ್ಚಾಯ್ತಾ? ತಿಂಡಿ ತಗೋ... ಎಲ್ಲಾದ್ರೂ ಸುತ್ತಾಡಿ ಬನ್ನಿ" ತಾಯಿ ಹೇಳಿದಾಗ, ಸುಮ್ಮನೇ ದಿಟ್ಟಿಸಿದ. ಆಕೆ ತಂದಿಟ್ಟ ತಿಂಡಿಯನ್ನು ಎಲ್ಲರೂ ಸವಿದರು. ಕಾಫಿಯನ್ನು ಕುಡಿದು ಎದ್ದರು. ತಂದೆ ಸುತ್ತಾಡಿ ಬರುತ್ತೇನೆಂದು ಹೊರಟಾಗ ರುಕ್ಮಿಣಿ ತಡೆದಳು.

"ಮನೇಲಿ ನಾನೊಬ್ಬೇ ಆಗಿ ಬಿಡ್ತೀನಿ. ತುಂಬಾ ಮಾತನಾಡೋದು ಇದೆ. ನೀವು ಎಲ್ಲಿಯೂ ಹೋಗ್ಬೇಡಿ... ವಾಣಿ ಅವರ ಮನೆಗೆ ಹೋಗ್ಬೇಕು... ಶಶಾಂಕ-ಸೀಮಾ... ಹೊರಗೆ ಹೋಗಿ ಬರ್ತಾರೆ..." ಎಂದಳು. ಆತ ಪೇಪರ್ರನ್ನು ಹಿಡಿದು ಕುಳಿತರು.

*****

ವಾಣಿಯನ್ನು ಅವಳ ಮನೆಯ ಹತ್ತಿರ ಇಳಿಸಿ, ಕಾರು ಮುಂದಕ್ಕೆ ಓಡಿತು. ಪಕ್ಕದಲ್ಲಿ ಕುಳಿತಿದ್ದ ಸೀಮಾಳ ಕಡೆ ಆಗಾಗ್ಗೆ ನೋಡಿದ. ಅದು ಅವಳ ಗಮನಕ್ಕೆ ಬಂತು.

"ರಸ್ತೇನ ನೋಡ್ಕೊಂಡು ಕಾರನ್ನು ಓಡಿಸಿ ಶಶಾಂಕ್...." ಎಚ್ಚರಿಸಿದಳು.

"ಒಂದು ರಾತ್ರೀಲೇ ನಿಮಗೆ ಎಂಥಾ ಕಳೆ ಬಂದು ಬಿಟ್ಟಿದೆ ಅಂತ ಯೋಚಿಸ್ತಿದ್ದೆ.... ರಾತ್ರಿ ನಮ್ಮಿಬ್ಬರಿಗೂ ನಿದ್ದೆ ಇರ್ಲಿಲ್ಲ... ಆದರೂ...."

"ನಿಮಗೆ ಬೇಸರ ಆಯ್ತಾ ಶಶಾಂಕ್.... ಆದರೆ ಆ ಬಗ್ಗೆ ಮೊದಲೇ ತೀರ್ಮಾನ ತಗೊಂಡಿದ್ದೆವು ಅಲ್ವಾ?"

"ಹೌದು ಆದರೂ ಒಂದು ಪುಟ್ಟ ಆಸೆ ಮನದಲ್ಲಿತ್ತು. ನೀವು ಮಂಚಕ್ಕೆ ನನ್ನನ್ನು ಕರೀತೀರೇನೋ ಅಂತ.... ಕಡೇ ಪಕ್ಷ ಒಳ್ಳೆಯ ನಿದ್ದೆಯನ್ನಾದರೂ ಮಾಡ್ತಿದ್ದೆ" ಅವನು ಮುಕ್ತವಾಗಿ ನಕ್ಕಾಗ ಅವಳೂ ನಕ್ಕಳು.

"ಓ.ಕೇ...ಇವತ್ತು ರಾತ್ರಿ ನೀವು ನಿಮ್ಮ ಮಂಚದ ಮೇಲೆ ಮಲಗಿ ಗಡದ್ದಾಗಿ ನಿದ್ದೆ ಮಾಡಬಹುದು. ನಾನು ಡಿಸ್ಟರ್ಬ್ ಮಾಡುವುದಿಲ್ಲ"

"ಇವತ್ತು ರಾತ್ರಿ ನಾವು ಯಾವುದಾದರೂ ಒಂದು ಹೋಟೆಲ್ಲಿಗೆ ಹೊರಟು ಹೋಗೋಣ... ಅಲ್ಲಿ ರೂಮು ದೊಡ್ಡದಾಗಿರುತ್ತೆ. ಮಂಚವೂ ದೊಡ್ಡದಾಗಿರುತ್ತೆ.... ಬೇರೆ ಬೇರೆ ದೂರ ದೂರವಾಗಿ ಮಲಗೋಣ... ಹಾಯಾಗಿ ನಿದ್ದೆ ಮಾಡ ಬಹುದು..." ಮತ್ತೆ ನಕ್ಕ.

"ಅದರ ಬದಲು ನಮ್ಮ ತಂದೆಯ ಮನೆಗೆ ಹೋಗಬಹುದು. ಅಲ್ಲಿ ನನ್ನ ರೂಮು ದೊಡ್ಡದಾಗಿದೆ. ಎರಡು ಮಂಚಗಳಿವೆ."

"ಹಾಗೇ ಮಾಡಬಹುದಾಗಿತ್ತು. ಆದರೆ ನಿಮ್ಮ ತಾಯಿ ನಮ್ಮಿಬ್ಬರನ್ನು ಕರೆಯಲೇ ಇಲ್ಲವಲ್ಲ. ನಾವಾಗಿಯೇ ಹೇಗೆ ಹೋಗೋದು? ನಮ್ಮ ಅಕ್ಕನ ಊರಿಗೆ ಹೋಗೋಣ....ಅಂತಂದ್ರೆ ಅದೂ ಸಾಧ್ಯವಿಲ್ಲ.....ಸಧ್ಯಕ್ಕೆ ನಾನು ಎಲ್ಲಿಗೂ ಹೋಗುವಂತಿಲ್ಲ...."

ಯಾಕೆ ಎಂದು ಅವಳು ಕೇಳಲಿಲ್ಲ. ಗೌತಮನ ಸುದ್ದಿಯನ್ನು ಎತ್ತಲು ಅವಳು ಹಿಂಜರಿದಳು. ಅವನೂ ಹೇಳಲಿಲ್ಲ.... ಕೇಸಿನ ವಿಷಯವನ್ನು ಹೇಳಲು

ಅವನಿಗೂ ಇಷ್ಟವಿರಲಿಲ್ಲ.

*　　*　　*

ಸೀಮಾ ಶಶಾಂಕ, ಹೋಟೆಲ್ಲಿನ ರೂಮಿನಲ್ಲಿದ್ದುಕೊಂಡು, ಹತ್ತಿರದ ಸಣ್ಣ ಪುಟ್ಟ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗಿ ಬರುತ್ತಿದ್ದರು. ಪೋಲೀಸರಿಂದ ಗೌತಮನನ್ನು ಕರೆತಂದು, ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಇಟ್ಟಿರುವ ವಿಷಯ ತಿಳಿಯಿತು. ಹೇಳಲೋ ಬೇಡವೋ ಅಂತ ಅಂದುಕೊಂಡರೂ, ಸೀಮಾಳಿಗೆ ವಿಷಯವನ್ನು ತಿಳಿಸಿದ... ಅವಳ ಪ್ರತಿಕ್ರಿಯೆಯನ್ನು ನಿರೀಕ್ಷಿಸಿದ.

"ಹೇಗಿದಾನಂತೆ.....? ಏನಾಗಿತ್ತಂತೆ? ತಡೆ ತಡೆದು ಕೇಳಿದಳು.

"ನ್ಯುಮೋನಿಯಾ ಆಗಿತ್ತಂತೆ... ಈಗ ರಿಕವರ್ ಆಗ್ತಿದಾನೆ. ನಿಮಗೆ ಅವನನ್ನು ನೋಡ್ಬೇಕು ಅಂತ ಆಸೆ ಇದ್ದರೆ ಹೇಳಿ, ಸ್ಪೆಷಲ್ ಪರ್ಮಿಷನ್ ತಗೊಂಡು ಹೋಗಬಹುದು. ನನ್ನನ್ನು ಬಿಡಲ್ಲ. ನಿಮ್ಮನ್ನು ಬಿಡಬಹುದು..." ಶುಷ್ಕ ನಗೆಯನ್ನು ನಕ್ಕ...

"ನಾನೊಬ್ಬಳೇ ಹೇಗೆ ಹೋಗಲಿ? ನಂಗೆ ಭಯ ಆಗುತ್ತೆ. ಈಗ ನಮ್ಮಿಬ್ಬರ ಮದುವೆ ಬೇರೆ ನಡೆದಿದೆ. ಅವನು ಅಪ್ಸೆಟ್ ಆಗ್ತಾನೆ, ಬೈದೇ ಇರ್ತಾನಾ....?"

"ಹ್ಞೂಂ ನಮ್ಮ ಮದುವೆ ವಿಷಯ ಅವನ ಮನೆಯವರಿಂದ ತಿಳೀದೇ ತಿಳಿಯುತ್ತೆ. ಅಂದ್ಹಾಗೆ ನಮ್ಮ ಮದುವೆ ದಿನಾಂಕವನ್ನು ಕ್ಯಾನ್ಸಲ್ ಮಾಡಿದಾರಂತೆ."

"ಹೌದಾ? ಯಾರು ಹೇಳಿದ್ರು? ವಾಣಿಗೆ ಈ ವಿಷಯ ಗೊತ್ತಾ?"

"ಗೌತಮನ ಮನೆಯವರು, ಸೀಮಾಳನ್ನು ಬಲವಂತವಾಗಿ ಮದುವೆ ಮಾಡಿಕೊಳ್ಳುತ್ತಿದ್ದಾರೆ ಅಂತ ಕಂಪ್ಲೇಂಟ್ ಕೊಟ್ಟಿದ್ದಾರಂತೆ... ನಿಮ್ಮ ತಂದೆಯ ಮೇಲೆ... ಅದಕ್ಕೆ ಅವರು ಕ್ಯಾನ್ಸಲ್ ಮಾಡಿಸಿಬಿಟ್ಟಿದ್ದಾರಂತೆ."

"ಮತ್ತೆ? ಮುಂದೆ?"

"ಏನೂ ಇಲ್ಲ. ಹೆದರ್ಬೇಡಿ. ನಿಮಗೆ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು ಇದೆ. ಮೆಜಾರಿಟಿಗೆ ಬಂದಿದೀರಿ...ನೀವು ಸ್ವ ಇಚ್ಛೆಯಿಂದ ನನ್ನನ್ನು ಮದುವೆಯಾಗಿದ್ದರೆ..." ಎಂದು ಹೇಳಿ ಅವಳ ಕಡೆ ಓರೆ ನೋಟವನ್ನು ಬೀರಿದ.

"ಈಗ ಹೀಗೆ ಕೇಳ್ತಿದೀರಲ್ಲ ಶಶಾಂಕ್...ಪರಿಸ್ಥಿತಿ ಹಾಗೆ ಒದಗಿ ಬಂತಲ್ಲ...."

"ನೀವು ಹಾಗೆ ಹೇಳಿದರೆ, ನಮ್ಮ ಮದುವೆಗೆ ಯಾವ ಬೆಲೆಯೂ ಇರುವುದಿಲ್ಲ....ಹೇಗೂ ಮದುವೆಯ ದಿನಾಂಕ ಕ್ಯಾನ್ಸಲ್ ಆಗಿದೆ....ನಿಮ್ಮ ಮನಸ್ನಲ್ಲಿ ಏನಿದೆ ಈಗಲೇ ಹೇಳಿಬಿಡಿ...."

"ತಮಾಷೆಯಾಗಿ ಕೇಳ್ತಿದೀರೋ, ವ್ಯಂಗ್ಯವಾಗಿ ಕೇಳ್ತಿದೀರೋ....ನನ್ನನ್ನು ಈ ಪರಿಸ್ಥಿತಿಗೆ ತಂದಿಟ್ಟವರು, ನೀವು ಹಾಗೂ ಗೌತಮ್....ಈಗ ನನ್ನನ್ನು ಕೇಳಿದರೆ.....?"

"ನಿಮ್ಮ ಇಷ್ಟವನ್ನು ಕೇಳಿದೆ. ಇದು ಸೀರಿಯಸ್ ವಿಷಯ. ನನ್ನ ನಿಮ್ಮ ಮದುವೆಯಾಗಿರುವ ವಿಷಯ ಕೆಲವೇ ಜನರಿಗೆ ಮಾತ್ರ ತಿಳಿದಿದೆ. ಅಲ್ಲದೆ ನನ್ನ ನಿಮ್ಮ ಮಧ್ಯೆ ಯಾವ ದೇಹ ಸಂಬಂಧವೂ ಬೆಳೆದಿಲ್ಲ... ಈಗಲೂ ಇದು ಸರಿ ಇಲ್ಲ ಅಂತ ಅನ್ನಿಸಿದರೆ.... ನಿಮಗೆ ಬಿಡುಗಡೆ ಇದೆ...ನನ್ನ ಕಡೆಯಿಂದ ನಿಮಗೆ ಯಾವ ತೊಂದರೆಯೂ ಆಗುವುದಿಲ್ಲ.... ಸಮಸ್ಯೆಯೂ ಉಂಟಾಗುವುದಿಲ್ಲ...ಇದು ಸತ್ಯ. ನಾನು ಭರವಸೆಯನ್ನು ಕೊಡ್ತೀನಿ."

"ನನಗೆ ಯೋಚಿಸುವುದಕ್ಕೆ ಸ್ವಲ್ಪ ಸಮಯವನ್ನು ಕೊಡಿ....ಶಶಾಂಕ್."

ಶಶಾಂಕ್ ಅವಳನ್ನು ಸಂಶಯದ ದೃಷ್ಟಿಯಿಂದ ನೋಡಿ, "ಓ.ಕೇ..." ಎಂದ.

"ನಾನು ವಾಣಿ ಹತ್ತಿರ ಮಾತಾಡ್ಬೇಕು...ನಿಮ್ಮ ಮೊಬೈಲ್ ಫೋನನ್ನು ಕೊಟ್ಟಿರಿ." ಎಂದು ಕೇಳಿ ಪಡೆದಳು. ಅವಳಿಗೆ ಮಾತನಾಡಲು ಬಿಟ್ಟು, ಶಶಾಂಕ ಹೊರಗೆ ತಿರುಗಾಡಲು ನಡೆದ. "ವಾಣೀ....ನಾನು ಸೀಮಾ....ಗೌತಮನ್ನ ಈ ಊರಿಗೆ ಕರ್ಕೊಂಡು ಬಂದು ಗವರ್ನ್‌ಮೆಂಟ್ ಹಾಸ್ಪಿಟಲ್‌ನಲ್ಲಿ ಟ್ರೀಟ್‌ಮೆಂಟ್ ಕೊಡಿಸ್ತಿದಾರಂತೆ. ನೀವು ನಿಜ ಏನು ಅಂತ ತಿಳ್ಕೊಳ್ಳೋಕ್ಕಾಗುತ್ತಾ?"

"ನನಗೆ ವಿಷಯ ಗೊತ್ತಿಲ್ಲ. ನಿನಗೆ ಹೇಗೆ ತಿಳೀತು?"

"ಶಶಾಂಕ್ ಹೇಳಿದ್ರು, ಪೋಲೀಸ್ ಇನ್ಸ್‌ಪೆಕ್ಟರ್‌ನಿಂದ ತಿಳೀತಂತೆ."

"ಹಾಗಿದ್ರೆ ನಿಜಾನೇ ಇರಬಹುದು. ಶಶಾಂಕ್ ಯಾಕೆ ಸುಳ್ಳು ಹೇಳ್ತಾರೆ....ಪದೇ ಪದೇ ಗೌತಮನ ವಿಷಯವನ್ನು ಕೇಳ್ಬೇಡ ಸೀಮಾ....ಶಶಾಂಕನಿಗೆ ಬೇಸರ ಆಗ್ಒಲ್ವಾ?"

"ಅವರೇ ಹೇಳಿದ್ದು. ನಾನು ಕೇಳಲೇ ಇಲ್ಲ..."

"ಹೋಗಲಿ....ನೀವಿಬ್ರೂ ಹೇಗಿದ್ದೀರಿ? ಏನಾದರೂ ಹೊಸ ವಿಷಯ....?"

"ಇಲ್ಲ ವಾಣೀ.... ಆ ಬಗ್ಗೆ ನಮ್ಮಿಬ್ಬರಿಗೂ ಈಗಾಗ್ಲೇ ಮಾತು ಆಗಿದೆ.... ಹತ್ತಿರವಾಗಲು ಸಾಧ್ಯವೇ ಇಲ್ಲ..."

"ಗೌತಮ ಕೇಳದೇನೇ ನೀನು ಅವನಿಗೆ ಹತ್ತಿರವಾದೆ.... ಈಗ ನಿಮ್ಮಿಬ್ಬರ ಮದುವೆ ಆಗಿದೆ. ಶಶಾಂಕನಿಗೆ ನೀನು ಬೇಕಾಗಿದ್ದು ಆಸೆಯನ್ನು ವ್ಯಕ್ತಪಡಿಸಿದರೆ ನೀನು ನಿರಾಕರಿಸಬೇಡ ಸೀಮಾ...."

"ನಿಮ್ಮ ಸಲಹೆಗೆ ಥ್ಯಾಂಕ್ಸ್....ನಾನು ಆ ಬಗ್ಗೆ ಯೋಚಿಸಿಯೇ ಇಲ್ಲ" ಎಂದು ಹೇಳಿ ಲೈನನ್ನು ಕಟ್ ಮಾಡಿದಳು. ಸ್ವಲ್ಪ ಹೊತ್ತಿನ ನಂತರ ಶಶಾಂಕ ಒಳಗೆ ಬಂದ. ಗಂಭೀರವಾಗಿ ಕುಳಿತದ್ದವಳನ್ನು ಪ್ರಶ್ನಿಸಿದ.

"ಏನಾಯ್ತು ಸೀಮಾ? ವಾಣಿ ಏನಂದ್ರು....? ಅವರ ಹತ್ರ ಜಗಳ ಆಡಿದ್ರಾ...?"

"ನಾನು ಜಗಳಗಂಟಿ ಅಂತ ಅನ್ಸುತ್ತಾ ನಿಮಗೆ?"

"ತಮಾಷೆ ಮಾಡ್ದೆ... ಏನು ಹೇಳಿದ್ರು...? ಅವರು ಅವರ ತಮ್ಮ

ಚೆನ್ನಾಗಿದ್ದಾರಂತ?"

"ಅದನ್ನು ವಿಚಾರಿಸೋಕೆ ನಾನು ಫೋನು ಮಾಡಿರ್ಲಿಲ್ಲ. ಗೌತಮ ಈ ಊರಿಗೆ ಬಂದಿರುವ ವಿಷಯ ಗೊತ್ತಾ..." ಮಾತನ್ನು ಪೂರೈಸದೇ ನಾಲಗೆಯನ್ನು ಕಚ್ಚಿಕೊಂಡಳು.

"ಓ.ಕೇ. ಪರವಾಗಿಲ್ಲ ಬಿಡಿ...ಅಮ್ಮ ಫೋನು ಮಾಡಿದ್ಲು....ನನ್ನ ಅಕ್ಕ ವಿಜಯ ಹಾಗೂ ಅವಳ ಮಕ್ಕಳು ಸಾಯಂಕಾಲ ಇಲ್ಲಿಗೆ ಬರ್ತಾರಂತೆ... ಬಂದು ಬಿಡಿ.... ಅಂತಂದ್ಲು... ಊಟ ಆದ ನಂತರ ವಾಪಸ್ಸು ಇಲ್ಲಿಗೇ ಬಂದು ಬಿಡೋಣ" ಎಂದ.

"ನಿಮ್ಮಕ್ಕನಿಗೆ ನಾವು ಇಲ್ಲಿ ಹೋಟೆಲ್ಲಿನಲ್ಲಿರುವ ವಿಷಯ ಗೊತ್ತಾ.....?"

"ಹ್ಞೂಂ ಗೊತ್ತು. ನಮ್ಮ ಮನೇಲಿ ಎಲ್ಲಾ ವಿಷಯವೂ ಎಲ್ಲರಿಗೂ ಗೊತ್ತಿರುತ್ತೆ...."

"ಅಂದ್ರೇ... ನನ್ನ ಬಗ್ಗೆ, ನಮ್ಮ ಬಗ್ಗೆ ಎಲ್ಲಾ ಹೇಳಿ ಬಿಟ್ಟಿದ್ದೀರಾ....?"

"ಇದು ತೀರಾ ಪರ್ಸನಲ್ ಅಲ್ವಾ, ಅದಕ್ಕೇ ಹೇಳಿಲ್ಲ. ಆದರೆ ನನ್ನ ಅಕ್ಕ ಬಹಳ ಕ್ಲೆವರ್. ಎಲ್ಲವನ್ನೂ ಪತ್ತೆ ಹಚ್ಚಿ ಬಿಡ್ತಾಳೆ... ತುಂಬಾ ಎಚ್ಚರದಿಂದ ಮಾತಾಡ್ಬೇಕು."

"ಹಾಗಾದ್ರೆ ನಾನು ಬರೋಲ್ಲ. ನಾನು ಇಲ್ಲೇ ಇರ್ತೀನಿ. ನೀವು ಹೋಗ್ಬನ್ನಿ" ಎಂದಳು.

"ಅವಳೇ ಇಲ್ಲಿಗೆ ಬಂದು ಬಿಡ್ತಾಳೆ ಅಷ್ಟೇ..." ನಗೆಯನ್ನು ಸೇರಿಸಿದ. ಸೀಮಾ ನಗಲಿಲ್ಲ. ಚಿಂತಿಸುತ್ತಾ ಕುಳಿತಳು.

"ಚಿಂತೆ ಮಾಡುವಂಥಾದ್ದು ಏನೂ ಇಲ್ಲ. ಡೋಂಟ್ ವರಿ. ನಾನು ಎಲ್ಲಾದರ ಕೇರ್ ತಗೋತೀನಿ. ನೀವು ಈಗ ನನ್ನವರು..ನಿಮ್ಮ ಜವಾಬ್ದಾರಿ ನನ್ನದು. ನಿಮಗೆ ಬೇಸರವಾಗುವಂಥ ಒಂದೇ ಒಂದು ಮಾತಿಗೂ ಅವಕಾಶ ಕೊಡೋಲ್ಲ."

"ಥ್ಯಾಂಕ್ಯು ಶಶಾಂಕ್.." ಎಂದಳು. ಮಧ್ಯಾಹ್ನವೆಲ್ಲ ಟಿ.ವಿಯನ್ನು ನೋಡುತ್ತಾ ಕಾಲ ಕಳೆದರು. ಶಶಾಂಕ ಯಾವುದೋ ಇಂಗ್ಲೀಷ್ ಮೂವಿಯನ್ನು ಹಾಕಿದ್ದ. ಅದರಲ್ಲಿ ಬರುತ್ತಿದ್ದ ಪ್ರಣಯದ ದೃಶ್ಯಗಳನ್ನು ಕಂಡು ಸೀಮಾಳಲ್ಲಿ ನಾನಾ ಭಾವನೆಗಳು ಉದ್ಭವಿಸುತ್ತಿದ್ದವು. ಒಮ್ಮೆ ತಾನು ಗೌತಮನೊಡನೆ ಕಳೆದ ಸಂಜೆಗಳ ನೆನಪು ಮುತ್ತಿದರೆ, ಶಶಾಂಕನ ಕಡೆ ನೋಡುತ್ತಿದ್ದಳು. ಅವನ ಮನದಲ್ಲಿ ಏನು ತಿಕ್ಕಾಟ ನಡೆಯುತ್ತಿರಬಹುದು ಎಂದು ಊಹಿಸಲೂ ಆಗುತ್ತಿರಲಿಲ್ಲ....ಕಚಗುಳಿ ಇಡುವ ಸಂಭಾಷಣೆಗಳು, ಚುಂಬನಗಳು, ಅಪ್ಪುಗೆಯನ್ನು ನೋಡುವಾಗ, ಹೃದಯದಲ್ಲಿ ತರಂಗಗಳು ಏಳುತ್ತಿದ್ದವು. ಶಶಾಂಕ ಈ ಚಲನಚಿತ್ರವನ್ನು ತನ್ನನ್ನು

ಕೆರಳಿಸಲು ನೋಡುತ್ತಿರಬಹುದೇ ಅಂತ ಅನ್ನಿಸುವಾಗ ಅವನ ಮೇಲೆ ಕೋಪವೂ ಬರುತ್ತಿತ್ತು.... ತನಗೇ ಇಷ್ಟು ತಳಮಳವಾಗುತ್ತಿರುವಾಗ, ಗಂಡಸಾಗಿ ಇವನಿಗೆ ಏನೂ ಅನ್ನಿಸುತ್ತಿಲ್ಲವೇ? ತನ್ನ ಚೆಲ್ಲಾಟಗಳಿಗೆ ಗೌತಮ ಸ್ಪಂದಿಸಿ ತನ್ನೊಡನೆ ಒಂದಾಗಿದ್ದ... ಅವನು ನನ್ನ ಗಂಡನಾಗಿರಲಿಲ್ಲ. ಬರೀ ಸ್ನೇಹಿತನಾಗಿದ್ದ.... ಇವನು ನನ್ನ ಗಂಡ. ನನ್ನ ಮೇಲೆ ಅಧಿಕಾರವನ್ನು ಚಲಾಯಿಸಬಹುದು... ಇಲ್ಲಿ ನಾವಿಬ್ಬರೇ... ಏಕಾಂತದಲ್ಲಿದ್ದೇವೆ. ಆದರೂ... ಇಷ್ಟು ಸಂಯಮ... ವಾಣಿ ಏನಂದಳು...? ಅವನಾಗಿಯೇ ಅವನು ನಿನ್ನನ್ನು ಬಯಸಿದರೆ ನಿರಾಕರಿಸಬೇಡ ಅಂತ.... ಇವನು ತಾನಾಗಿಯೇ ನನ್ನನ್ನು ಬಯಸುವಂತೆ ಅನ್ನಿಸುವುದಿಲ್ಲ. ನಾನೇ ಏಕೆ ಉತ್ತೇಜನಗೊಳಿಸಬಾರದು? ಇದರಲ್ಲಿ ತಪ್ಪೇನಿದೆ...? ಗಂಡನಾದವನಿಗೆ ಸುಖ ಕೊಡುವುದು ತನ್ನ ಧರ್ಮ ಎಂದು ಹೇಳಿದರಾಯ್ತು... ಎಂದುಕೊಂಡು ಮೆಲ್ಲನೆ 'ಶಶಾಂಕ್..." ಎಂದು ಕರೆದಳು. ಅವನು ಇತ್ತ ತಿರುಗಲಿಲ್ಲ.

"ಶಶಾಂಕ್" ಎಂದು ಜೋರಾಗಿ ಕರೆದಳು. ಅವನು ಬೆಚ್ಚಿ ಅವಳತ್ತ ತಿರುಗಿದ. ಇವಳು ಕಿಸಿಕಿಸಿ ನಕ್ಕಳು. "ಏನಾಗ್ಬೇಕಾಗಿತ್ತು....?" ಕೇಳಿದ.

"ಏನಾದ್ರೂ ಮಾತಾಡಿ ಶಶಾಂಕ್, ಬೋರ್ ಆಗ್ತಿದೆ..." ಎಂದಳು.

"ಮೂವಿ ನೋಡ್ತಿದೀನಿ... ನೀವೂ ನೋಡಿ... ಚೆನ್ನಾಗಿದೆ" ಎಂದ.

"ಏನು ಚೆನ್ನಾಗಿದೆ. ಬರೀ ರೋಮ್ಯಾನ್ಸ್.... ಬೋರು..." ಮತ್ತೆ ಎಂದಳು.

"ಸರಿ ಹಾಗಾದ್ರೆ ಆಫ್ ಮಾಡ್ತೀನಿ...ಊಟಕ್ಕೆ ಆರ್ಡರ್ ಕೊಡ್ಲಾ?" ಕೇಳಿದ.

"ಈಗ್ಲೇ ಊಟ ಬೇಡ... ಬ್ರೇಕ್ ಫಾಸ್ಟ್ ಹೆವಿಯಾಗಿತ್ತು"

"ಹಾಗಾದ್ರೆ ಹೊರಗಡೆ ಎಲ್ಲಾದ್ರೂ ತಿರುಗಾಡಿ ಬರೋಣ್ವಾ?"

"ಬೇಡ, ಹೇಗೂ ಸಾಯಂಕಾಲ ಹೋಗ್ಬೇಕಲ್ಲ....ಏನಾದ್ರೂ ಮಾತಾಡಿ...ನಿಮ್ಮ ಪರ್ಸನಲ್ ವಿಷಯ ಹೇಳಿ..."

"ನನ್ನ ಪರ್ಸನಲ್ ವಿಷಯ ಏನಿದೆ....? ಏನೂ ಇಲ್ಲ..."

"ಯಾಕಿಲ್ಲ...? ರೇಣುಕಾಳ ಜೊತೆ ನಿಮ್ಮ ಮದುವೆ ಫಿಕ್ಸ್ ಆಗಿತ್ತು. ಇಬ್ಬರೂ ಒಟ್ಟಿಗೇ ತಿರುಗಾಡುತಿದ್ರಿ.... ಹೋಟೆಲ್ಲಿಗೆ ಹೋಗ್ತಿದ್ರಿ.... ಮೂವಿ ನೋಡ್ತಿದ್ರಿ.... ಇಂಥದೇ ಮೂವಿ ನೋಡ್ತಿದ್ರಾ...?"

"ಇಲ್ಲ. ರೇಣುಕಾಳಿಗೆ ಮೂವೀಸ್ ಅಂದ್ರೆ ಅಷ್ಟಕಷ್ಟೇ...."

"ನೀವು ಬಲವಂತ ಮಾಡ್ತಿರಲಿಲ್ವಾ?"

"ಇಂಥಾ ವಿಷಯಕ್ಕೆಲ್ಲ ಯಾರಾದ್ರೂ ಬಲವಂತ ಮಾಡ್ತಾರಾ.....? ಅದು ಅವರವರ ಇಷ್ಟ...."

"ಹಾಗಾದ್ರೆ ರೇಣುಕಾ ರೋಮ್ಯಾಂಟಿಕ್ ಅಲ್ಲ..."

"ಅದ್ಹೇಗೆ ಹೇಳ್ತೀರಿ....?"

"ಇಂಥಾ ಮೂವೀಸ್ ನೋಡಿದ್ರೆ, ಎಂಥೋರಿಗೂ ಮೈ ಬಿಸಿಯಾಗುತ್ತೆ.. ನೀವು ರೋಮ್ಯಾಂಟಿಕ್. ನಿಮಗೆ ಏನೂ ಅನ್ನಿಸ್ತಿಲ್ವಾ...?"

ಅವನ ಮುಖ ಕೆಂಪಾಗಿತ್ತು... ತುಸು ನಾಚಿಕೆಯಿಂದ ನುಡಿದ... "ಏನೇ ರೋಮ್ಯಾನ್ಸ್ ಇದ್ದರೂ ಮದುವೆ ಆದ್ಮೇಲೆ ಅಂತ ಮಾತಾಡಿಕೊಂಡಿದ್ವಿ.."

"ಓ... ಹೌ.. ಸ್ಯಾಡ್.. ಈಗ ಪಶ್ಚಾತ್ತಾಪ ಆಗ್ತಿರಬಹುದು ಅಲ್ವಾ...?"

"ಇಲ್ಲ... ಹಾಗೇನೂ ಇಲ್ಲ. ನಾವು ಅಂದುಕೊಂಡಿದ್ದರಲ್ಲಿ ತಪ್ಪೇನೂ ಇರಲಿಲ್ಲ. ಮದುವೆಯ ಬಂಧನ ಪವಿತ್ರವಾದದ್ದು... ನಮ್ಮಿಬ್ಬರ ಸಂಬಂಧವೂ ಪವಿತ್ರವಾಗಿರಲಿ ಆರೋಗ್ಯಯುತವಾಗಿರಲಿ ಅಂತ ಆಸೆ ಪಟ್ಟಿದ್ದೆವು. ಅದು ನೆರವೇರಲಿಲ್ಲ ಅಷ್ಟೇ.... ಅದಕ್ಕೆ ಯಾವ ವಿಷಾದವೂ ಇಲ್ಲ...."

"ಈಗ ನನ್ನ ಬಗ್ಗೆ ಏನನ್ನಿಸುತ್ತೆ?" ತಟ್ಟನೆ ಕೇಳಿದಳು.

"ಅಂದರೇ...." ಪ್ರಶ್ನಿಸಿದ.

"ನಾನು ನಿಮ್ಮ ಹೆಂಡ್ತಿ... ನಿಮಗೆ ನನ್ನ ಮೇಲೆ ಅಧಿಕಾರವಿದೆ... ಇಲ್ಲಿ ಏಕಾಂತದಲ್ಲಿ ಇದೀನಿ... ನನ್ನನ್ನು ಅನುಭವಿಸಬೇಕು ಅಂತ ಆಸೆ ಆಗ್ತಾ ಇಲ್ವಾ ನಿಮಗೆ...?"

"ಇಂಥಾ ಪ್ರಶ್ನೆಗಳನ್ನೆಲ್ಲಾ ಯಾಕೆ ಕೇಳ್ತೀರಿ....? ನಾನು ನೀಚ ಕೀಚಕನಲ್ಲ. ನಿಮ್ಮನ್ನು ಆ ನೋಟದಲ್ಲಿ ನೋಡಿಲ್ಲ. ಆ ಭಾವನೆಗಳನ್ನು ಬೆಳೆಸಿಕೊಂಡಿಲ್ಲ...."

"ಅದು ತಪ್ಪಲ್ವಾ ಶಶಾಂಕ್..."

"ತಪ್ಪು ಯಾಕಾಗುತ್ತೆ? ನಿಮ್ಮ ಆಸೆ ಅದೇ ಆಗಿದೆ ಅಲ್ವಾ?"

"ಈಗ ನನ್ನ ಆಸೆ ಬದಲಾಗಿದೆ ಶಶಾಂಕ್...." ಎನ್ನುತ್ತಾ ಅವನ ಬಳಿ ಸಾರಿದಳು... ಅವನು ಅವಳಿಂದ ದೂರ ಸರಿದ.... "ಯಾಕೆ ಶಶಾಂಕ್, ನಾನು ಚೆನ್ನಾಗಿಲ್ವಾ...? ಯೌವನ ಇಲ್ವಾ? ನನ್ನನ್ನು ನೋಡಿ ನಿಮ್ಮ ಕಾಮನೆಗಳು ಕೆರಳುವುದಿಲ್ವಾ...?"

"ನೀವು ಏನೇನೋ ಮಾತಾಡ್ತಿದೀರಿ... ನಿಮ್ಮ ಕಂಡೀಷನ್ಸ್ ನೀವೇ ಮರೆಯುತ್ತಿರುವಂತೆ ಅನ್ನಿಸ್ತಿದೆ."

"ಮರೆಯುತ್ತಿಲ್ಲ ಶಶಾಂಕ್... ಮುರಿಯುತ್ತಿದ್ದೀನಿ... ಮದುವೆಯಾಗಿ ಐದು ದಿನಗಳು ಕಳೆದವು... ಇಬ್ಬರೂ ಒಂದೇ ಹಾಸಿಗೆಯಲ್ಲಿ ಮಲಗ್ತಿದೀವಿ... ನಮಗೇ ಅರಿವಿಲ್ಲದೆ ನಮ್ಮ ಮೈ ಪರಸ್ಪರ ತಗಲುತ್ತದೆ. ನಿಮಗೆ ಏನೂ ಅನ್ನಿಸೋದೇ ಇಲ್ವಾ...? ಕತ್ತಲೆಯಲ್ಲಿ ತಮಾಷೆಯಿಂದಾಗಲಿ, ತಪ್ಪು ಮಾಡುವವನಂತಾಗಲೀ, ಕೈ ಬೆರಳು ಸೋಕಿಸುವುದಿಲ್ಲವಲ್ಲ.... ಇಷ್ಟು ಸಂಯಮದಿಂದ ಇರಲು ಸಾಧ್ಯ

ವಾಗುತ್ತಾ.....?"

"ಪ್ರಯತ್ನ ಪಟ್ಟರೆ ಆಗುತ್ತೆ....."

"ಆದರೆ ನನ್ನಿಂದ ಆಗ್ತಿಲ್ಲ ಶಶಾಂಕ್.... ಹೆಂಗಸಾಗಿ, ಹೀಗೆ ನಾಚಿಕೆಯನ್ನು ಬಿಟ್ಟು ಮಾತಾಡುತ್ತಿರುವುದು ನಿಮಗೆ ತಪ್ಪು ಅನ್ನಿಸಬಹುದು. ಅಸಹ್ಯ ಅನ್ನಿಸಬಹುದು... ಆದರೆ ನಾನಾಗಿಯೇ ತಿಳಿಸದಿದ್ದರೆ, ನೀವು ಮುಂದುವರೆಯುವುದಿಲ್ಲ ಅಂತ ನನಗೆ ಗೊತ್ತು." ಎನ್ನುತ್ತಾ ಅವನ ಮೇಲೆ ಕೈ ಹಾಕಿದಳು. ಅವನು ಕೈ ತಳ್ಳಿದ....

"ಸೀಮಾ... ಇದು ಸರಿಯಲ್ಲ. ನೀವು ಗೌತಮನ ಸ್ವತ್ತು...."

"ಅದು ನಮ್ಮಿಬ್ಬರ ಮದುವೆಗೆ ಮುಂಚೆ.... ಈಗ ನಾನು ನಿಮ್ಮ ಸ್ವತ್ತು.... ನೀವು ನನ್ನ ಸ್ವತ್ತು.... ಪ್ಲೀಸ್.... ನನ್ನ ಆಸೆಯನ್ನು ಪೂರೈಸಿ...." ಕೇಳಿಕೊಂಡಳು. ಅವನು ಅವಳನ್ನೇ ದಿಟ್ಟಿಸಿದ.... ಉನ್ಮತ್ತತೆಯಿಂದ ಉಬ್ಬಿದ ಮುಖ... ಮಾದಕತೆಯಿಂದ ತೇಲಾಡುವ ಕಣ್ಣುಗಳು... ಬಯಕೆಯಿಂದ ಬಿರಿದು, ಅದುರುವ ತುಟಿಗಳು... ಅವನಿಗೆ ಗಾಬರಿಯಾಯಿತು.

"ಸೀಮಾ... ನೀವು ಏನು ಬಯಸ್ತಿದೀರಿ ಅಂತ ನಿಮಗೆ ಗೊತ್ತಿಲ್ಲ... ನಾವಿಬ್ಬರೂ ಈ ತಕ್ಷಣಕ್ಕೆ ಆ ಸಂಬಂಧಕ್ಕೆ ಸಿದ್ಧರಾಗಿಲ್ಲ..." ಎಂದು ಹೇಳಿ, ಅವಳನ್ನು ಅತ್ತ ತಳ್ಳಿ ಮಂಚದಿಂದ ಇಳಿದು ನಿಂತ.... ಅವಳಿಗೆ ಮುಖಭಂಗವಾದಂತಾಗಿತ್ತು.

"ನೀವು ನನಗೆ ಹೀಗೆ ಅವಮಾನ ಮಾಡ್ತೀರಿ ಅಂತ ನಾನು ಅಂದುಕೊಂಡಿರಲಿಲ್ಲ. ನಾನು ಅಷ್ಟು ಬೇಡದವಳಾಗಿದ್ದರೆ ನನ್ನನ್ನು ಯಾಕೆ ಮದುವೆಯಾದ್ರಿ...? ನನಗೆ ನಿಮ್ಮ ಕನಿಕರ ಬೇಕಿಲ್ಲ. ನಿಮ್ಮ ರಕ್ಷಣೆ ಬೇಕಿಲ್ಲ... ನನಗೆ ನಿಮ್ಮ ಪ್ರೀತಿ ಬೇಕು...."

"ನಾವು ಒಬ್ಬರನ್ನೊಬ್ಬರು ಪ್ರೀತಿಸ ತೊಡಗಿದರೆ, ನೀವು ಗೌತಮನ್ನ ಮರೆಯಲು ಆಗದಿದ್ದರೆ, ಅದು ವಂಚನೆ ಆಗುತ್ತದೆ... ಪ್ರೀತಿ ಪರಿಶುದ್ಧವಾಗಿರುವುದಿಲ್ಲ...."

"ನಾನು ಗೌತಮನ್ನ ಮರೆಯಬೇಕು ಶಶಾಂಕ್.... ಅದಕ್ಕೆ ನಿಮ್ಮ ಸಹಕಾರ ಬೇಕು.... ನಿಮ್ಮ ಪ್ರೀತಿಯೇ ನನಗೆ ಸಿಗದಿದ್ದರೆ, ನಾನು ಅವನನ್ನು ಮರೆಯಲು ಹೇಗೆ ಸಾಧ್ಯ...? ನನ್ನ ಹೆಣ್ತನಕ್ಕೆ ಅವಮಾನ ಮಾಡ್ಬೇಡಿ... ನನ್ನನ್ನು ನಿಮ್ಮವಳನ್ನಾಗಿ ಮಾಡ್ಕೊಳ್ಳಿ" ಮತ್ತೆ ಅವನಿಗೆ ಜೋತು ಬಿದ್ದಳು. ಇದ್ದಕ್ಕಿದ್ದಂತೆ ಇವಳಿಗೇನಾಯ್ತು ಎಂಬ ಭಯ ಕಂಡಿತು... ಒಂದು ವೇಳೆ ಇವಳ ಬುದ್ಧಿ ನೆಟ್ಟಗಿಲ್ಲದಿದ್ದರೆ... ಎಂದುಕೊಂಡು, ಅವಳಿಗೆ ಸಮಾಧಾನ ಹೇಳಬೇಕೆಂದುಕೊಂಡು ಅವಳ ಬೆನ್ನ ಮೇಲೆ ಕೈಯಾಡಿಸಿದ.

"ಓ..ಕೆ..ನಾನು ನಿಮಗೆ ಅವಮಾನ ಮಾಡ್ತಿಲ್ಲ.... ನಾನು ನಿಮ್ಮನ್ನು ತುಂಬಾ

ಗೌರವಿಸ್ತೀನಿ. ಆ ಕಾರಣದಿಂದಲೇ ನಿಮ್ಮ ಮನಸ್ಸಿಗೆ ಬೇಸರವಾಗಬಾರದೆಂದು ನಾನು ನಿಮ್ಮಿಂದ ದೂರವೇ ಇದ್ದೆ.... ನಿಮಗೆ ನಾನು ಬೇಕು ಅಂತಾದ್ರೆ, ನನಗೂ ನೀವು ಬೇಕು... ನಿಮ್ಮ ಮನಸ್ಸನ್ನು ನಾನು ಅರಿಯಲು ಪ್ರಯತ್ನಿಸಲಿಲ್ಲ.... ನಾನು ಎಂದೆಂದಿಗೂ ನಿಮ್ಮವನೇ..." ಎಂದು ಹೇಳಿ ಅವಳ ಮುಂಗುರುಳನ್ನು ಸವರಿದ....

"ಇನ್ನು ನನ್ನನ್ನು ಸತಾಯಿಸ್ಬೇಡಿ ಶಶಾಂಕ್..." ಎನ್ನುತ್ತಾ ಅವನನ್ನು ತಬ್ಬಿಕೊಂಡು, ಅವನ ಮುಖದ ಬಳಿಗೆ ತನ್ನ ಮುಖವನ್ನು ತಂದಳು. ಅವಳ ಕಣ್ಣುಗಳಲ್ಲಿ ಕಂಡು ಬಂದ ಕಾತುರ, ಆತುರವನ್ನು ಗಮನಿಸಿದ ಶಶಾಂಕ ಗಾಬರಿಗೊಂಡ... ಹಸಿದ ಹುಲಿ ಇವಳು! ಈಗ ಇವಳನ್ನು ನಿರಾಕರಿಸುವಂತೆಯೂ ಇಲ್ಲ. ಇಲ್ಲಿ ನಾವಿಬ್ಬರೇ.... ಕೆರಳಿದ್ದಾಳೆ.... ಈಗ ಇವಳನ್ನು ತಣಿಸುವುದೇ ಸರಿಯಾದ ಉಪಾಯ.... ಇಲ್ಲದಿದ್ದರೆ, ತನಗೆ ತಾನು ಏನಾದರೂ ಅಪಾಯ ಮಾಡಿಕೊಳ್ಳಬಹುದು ಅಥವಾ ನನಗೇ ಅಪಾಯ ಮಾಡಬಹುದು.... ಅಬ್ಬಾ ಹೆಣ್ಣೇ ನಿನ್ನಲ್ಲಿ ಇಂಥದೊಂದು ಅಂತಃಜ್ವಾಲೆ ಇರಬಹುದು ಅಂತ ನಾನು ಭಾವಿಸಿರಲಿಲ್ಲ ಅಂತಂದುಕೊಂಡು ಜ್ವಾಲೆಯ ತಾಪವನ್ನು ತಣಿಸಲು ಸಿದ್ಧನಾದ. ಅವಳನ್ನು ತೃಪ್ತಿಗೊಳಿಸಿದ.

ಸಾಕಷ್ಟು ಹೊತ್ತು ನಿದ್ರಿಸಿದವನಿಗೆ ಎಚ್ಚರವಾಯಿತು. ನಿಧಾನವಾಗಿ ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿದ್ದವಳ ಕಡೆ ನೋಟವನ್ನು ಬೀರಿದ. ಹಸಿದ ಮಗು, ಹಾಲನ್ನು ಕುಡಿದು ಸುಖ ನಿದ್ದೆಯಲ್ಲಿ ಮಲಗಿರುವಂತೆ ಇತ್ತು ಅವಳ ಮುಖ.... ಕೆಲವೇ ಗಂಟೆಗಳ ಹಿಂದೆ ತಾನಾಗಿಯೇ ಅಪೇಕ್ಷೆ ಪಟ್ಟು ಸುಖವನ್ನು ಪಡೆದ ಅವಳ ರೀತಿ, ಅವನಿಗೆ ಅಚ್ಚರಿಯನ್ನುಂಟು ಮಾಡಿತು. ಇದ್ದಕ್ಕಿದ್ದಂತೆ ಹೀಗೇಕೆ ವರ್ತಿಸಿದಳು ಎಂದು ಅವನಿಗೆ ಅರ್ಥವಾಗಲಿಲ್ಲ. ಗೌತಮನು ಮಾಡಿದ ಅಪರಾಧಗಳಿಂದ ಇವಳ ಮನಸ್ಸಿಗೆ ಆಘಾತವಾಗಿರುವುದಂತೂ ನಿಜ....ಇಂಥವಳನ್ನು ತಾನು ಮದುವೆಯಾಗಿ ದುಡುಕಿದೆನೇ... ಇನ್ನು ಮುಂದೆ ಜಾಗರೂಕನಾಗಿರಬೇಕು.... ಎಂದುಕೊಂಡು ಎದ್ದು ಕುಳಿತು, ಕೈ ಗಡಿಯಾರವನ್ನು ನೋಡಿಕೊಂಡ. ಮಧ್ಯಾಹ್ನ ಮೂರುಗಂಟೆಯ ಸಮಯವಾಗಿತ್ತು. ಹೊಟ್ಟೆ ಹಸಿದಿತ್ತು. ತಮ್ಮಿಬ್ಬರ ಊಟವೂ ಆಗಿಲ್ಲ ಎನ್ನುವುದು ಗಮನಕ್ಕೆ ಬಂತು. ಎರಡು ಮೀಲ್ಸ್‌ಗೆ ಆರ್ಡರ್ ಕೊಟ್ಟು, ಸೀಮಾಳನ್ನು ಎಬ್ಬಿಸಿದ.

"ಊಟ ಬರುತ್ತೆ, ಏಳಿ ಎದ್ದು ಡ್ರೆಸ್ ಮಾಡ್ಕೊಳ್ಳಿ" ಎಂದ. ಅವಳು ಮೈ ಮುರಿಯುತ್ತಾ ಎದ್ದು ಕುಳಿತು ತುಂಟತನದಿಂದ ಅವನ ಕಡೆ ನೋಡಿದಳು. ಅವನು ನಸುನಕ್ಕ.

"ಹೌ ಆರ್ ಯೂ ಫೀಲಿಂಗ್..." ಎಂದು ಕೇಳಿದಾಗ ಅವನು ತಲೆಯಾಡಿಸಿದ.

"ರೇಣುಕಾ ಕೊಡದೇ ಇದ್ದ ಸುಖವನ್ನು ನಾನು ನಿಮಗೆ ಕೊಟ್ಟಿದ್ದೀನಿ. ಯೂ ಶುಡ್ ಬಿ ಥ್ಯಾಂಕ್ ಫುಲ್ ಟು ಮಿ...." ಎಂದಳು

"ಆಫ್ ಕೋರ್ಸ್...." ಎಂದ. ಅವನೂ ಮುಗುಳ್ನಗುತ್ತಾ ಹೊಸ ಅನುಭವ ಗಳಿಂದ ಆನಂದಿತನಾಗಿದ್ದ. ಜೊತೆಗೆ ಆತಂಕವೂ ಸೇರಿತ್ತು.

****

"ಮನೆಗೆ ಹೋಗುವ ಮಧ್ಯದಲ್ಲಿ ಮಾರ್ಕೆಟ್ಟಿನಿಂದ ಹೂವು - ಹಣ್ಣು ಗಳನ್ನು ತೆಗೆದುಕೊಂಡು ಹೋಗೋಣ. ನಿಮ್ಮ ತಾಯಿಗೆ ಖುಷಿಯಾಗುತ್ತೆ" ಎಂದು ಸೀಮಾ ನುಡಿದಾಗ, ಅವನು ಅವಳ ಖುಷಿಯನ್ನು ಗಮನಿಸಿದ್ದ.

"ನಮ್ಮ ಮನೆಗೇ ತಾನೇ ಹೋಗ್ತಾ ಇರೋದು... ಅಮ್ಮ ಬೇಕಾದಷ್ಟು ತರಿಸಿ ಇಟ್ಟಿರ್ತಾಳೆ. ಅಕ್ಕನೂ ತರಬಹುದು..." ಎಂದ.

"ನಾನು ಇವತ್ತು ಬಹಳ ಒಳ್ಳೆಯ ಮೂಡ್‌ನಲ್ಲಿದ್ದೀನಿ... ಸ್ವೀಟ್ಸ್ ತಗೊಂಡು ಹೋಗೋಣ....ಹೋಗ್ತಾ ವಾಣಿಯ ಮನೆಗೆ ಹೋಗ್ಬಿಟ್ಟು ಹೋಗೋಣ... ನನ್ನ ಇವತ್ತಿನ ಖುಷಿಗೆ ಅವಳೇ ಕಾರಣ" ಎಂದಳು.

"ಅಂದರೇ?"

"ಹೌದು ಶಶಾಂಕ್... ಅವತ್ನಿಂದ ವಾಣಿ ಪದೇ ಪದೇ ಈ ವಿಷಯ ಕುರಿತು ನನಗೆ ಬುದ್ಧಿವಾದವನ್ನು ಹೇಳ್ತಾನೇ ಇದ್ಲು... ಆ ಮುಹೂರ್ತ ಇವತ್ತು ಒದಗಿ ಬಂತು... ಇದನ್ನು ಅವಳಿಗೆ ಹೇಳಲೇ ಬೇಕು"

"ಇದನ್ನೆಲ್ಲಾ ಯಾರಾದ್ರೂ ಹೇಳ್ತಾರಾ ಸೀಮಾ....ಇದು ಪರ್ಸನಲ್ ವಿಷಯ."

"ಅವಳು ನನ್ನ ಫ್ರೆಂಡ್... ಅವಳೊಡನೆ ಯಾವ ವಿಷಯವನ್ನೂ ಮುಚ್ಚಿಟ್ಟಿಲ್ಲ.... ನನ್ನ ಎಲ್ಲಾ ಬದಲಾವಣೆಗೂ ಅವಳೇ ಕಾರಣ... ಅವಳು ನನಗೆ ತಾಯಿಯಿದ್ದ ಹಾಗೆ.... ಅದಕ್ಕೆ ಅವಳಿಗೆ, ನನಗೆ ಹುಟ್ಟುವ ಮಗುವನ್ನು ಕೊಟ್ಟು ಬಿಡೋಣ ಅಂತಂದುಕೊಂಡಿದೀನಿ."

"ವ್ಹಾಟ್....? ನಾವು ಹಾಗೆ ಮಾಡಿದ್ರೆ ಎಲ್ಲರಿಗೂ ಗೊತ್ತಾಗುತ್ತೆ ಸೀಮಾ, ನಾನಾ ಪ್ರಶ್ನೆಗಳನ್ನು ಕೇಳ್ತಾರೆ. ಈ ವಿಷಯ ರಹಸ್ಯವಾಗಿರಬೇಕು."

"ವಾಣಿಗೆ ಮಕ್ಕಳು ಅಂದ್ರೆ ಆಸೆ.... ಅವಳಿಗೆ ಮಕ್ಕಳಾಗುಲ್ಲ ಅಂತ ಡಾಕ್ಟರು ಹೇಳಿದಾರಂತೆ. ಗಂಡನೂ ದುಬೈಗೆ ಹೊರಟು ಹೋಗಿದ್ದಾರೆ....ತಮ್ಮನನ್ನು ತಾನೇ ಸಾಕಿಕೊಂಡಿದ್ದಾಳೆ. ನಾನು ಅಬಾರ್ಷನ್ ಮಾಡಿಸ್ಕೊಳ್ತೀನಿ ಅಂತಂದಾಗ, ತನ್ನ ಆಸೆಯನ್ನು ವ್ಯಕ್ತಪಡಿಸಿದಳು. ಅವಳಿಗೋಸ್ಕರ ಸುಮ್ಮನಾದೆ... ಬೇಡ ಎನ್ಬೇಡಿ.... ಶಶಾಂಕ್..."

"ಸರಿ, ನಿಮ್ಮಿಷ್ಟ...ಯಾವ ವಿಷಯಕ್ಕೂ ನನ್ನ ವಿರೋಧವಿಲ್ಲ. ಆದರೆ ಈ

ವಿಷಯಗಳನ್ನು ಬೇರೆ ಯಾರಿಗೂ ಹೇಳ್ಬೇಡಿ....ಸುಮ್ಮನೇ ಮಾತಾಡ್ತಾರೆ. ಹಾಗಂತ ಪ್ರಾಮಿಸ್ ಮಾಡಿ."

"ಓ...ಕೆ...ನಾನು ಯಾರಿಗೂ ಹೇಳಲ್ಲ. ಆದರೆ ನನಗೆ ಒಂದೇ ಒಂದು ಆಸೆ... ನಾನು ಒಂದು ಸಾರಿ ಗೌತಮನ ಹತ್ರ ಮಾತಾಡ್ಬೇಕು...." ಶಶಾಂಕನ ಮುಖ ಕೆಟ್ಟದಾಯಿತು.

"ಇನ್ನೂ ಬಾಕಿ ಏನು ಮಾತಾಡೋದಿದೆ....? ಎಲ್ಲಾ ನಿರ್ಧಾರವಾಗಿದೆಯಲ್ಲ."

"ಅವನಿಗೆ ಥ್ಯಾಂಕ್ಸ್ ಹೇಳ್ಬೇಕು... ನೀವು ನನಗೆ ಸಿಗೋಕೆ ಅವನೇ ಕಾರಣ... ಅಲ್ವಾ...?" ಅದು ಅವಳ ಮುಗ್ಧತೆಯೋ, ಮೌಢ್ಯವೋ ಅವನಿಗೆ ತಿಳಿಯಲಿಲ್ಲ. ತಿಳಿಯಬೇಕೆಂದೂ ಅನ್ನಿಸಲೂ ಇಲ್ಲ. ಮೊದಲಿನಿಂದಲೂ ಹೀಗೇ ಇದ್ದಳೋ... ಅಥವಾ ಈಗ ಹೀಗೆ ಬದಲಾಗಿದಾಳೋ, ವಾಣೀನ ಕೇಳಿದರೆ ತಿಳಿಯುತ್ತೆ ಅಂತಂದುಕೊಂಡ.

* * *

"ಸಧ್ಯದಲ್ಲೇ ಕೋರ್ಟು ವಿಚಾರಣೆ ಪ್ರಾರಂಭವಾಗುತ್ತೆ... ಆದರೆ ಯಾವಾಗ ಎಷ್ಟೆಷ್ಟು ದಿನಗಳು ವಿಚಾರಣೆ ನಡೆಯುತ್ತೆ? ಹೇಗೆ ನಡೆಯುತ್ತೆ

ಅನ್ನೋದನ್ನು ನಮ್ಮ ಲಾಯರ್ರು ತಿಳಿಸ್ತಾರೆ. ಆಗ ಕೋರ್ಟಿಗೆ ಹೋಗ ಬೇಕಾಗುತ್ತೆ.... ಆಗ ನೀವೂ ಬರಬೇಕಾಗಬಹುದು" ಅಂತಂದ.

"ಕೋರ್ಟು ಅಂದ್ರೆ ನಂಗೆ ಭಯ ಆಗುತ್ತೆ.... ಏನು ಪ್ರಶ್ನೆ ಕೇಳ್ತಾರೋ... ಅಂತ ದಿಗಿಲಾಗುತ್ತೆ..."

"ಅದರ ತಯಾರಿಯನ್ನೆಲ್ಲ ನಮ್ಮ ಲಾಯರ್ರು ಮಾಡ್ತಾರೆ... ಧೈರ್ಯವಾಗಿ ಕೇಳಿದ್ದಕ್ಕೆ ಉತ್ತರ ಹೇಳಿದ್ರಾಯ್ತು.... ವಿಚಾರಣೆ ಎಷ್ಟು ಬೇಗ ಮುಗಿದ್ರೆ ಅಷ್ಟು ಒಳ್ಳೇದು..."

"ಯಾಕೆ?"

"ನಾನು ಬೇರೆ ಊರ್ನಲ್ಲಿ ಕೆಲಸವನ್ನು ಹುಡುಕ್ತಿದೀನಿ... ಈ ಊರಿನ ಸಹವಾಸವೇ ಬೇಡ ಅಂತ ನನಗನ್ನಿಸಿಬಿಟ್ಟಿದೆ...."

"ಹೌದು ಶಶಾಂಕ್... ನನಗೂ ಹಾಗೇ ಅನ್ನಿಸ್ತಿದೆ... ಆದರೆ ನನ್ನ ಕೆಲಸ....?"

"ಬೇರೆ ಕೆಲಸ ಸಿಗುವುದು ನಿಮಗೆ ಕಷ್ಟವಲ್ಲ... ನನಗೆ ಕೆಲಸ ಸಿಗುವುದು ನಿಧಾನವಾಗಬಹುದು... ಆಮೇಲೆ ಮತ್ತೆ ಮದುವೆಯಾಗೋದು ಅಂತ ಅಂದು ಕೊಂಡಿದ್ದೆ.... ಆದರೆ, ಆದದ್ದೇ ಬೇರೆ... ಎಲ್ಲವೂ ಅನಿರೀಕ್ಷಿತವಾಗಿ ಬೇಗ ಬೇಗ ನಡೆದು ಹೋಯ್ತು. ಯೋಚಿಸಕ್ಕೂ ಅವಕಾಶವಿರಲಿಲ್ಲ... ನಿರುದ್ಯೋಗಿ ಆಗಿ ಮದುವೆ, ಸಂಸಾರ... ಎಲ್ಲವನ್ನೂ ನೋಡಿಕೊಳ್ಳೋದು ಹೇಗೆ ಅಂತ ಆತಂಕ

ಅಷ್ಟೇ..."

"ನಾನು ಇದೀನಲ್ಲ. ನನಗೆ ಕೆಲಸವಿದೆಯಲ್ಲ."

"ಸಧ್ಯಕ್ಕೆ ನೀವು ರಜ ಹಾಕುವುದೇ ಒಳ್ಳೆಯದು. ನಿಮಗೆ ಆಗದವರು ನಿಮ್ಮ ಮೇಲೆ ಕಣ್ಣು ಇಟ್ಟಿರುತ್ತಾರೆ....ನಿಮಗೇನಾದರೂ ಆದರೆ...."

"ನನ್ನಿಂದ ನಿಮಗೆ ತೊಂದರೆ, ಬೇಸರ.....ಸಾರೀ ಶಶಾಂಕ್....". ಪೆಚ್ಚಾಗಿ ನುಡಿದಳು.

"ಸಾರಿ ಎಲ್ಲಾ ಏನೂ ಬೇಡ. ನನ್ನ ಸೇವಿಂಗ್ಸ್ ಹಣ ಸ್ವಲ್ಪ ಇದೆ. ಅಪ್ಪ ಸಹಾಯ ಮಾಡ್ತಾರೆ.... ಹೇಗೂ ಆಗುತ್ತೆ...."

"ನನ್ನದೂ ಸೇವಿಂಗ್ಸ್ ಅಕೌಂಟ್‌ನಲ್ಲಿ ದುಡ್ಡಿದೆ. ನಮ್ಮ ಅಪ್ಪನ ಹತ್ತಿರ ಬೇಕಾದಷ್ಟು ಹಣ ಇದೆ....ನನಗೆ ಖಂಡಿತಾ ಸಹಾಯ ಮಾಡ್ತಾರೆ..."

"ಬೇಡ ಸೀಮಾ....ನಿಮ್ಮ ತಂದೆಯ ಹಣ ನನಗೆ ಬೇಡ. ಅವರ ಶ್ರೀಮಂತಿಕೆಯ ಆಸೆಗೆ ನಾನು ನಿಮ್ಮನ್ನು ಮದುವೆಯಾದೆ ಅನ್ನುವ ಅಪವಾದ ನನಗೆ ಬೇಡ. ನಿಮ್ಮ ಹಣ, ಸಂಪಾದನೆ ಇಲ್ಲದಿದ್ದರೂ ನಾನು ನಿಮ್ಮನ್ನು ಸಾಕಬಲ್ಲೆ.... ನಾನು ಸೆಟ್ಲ್ ಆಗುವವರೆಗೂ ನಾವು ದೂರ ದೂರವೇ ಇದ್ದರೆ ಚೆನ್ನಾಗಿರ್ತಿತ್ತು."

"ಹತ್ತಿರವಾದರೆ ಅದರಿಂದ ನಷ್ಟವೇನು ಶಶಾಂಕ್....ನಾವು ಒಬ್ಬರನ್ನೊಬ್ಬರು ಅರಿಯಲು ಸಹಾಯವಾಗುತ್ತದೆ. ನಮ್ಮ ಬೇಗುದಿ ಕಡಿಮೆ ಆಗುತ್ತದೆ.... ಹೊಸ ಉತ್ಸಾಹ ಮೂಡುತ್ತದೆ....ಹಾಗಂತ ಸೈಕಲಾಜಿಸ್ಟ್‌ಗಳೇ ಹೇಳ್ತಾರೆ... ನಾವು ತಪ್ಪನ್ನೇನೂ ಮಾಡಿಲ್ಲ.... ನಾನು ನಿಮಗೆ ಎಲ್ಲ ರೀತಿಯಿಂದಲೂ ಸಹಾಯಕಳಾಗಿರ್ತೀನಿ ..... ಪ್ರಾಮಿಸ್..."

"ಓ..ಕೇ.." ಅಂತ ಹೇಳಿದರೂ ಅವನಿಗೆ ಸಮಾಧಾನವಾಗಿರಲಿಲ್ಲ. ಕೆಲಸ, ಸಂಪಾದನೆ, ಮದುವೆ ಆಗುವ ಕನಸು ಎಲ್ಲವನ್ನೂ ಕಳೆದುಕೊಂಡಿದ್ದ....ಆದರೆ ಈಗ? ಕೇವಲ ದೈಹಿಕ ಸುಖಕ್ಕಾಗಿ ಮದುವೆ ಆಗಿರಲಿಲ್ಲ... ಸೀಮಾಳನ್ನು ಮದುವೆ ಯಾಗಲು ಒಂದು ಬಲವಾದ ಕಾರಣವೂ ಇರಲಿಲ್ಲ.... ದೈಹಿಕ ಸುಖದಿಂದ ದೇಹ ತೃಪ್ತಿ, ಮಾನಸಿಕ ಸಂತೋಷ ಸಿಗಬಹುದು. ಆದರೆ ಹೊಟ್ಟೆ ತುಂಬುವುದು ಹೇಗೆ....? ಇದು ಇವಳಿಗೇಕೆ ಅರ್ಥವಾಗುವುದಿಲ್ಲ....? ಇನ್ನು ಕೆಲವೇ ತಿಂಗಳಿನಲ್ಲಿ ಇವಳು ತಾಯಿಯಾಗುತ್ತಾಳೆ... ಅಷ್ಟರೊಳಗೆ ತಾನು ಕೆಲಸವನ್ನು ಹುಡುಕಲೇ ಬೇಕು.... ಇಲ್ಲದಿದ್ದರೆ ತಮಷೆಯ ವಸ್ತುವಾಗುತ್ತೇನೆ ಅಂತ ಅನ್ನಿಸಿತು.

"ಅಷ್ಟು ಸೀರಿಯಸ್ ಆಗಿ ಏನು ಯೋಚ್ನೆ ಮಾಡ್ತೀರಿ...? ನನಗೂ ಹೇಳಿ..." ಎಂದಳು...ಅವನು ನಕ್ಕು ತಲೆಯಾಡಿಸಿದ.

"ಈಗ ಹೊತ್ತಾಯಿತು ಹೋಗೋಣ. ಮನೆಯಲ್ಲಿ ನಮಗೋಸ್ಕರ ಕಾಯ್ತಾ

ಇರ್ತಾರೆ....ವಾಣಿಯ ಮನೆಗೆ ಬೇರೆ ಹೋಗ್ಬೇಕಲ್ಲ" ಎಂದು ಹೇಳಿ ಅವಸರಿಸಿದ. ಇಬ್ಬರೂ ಸಿದ್ಧರಾಗಿ ಹೊರಟರು.

****

"ನಿನ್ನ ಹೆಂಡ್ತಿ ತುಂಬಾ ಚೆನ್ನಾಗಿದಾಳೆ ಕಣೋ ಶಶೀ... ನಿಜ ಹೇಳಬೇಕೂಂತ ಅಂದ್ರೇ, ರೇಣುಕಾಳಿಗಿಂತ ಚೆನ್ನಾಗಿದ್ದಾಳೆ." ವಿಜಯ ಸೀಮಾಳನ್ನು ಕಂಡು ತನ್ನ ಮೆಚ್ಚುಗೆಯನ್ನು ಸೂಸಿ, ಶುಭವನ್ನು ಹಾರೈಸಿದಳು. ಸೀಮಾ ಶಶಾಂಕನ ಕಡೆ ಓರೆ ನೋಟವನ್ನು ಬೀರಿದಳು. ಗೌತಮನ ಬಗ್ಗೆ ಅಯ್ಯೋ ಎನಿಸುತ್ತೆ.... ಏನೋ ಹಲ್ಕಾ ಕೆಲಸ ಮಾಡೋಕ್ಕೆ ಹೋಗಿ ತನ್ನ ಪ್ರೇಯಸಿಯನ್ನು ಕಳ್ಕೊಂಡ.... ಈಗ ನಿನ್ನ ಜೊತೆ ಇವಳನ್ನು ಕಂಡರೆ ಹೊಟ್ಟೆ ಉರ್ಕೊಂಡು ಸಾಯ್ತಾನೆ...."

"ವಿಜೀ.... ಹಾಗೆಲ್ಲಾ ಏನೇನೋ ಮಾತಾಡ್ಬೇಡ. ಹಳೇ ವಿಷಯವನ್ನು ಮರೆಯಬೇಕು ಅಂತ ಇವರು ಮನೆ ಬಿಟ್ಟು ಹೋಟೆಲ್ಲಿನಲ್ಲಿದ್ದಾರೆ...."

"ಹಳೇದೆಲ್ಲಾ ಅಷ್ಟೇ ಸುಲಭವಾಗಿ ಮರೆಯೋ ಹಾಗಿದ್ರೆ ಮನೇಲೇ ಇರಬಹುದಾಗಿತ್ತಲ್ಲ. ಅದಕ್ಕೆ ಹೋಗಿದ್ಯಾಕೆ! ಅಲ್ಲಿ ಇಬ್ಬರೇ ಏಕಾಂತದಲ್ಲಿರುವಾಗ ಆ ನೆನಪುಗಳು ಹೆಚ್ಚು ಮರುಕಳಿಸುತ್ತೆ. ಅವ್ವಾ ನೀನೂ..... ನಿಜ ಹೇಳಿ. ನಿಮಗೆ ಗೌತಮನ್ನು ಮರೆಯೋಕೆ ಆಗ್ತಿದ್ಯಾ? ಶಶಾಂಕ ರೇಣುಕನ್ನ ಹೇಗಮ್ಮ ಮರೀತಾನೆ?"

"ಬೇಡಾಂದ್ರೂ ಅದೇ ಮಾತಾಡ್ತೀಯಲ್ಲ ವಿಜೀ. ಈಗ ಇವರಿಬ್ಬರ ಮದುವೆ ನೆರವೇರಿದೆ. ಇಬ್ಬರೂ ಒಟ್ಟಿಗಿದ್ದರೆ, ಹಳೇದೆಲ್ಲಾ ತಾನಾಗಿಯೇ ಮರೆಯುತ್ತೆ."

"ಅದ್ಸರಿ, ಅಷ್ಟು ಅರ್ಜೆಂಟ್ನಲ್ಲಿ ಮದುವೆ ಮಾಡೋ ಅಗತ್ಯ ಏನಿತ್ತು? ದಿನವನ್ನೂ ಫಿಕ್ಸ್ ಮಾಡಿದ್ದಾಗಿತ್ತಲ್ಲ."

"ಫೋನ್ನಲ್ಲಿ ಹೇಳಿದ್ನಲ್ಲ. ನಿನ್ನ ಮಾವ ಬಂದು ಗಲಾಟೆ ಮಾಡಿದ. ಸೀಮಾ ಅವನ ಸೊಸೆ ಅನ್ನುವಂತೆ ಮಾತಾಡಿದ. ಈಗ ಅವನು ಏನೂ ಮಾಡೋಕೆ ಆಗಲ್ಲ." ಆಕೆ ಹೆಮ್ಮೆಯಿಂದ ನಕ್ಕು ಹೇಳಿದಳು.

"ಅಮ್ಮ ಸಾಕು ಈ ಮಾತುಗಳು. ಏನೇ ವಿಜಿ, ನಿನ್ನ ಮನೆ ಸುದ್ದಿ ಹೇಳು, ನಮ್ಮ ಮನೆ ಸುದ್ದಿ ಸಾಕು."

"ನಾನೂ ಈ ಮನೆಯೋಳೆ, ನೋಡಮ್ಮ ಹೇಗಾಡ್ತಾನೆ?"

"ಅವನಿಗೂ ಬೇಜಾರಾಗಿದೆ. ನಿಂಗೆ ಅರ್ಥ ಆಗಲ್ವಾ ವಿಜಿ....."

"ಹೋಗ್ಲಿ ಬಿಡಮ್ಮ, ಬನ್ನಿ ಸೀಮಾ..... ಕೂತ್ಕೊಂಡು ಮಾತಾಡೋಣ. ನಿಮ್ಮ ವಿಷಯ ಹೇಳಿ. ನಿಮ್ಮ ಕೆಲಸ ಹೇಗಿದೆ? ನಿಮಗೆ ಯಾರ್ಯಾರು ಸ್ನೇಹಿತರಿದ್ದಾರೆ? ನಿಮ್ಮ ಪೇರೆಂಟ್ಸ್ ಬಗ್ಗೆ ಹೇಳಿ..." ಎಂದು ಹೇಳುತ್ತಾ ತಾನು ರೂಮಿನೊಳಕ್ಕೆ ನಡೆದಳು.

ಶಶಾಂಕ ಸೀಮಾಳ ತೋಳು ಹಿಡಿದ. "ವಿಜಿ ಏನೇನೋ ಕೇಳಿದ್ರೆ ಬೇಜಾರು ಮಾಡ್ಕೋಬೇಡಿ. ನಿಮ್ಮ ಅಸಹಾಯಕತೆ ತೋರಿಸ್ಕೋಬೇಡಿ. ಎಲ್ಲಾದಕ್ಕೂ ನನ್ನನ್ನ ಕೇಳೂದಕ್ಕೆ ಹೇಳಿ. ನಾನು ಅವಳಿಗೆ ಉತ್ತರ ಕೊಡ್ತೀನಿ."

"ಬೇಗ ಇಲ್ಲಿಂದ ಹೋಟೆಲ್ಲಿಗೆ ವಾಪಸ್ಸು ಹೊರಟು ಹೋಗೋಣ ಶಶಾಂಕ್, ಯಾರ ಹತ್ತಿರವೂ ಮಾತಾಡೋ ಮೂಡ್ ಇಲ್ಲ."

'ನಥಿಂಗ್ ಡೂಯಿಂಗ್, ನಾನು ಬಂದಿರೋದೇ ನಿಮ್ಮಿಬ್ಬರ ಹತ್ತಿರ ಮಾತಾಡೋಕೆ. ವಾಪಸ್ಸು ಹೋಗೋಕೆ ಬಿಟ್ಟು ಬಿಡ್ತೀನಾ? ಇಲ್ಲೇ ಮಲ್ಕೊಳಿ, ನಿದ್ದೆ ಬರೋವರ್ಗೂ ಮಾತಾಡೋಣ. ಶಶಾಂಕ ನಿಂಗೇನೋ ಹೆದರಿಕೆ? ಅತ್ತಿಗೆ ನಾದಿನಿ ಮಧ್ಯೆ ನೀನೇ ಬಿರುಕು ತಂದು ಹಾಕ್ತೀಯಾ?"

"ಇಲ್ಲ ಹಾಗಲ್ಲ ವಿಜಿ. ಅವರು ಈಗಿನ್ನೂ ಹೊಸ್ದಾಗಿ ಈ ಮನೆಗೆ ಬಂದಿದಾರೆ. ಅಡ್ಜಸ್ಟ್ ಆಗೋಕೆ ಸಮಯ ಬೇಡ್ವಾ! ನೀನು ಹೆದರಿಸ್ತೀಯ."

"ನಾನೂ ಇನ್ನೊಬ್ಬರ ಮನೆಗೆ ಸೊಸೆಯಾಗಿ ಹೋದೋಳು.... ಅತ್ತೆ ಮನೇಲಿ ಅತ್ತಿಗೆ ನಾದಿನಿಯರ ಜೊತೆ ಹೇಗಿರ್ಬೇಕು ಅಂತ ನಂಗೊತ್ತು. ಸ್ನೇಹಿತೆಯರ ಥರ ಇರ್ಬೇಕು...."

"ಗೊತ್ತು.... ಗೊತ್ತು.... ನಿನ್ಹತ್ರ ಮಾತಾಡಿ ಗೆಲ್ಲುಕ್ಕೆ ಆಗುತ್ತಾ? ನಾನು ಮೊದಲೇ ಟೆನ್ಷನ್‌ನಲ್ಲಿ ಒದ್ದಾಡ್ತಿದೀನಿ. ಏನಾದ್ರೂ ಮಾಡ್ಕೋ" ಅಲ್ಲಿಂದ ಸರಿದು ಮಹಡಿಯನ್ನು ಏರಿದ್ದ.

"ಅವನಿಗ್ಯಾಕೆ ಬೇಜಾರು ಮಾಡ್ತೀಯ ವಿಜಿ.... ರೇಣುಕಾಳನ್ನು ಕಳೆದ್ಕೊಂಡು ದುಃಖದಲ್ಲಿದ್ದಾನೆ. ಸೀಮಾ ಈಗ ಇವನ ಪತ್ನಿ. ಇಬ್ಬರೂ ಅನ್ಯೋನ್ಯವಾಗಿದ್ರೆ ಈ ದುಃಖದಿಂದ ಆದಷ್ಟು ಬೇಗ ಹೊರಬರ್ತಾನೆ."

"ಸೀಮಾ ಹೋಗಿ ಅವನಿಗೆ ಪೂಸಿ ಹೊಡೆದು ಅವನನ್ನು ಕೆಳಕ್ಕೆ ಕರ್ಕೊಂಡ್ಬನ್ನಿ. ಇಲ್ದಿದ್ರೆ ಅಮ್ಮ ನನ್ನನ್ನ ಬೈತಾನೇ ಇರ್ತಾಳೆ." ಸೀಮಾ ಅನುಮಾನಿಸುತ್ತಾ ಮಹಡಿಯನ್ನೇರಿದಳು. ವಿಜಯ ಅಮ್ಮನ ಬಳಿಗೆ ಬಂದಳು.

"ಅಮ್ಮಾ ನೀವುಗಳು ದುಡುಕ್ಬಿಟ್ರಿ ಅಂತ ಅನ್ನುತ್ತೆ. ಶಶಾಂಕ ಮನಃಪೂರ್ತಿಯಾಗಿ ಸೀಮಾಳನ್ನು ಹೆಂಡ್ತಿ ಅಂತ ಒಪ್ಕೊಳ್ಳೋಕೆ ಆಗುತ್ತಾ? ಅವಳು ಗೌತಮನ ಜೊತೆ ತಿರುಗಾಡಿದೋಳು.... ಅವನನ್ನು ಅಷ್ಟೇ ಸುಲಭವಾಗಿ ಮರೆತು ಬಿಡ್ತಾಳಾ? ಅವಳ ಪ್ಲಾನ್ ಬೇರೆಯೇ ಏನೋ ಇದೆ ಅಂತ ನನಗನ್ನಿಸ್ತಿದೆ. ಶಶಾಂಕನನ್ನು ಈ ಕೇಸ್ನಲ್ಲಿ ಸಿಕ್ಕಿ ಹಾಕಿಸ್ಬಿಟ್ರೆ.... ಏನಮ್ಮ ಗತಿ?

"ಈಗ ಹೀಗೆ ಹೇಳ್ತೀಯಲ್ಲೇ ವಿಜಿ? ಆಗ ಏನಾಗಿತ್ತು ನಿಂಗೆ? ಗೌತಮನ ಮೇಲೆ ಪ್ರತೀಕಾರ ತಗೋಬೇಕು.... ಹಾಗೆ ಹೀಗೆ ಅಂತ ಹೇಳ್ದೆ..."

"ಆಮೇಲೆ ನಿಧಾನವಾಗಿ ಯೋಚಿಸ್ದಾಗ ಹೀಗನ್ನಿಸ್ತು.... ಈಗಲೂ ಸಮಯ ಮೀರಿಲ್ಲ. ಗೌತಮನ್ನ ಈಗ್ಲೂ ಪ್ರೀತಿಸ್ತಿದಾಳಾ ಅಥವಾ ಇಲ್ವಾ ಅಂತ ನಾನು ಪತ್ತೇ ಹಚ್ತೀನಿ. ನಾನು ಸೀಮಾಳ ಹತ್ತಿರ ಸ್ನೇಹಿತೆಯ ಥರ ಮಾತಾಡ್ತೀನಿ. ಅವಳೇನಾದ್ರೂ ಈಗ್ಲೂ ಅವನನ್ನೇ ಪ್ರೀತಿಸ್ತಿತ್ರೆ ಶಶಾಂಕ ಸುಖವಾಗಿರಲ್ಲಮ್ಮ.... ಅವನು ಮೊದಲೇ ಕುಗ್ಗಿ ಹೋಗಿದಾನೆ."

"ಈಗ ಏನ್ಮಾಡೋದೇ?.... ಶಶಿ ಅವಳನ್ನೇ ಮದುವೆಯಾಗ್ತೀನಿ ಅಂತಂದಾಗ, ನಾವೂ ಒಪ್ಪಿಬಿಟ್ವೆವು. ಹೆಂಡ್ತಿ ಬಂದ್ರೆ ಅವನ ದುಃಖ ಕಡಿಮೆ ಆಗುತ್ತೆ ಅಂತ ಅಂದ್ಕೊಂಡೆ."

"ಅದಕ್ಕೆ ಸೀಮಾನೇ ಆಗ್ಬೇಕಾಗಿತ್ತಾ!"

"ಬೇರೆ ಹೆಣ್ಣು ಎಲ್ಲಿ ಸಿಗ್ತಿತ್ತೆ! ಇವನ ಮೇಲೆ ಆರೋಪ ಇರುವಾಗ?"

"ಆರೋಪ ಇದ್ದ ಮಾತ್ರಕ್ಕೆ.... ಇವನೇನು ಅಪರಾಧಿ ಆಗಿಬಿಡ್ತಾನಾ? ಹಾಗೇ ಗೌತಮನೂ ಅಪರಾಧ ಮಾಡಿಲ್ಲದಿರಬಹುದು. ಅವನು ಹೆದರಿರಬಹುದು. ಯಾರೋ ಹೆದರಿಸಿರಬಹುದು. ಅವನು ಈ ಆಪಾದನೆಗಳಿಂದ ಹೊರಬಂದ ಮೇಲೆ ಗೌತಮ ಸೀಮಾ ಮತ್ತೇ ಒಂದಾಗದೇ ಇರ್ತಾರಾ?"

"ಏನೇನೋ ಆಡಿ ಹೆರಿಸಬೇಡ್ವೇ.... ಶಶಾಂಕನ ಜೀವನ ಈಗಾಗ್ಲೇ ಹಾಳಾಗಿದೆ."

"ಹಾಳಾಗ಼್ಬಾರ್ದು, ಸರಿಯಾಗಿರ್ಬೇಕು ಅಂತ ನಂಗೂ ಅನ್ಸುತ್ತಮ್ಮ. ಅದಕ್ಕೇ ಈಗಲೇ ಎಲ್ಲವನ್ನೂ ಸರಿ ಮಾಡ್ಬೇಕು. ಆ ಕೆಲಸವನ್ನೂ ನಾನು ಮಾಡ್ತೀನಿ."

"ಏನೋ ಮಾಡೋಕ್ಕೆ ಹೋಗಿ ಏನೋ ಆಗ್ಬಾರ್ದು. ಸೀಮನ್ನ ನಾನು ದೊಡ್ಡ ಮನಸ್ಸು ಮಾಡಿ ಸೊಸೆ ಅಂತ ಒಪ್ಕೊಂಡಿದೀನಿ. ಅವಳೇನಾದ್ರೂ ಶಶಾಂಕನಿಗೆ ಮೋಸ ಮಾಡ್ತಾಳೆ ಅಂತ ತಿಳಿದ್ರೆ ನಾನು ಅವಳನ್ನ ಸುಮ್ಮನೇ ಬಿಡಲ್ಲ."

"ಅವಳು ಗೌತಮನ ಜತೆ ಶಾಮೀಲಾಗಿದಾಳೋ ಇಲ್ವೋ ಅಂತ ಮೊದಲು ತಿಳ್ಕೋಬೇಕು. ಶಶಾಂಕ ಬೆಪ್ಪನಾಗಿ ಬಿಟ್ಟಿದಾನೆ ಅಂತ ಅನ್ನಿಸ್ತಿದೆ. ನಾನು ಸೀಮಳ ಹತ್ರ ಮಾತಾಡಿ, ಅವಳ ಮನಸ್ನಲ್ಲಿ ಏನಿದೆ ಅಂತ ತಿಳ್ಕೋತೀನಿ. ನೀನು ನಿಶ್ಚಿಂತೆಯಾಗಿರು. ಶಶಾಂಕನ್ನ ಏನೂ ಕೇಳ್ಬೇಡ."

"ಆಗ್ಲಿ ಕಣೇ, ನನ್ನ ತಲೆ ಓಡ್ತಾನೇ ಇಲ್ಲ. ಸುಧಾಮ, ರಂಗಣ್ಣ ಬಂದು ಬಾಯಿಗೆ ಬಂದ್ಹಾಗೆ ಮಾತಾಡಿದ್ರು. ಅವರ ಮುಖಕ್ಕೆ ಮಸಿ ಬಳೀಬೇಕು ಅಂತ ಆತುರಪಟ್ಬಿಟ್ಟೆ. ಅಲ್ಲದೇ ಸೀಮಾನ ತಂದೆ ತಾಯಿ ಒಂಥರಾ ವಿಚಿತ್ರವಾದ ಜನರು. ಮಗಳ ಮೇಲೆ ವ್ಯಾಮೋಹನೇ ಇಲ್ಲ. ಮೊದಲು ಗೌತಮನ ಜೊತೆ ತಿರುಗಾಡಕ್ಕೆ ಬಿಟ್ರು... ಈಗ ಶಶಾಂಕನ ಮದುವೆಯಾಗ್ತೀನಿ ಅಂತಂದ್ರೆ ಹೂಂ ಅಂದು ಬಿಡೋದ.

ಮರ್ಯಾದೆ, ಜವಾಬ್ದಾರಿ ಏನೂ ಬೇಡ್ವಾ?"

"ಮಗಳನ್ನ ಸುಲಭವಾಗಿ ಕಳಚಿಕೊಳ್ಳುವ ಜನ ಅವರು. ಅವರಿಗೂ ಗೊತ್ತಾಗ್ಬೇಕು ನಾವು ಮೂಢರಲ್ಲ ಅಂತ.... ಅವರಿಗೂ ಬುದ್ಧಿ ಕಲಿಸ್ಬೇಕು.... ಅದೇನು ಮೇಲೆ ಹೋದೋರು ಇಬ್ಬರೂ ಕೆಳಗಿಳಿದು ಬರ್ಲೇ ಇಲ್ಲ. ಹೋಗಿ ನೋಡ್ಕೊಂಡು ಬರ್ತೀನಿ." ಹೊರಟವಳನ್ನು ತಾಯಿ ತಡೆದಳು.

"ಬೇಡ್ವೇ..... ಹೊಸ್ದಾಗಿ ಮದುವೆಯಾದವರು. ಶಶಾಂಕ ಸಿಟ್ಟು ಮಾಡ್ಕೋತಾನೆ. ನಮಗೆ ತಾನೇ ಇನ್ಯಾರಿದಾರೆ ಅವನನ್ನ ಬಿಟ್ರೆ! ಅವನು ಸುಖವಾಗಿರಲಿ ಅಂತಷ್ಟೇ ನಾನು ಬಯಸೋದು. ಊಟ ಆಗ್ಲಿ, ಆಮೇಲೆ ಸೀಮನ ಹತ್ತಿರ ನಯವಾಗಿ ಮಾತಾಡು. ಎಡವಟ್ಟಾಗುವಂತೆ ಏನೇನೋ ಮಾಡ್ಬೇಡ....."

"ಇಲ್ಲಮ್ಮ ನಿನಗೆ ನನ್ಮೇಲೆ ನಂಬ್ಕೆ ಇಲ್ವಾ?" ಎನ್ನುತ್ತಾ ಆಚೆ ಬಂದಳು. ಅಲ್ಲಿಯೇ ಟಿವಿ ನೋಡುತ್ತಾ ಕುಳಿತದ್ದ ಮಗಳಿಗೆ ಹೇಳಿದಳು, " ಮಾಲೀ ಹೋಗಿ, ಅತ್ತೇನಾ ಮಾವನ್ನು ಊಟಕ್ಕೆ ಬರ್ಬೇಕಂತೆ ಕರೆದು ಬಾ." ಅಷ್ಟರಲ್ಲಿ ಸೀಮಾ ಶಶಾಂಕ ಇಳಿದು ಬರುತ್ತಿರುವುದನ್ನು ಕಂಡು ನಗುಮುಖ ಮಾಡಿದಳು.

"ಮುಗೀತಾ ಸರಸ? ಅಲ್ರೀ ಸೀಮಾ, ಶಶಾಂಕನಿಗೆ ಸಮಾಧಾನ ಹೇಳಿ ಕರ್ಕೊಂಡ್ಬನ್ನಿ ಅಂತ ಹೇಳಿದ್ರೆ ಇಷ್ಟೊತ್ತು ಏನ್ಮಾಡ್ತಿದ್ರೀ... ಇಬ್ಬರೂ ಮಾತನಾಡದೇ ಕೆಳಗಿಳಿದು ಬಂದಾಗ ಸುಮ್ಮನಾದಳು. ತಾಯಿ ತಟ್ಟೆಗಳನ್ನು ಹಾಕಿ ಎಲ್ಲರನ್ನೂ ಊಟಕ್ಕೆ ಎಬ್ಬಿಸಿದಳು. ಮೌನವಾಗಿ ಊಟವನ್ನು ಮಾಡಿ ಎದ್ದರು. ವಿಜಯ ಮಕ್ಕಳಿಗೆ ಹಾಸಿಗೆಯನ್ನು ಹಾಸಿಕೊಟ್ಟು ಮಲಗಿಸಿ, ಹೊರಗೆ ಬಂದು ಕುಳಿತಳು. ಅಲ್ಲಿಯೇ ಕುಳಿತಿದ್ದ ಶಶಾಂಕ ಮತ್ತೆ ಮಹಡಿಯನ್ನೇರಿದ. ಸೀಮಾ ಅಲ್ಲೇ ಉಳಿದಳು.

"ಸೀಮಾ, ಏನನ್ನುತ್ತೆ ಈ ಮನೇಲಿ? ಶಶಾಂಕ ಚೆನ್ನಾಗಿ ನೋಡ್ಕೋತಾನಾ? ವಿಜಯ ಕೇಳಿದಾಗ, ಸೀಮಾ ಅವಳನ್ನೇ ದಿಟ್ಟಿಸಿದಳು.

"ಹೂಂ ಶಶಾಂಕ್ ತುಂಬಾ ಒಳ್ಳೆಯವರು...." ಕೆಳದನಿಯಲ್ಲಿ ನುಡಿದಳು.

"ಹೌದು ಶಶಾಂಕ ಒಳ್ಳೆಯವನು. ಆದರೆ ಗೌತಮ ಇವನಿಗೆ ಹೀಗೆ ಅನ್ಯಾಯ ಮಾಡಬಾರ್ದಾಗಿತ್ತು..... ಅಲ್ವಾ? ಸೀಮಾಳ ಮುಖ ಕಪ್ಪಿಟ್ಟಿತು. ಸೀಮಾ ಗೌತಮನ ಆಪ್ತ ಗೆಳತ್ತಿಯಾಗಿದ್ರಿ ನೀವು. ಅವನು ನಿಮ್ಮನ್ನೇ ಮದುವೆಯಾಗ್ಬೇಕು ಅಂತಿದ್ದ. ಆದರೆ ಯಾಕೆ ಹೀಗ್ಮಾಡ್ದ? ರೇಣುಕಾಳ ಮೇಲೆ ಏನು ದ್ವೇಷ? ನಿಮಗೇನಾದ್ರೂ ಹೇಳಿದ್ನಾ? ಶಶಾಂಕನ ಮೇಲೆ ದ್ವೇಷ ಇತ್ತಾ?"

"ಇಲ್ಲ... ಈ ವಿಷಯದಲ್ಲಿ ನನಗೇನೂ ಗೊತ್ತಿಲ್ಲ" ತೊದಲಿದಳು.

"ನಿಜ ಹೇಳಿ ಸೀಮಾ... ಅವನ ತಪ್ಪನ್ನು ಮುಚ್ಚಿಡಲು ಏನೋ ಪ್ರಯತ್ನ ಪಡ್ತಿದೀರಿ ಅಂತ ಅನ್ನಿಸ್ತಿದೆ. ಇಲ್ದಿದ್ರೆ ಶಶಾಂಕನನ್ನು ಮದುವೆಯಾಗೋಕೆ ನೀವು

ಒಪ್ತಿರಲಿಲ್ಲ."

"ಅಂದರೆ...? ಯಾಕೆ ಹೀಗೆ ಕೇಳ್ತಿದೀರಿ!...."

"ಒಳಗೆ ಹೋಗಿ ಮಾತನಾಡೋಣ ಬನ್ನಿ. ನನಗೆ ಕೆಲವು ವಿಷಯಗಳು ಕ್ಲಿಯರ್ ಆಗ್ಬೇಕು...." ವಿಜಯ ಎದ್ದಳು. ಸೀಮಾ ಅವಳನ್ನನುಸರಿಸಿದಳು. ಶಶಾಂಕನ ಅನುಮಾನ ನಿಜ, ಕೇಳಿದಕ್ಕೆ ನಾನು ಧೈರ್ಯವಾಗಿ ಉತ್ತರಿಸ್ಬೇಕು ಎಂದುಕೊಂಡಳು. ರೂಮಿನ ಬಾಗಿಲನ್ನೂ ಭದ್ರಪಡಿಸಿದ ವಿಜಯ ಮಂಚದ ಮೇಲೆ ಕುಳಿತಳು ಸೀಮಾ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತಳು.

"ಸೀಮಾ ನೇರವಾಗಿ ಕೆಲವು ಪ್ರಶ್ನೆಗಳನ್ನು ಕೇಳ್ತೀನಿ. ನನಗೆ ನಿಜವಾದ ಉತ್ತರ ಬೇಕು."

"ಹೂಂ.. ಕೇಳಿ."

"ಗೌತಮನನ್ನು ಅಷ್ಟೇ ಪ್ರೀತಿಸ್ತಿದ್ದೋರು, ಅಷ್ಟು ಸುಲಭವಾಗಿ ಅವನನ್ನು ಮರೆಯೋಕೆ ಆಗುಲ್ಲ ಅಂತ ನಂಗೂ ಗೊತ್ತು. ನಿಮಗೂ ಗೊತ್ತು. ಅವನು ನಿರಪರಾಧಿ ಅಂತ ಸಾಬೀತಾದರೆ, ನೀವು ಮತ್ತೆ ಗೌತಮನ ಬಳಿಗೆ ಹೋಗ್ತೀರಿ ಅಲ್ವಾ?"

ಸೀಮಾ ಒಂದು ಗಳಿಗೆ ಅನುಮಾನಿಸಿದಳು, "ಏನೋ ನಂಗೊತ್ತಿಲ್ಲ" ಎಂದಳು.

"ಏನು ಗೊತ್ತಿಲ್ಲ ಅಂತಂದ್ರೆ? ನೀವು ಚಿಕ್ಕ ಮಗುವಲ್ಲ. ನಿಮ್ಮ ತಂದೆಯ ಮಾತನ್ನು ವಿರೋಧಿಸಿ, ಗೌತಮನ ಒಡನಾಟವನ್ನು ಇಟ್ಕೊಂಡಿದ್ರಿ. ಈಗ ತಂದೆ ತಾಯಿಯನ್ನು ಬಿಟ್ಟು ಏಕಾ ಏಕಿ ಹಿಂದೆ ಮುಂದೆ ಗೊತ್ತಿಲ್ಲದ ಶಶಾಂಕನ ಮದುವೆ ಯಾಗಿ ಇಲ್ಲಿದೀರಿ. ಇದೆಲ್ಲಾ ಹೇಗೆ ಸಾಧ್ಯವಾಯಿತು....?

"ಶಶಾಂಕ ಮದುವೆಯಾಗ್ತೀಯ ಅಂತ ಕೇಳಿದ್ರು...?

"ಕೇಳ್ಬಿಟ್ರೆ! ಇದೇನಾ ನಿಮ್ಮ ಪ್ರೀತಿ! ಅವನು ಅಪರಾಧ ಮಾಡಿರಬಹುದು ಅಂತ ನಿಮಗೂ ಅನುಮಾನಾನಾ?"

"ಅವನು ಓಡಿ ಹೋಗಿ ತಲೆ ಮರೆಸಿಕೊಳ್ಳದೇ ಇದ್ದಿದ್ರೆ... ನಂಗೆ ಈ ಅನುಮಾನ ಬರ್ತಿರ್ಲಿಲ್ಲ... ಅಲ್ಲದೇ ಅವನ ತಂದೆ ತಾಯಿಯ ಪರಿಚಯವೂ ನನಗಿಲ್ಲ. ಅಲ್ಲದೇ ಅವರ ತಾಯಿಗೆ ನಾನು ಇಷ್ಟವಾಗಿರಲಿಲ್ಲ ಅಂತ ಅವನು ಹೇಳಿದ್ದ."

"ಅವನ ತಂದೆ ತಾಯಿ ಒಪ್ಪಿಗೆ ಕೊಟ್ಟಿದ್ರೆ ನೀವು ಅವನ ಮನೇಲಿ ಹೋಗಿ ಇರ್ತಿದ್ರಾ? ನೀವ್ಯಾಕೆ ನಿಮ್ಮ ತಾಯಿಯ ಮನೇಲಿ ಇಲ್ಲ!... ನೀವೇನಾದ್ರೂ ಗೌತಮನ್ನ ಗುಟ್ಟಾಗಿ ಮದುವೆಯಾಗಿದ್ರಾ?

"ಇಲ್ಲ" ತಟ್ಟನೆ ನುಡಿದಳು.

"ಮತ್ಯಾಕೆ ಇಲ್ಲಿದೀರಿ! ಗೌತಮನ್ನ ಮರೆಯೋಕೆ ಆಗ್ದಿದ್ದ ಮೇಲೆ ಈ ನಾಟಕ ಯಾಕೆ? ಶಶಾಂಕನ ಮೇಲ್ಯಾಕೆ ಸೇಡು ತೀರಿಸ್ಕೊಳ್ತಿದೀರಿ...."

"ಇಲ್ಲ, ನಾನ್ಯಾಕೆ ಸೇಡು ತೀರಿಸಿಕೊಳ್ಳಲಿ....?"

"ಆದರೆ ಇದು ಪ್ರೀತಿಯೂ ಅಲ್ಲ, ರೇಣುಕಾಳ ಪತಿಯಾಗಲಿದ್ದವನು ಅಂತ ತಿಳಿದೂ, ಅವನ ಪತ್ನಿಯಾಗಿ ಬಂದು ಇಲ್ಲಿರುವ ಉದ್ದೇಶ!.... ನಿಮಗೆ ಏನೂ ಅನ್ನಿಸೋಲ್ವಾ?"

"ನಾನು ನನ್ನ ರಕ್ಷಣೆಗೋಸ್ಕರ ಇಲ್ಲಿದೀನಿ. ನನಗೆ ಗೌತಮನ ಮನೆಯವರ ಮೇಲೆ ನಂಬಿಕೆ ಇಲ್ಲ. ಅವರು ನನಗೆ ಏನಾದರೂ ಕೇಡು ಮಾಡಬಹುದು ಅಂತ ಭಯ."

"ಅವನೇ ಇಲ್ಲಿ ಇಲ್ಲದಿರುವಾಗ ನಿಮಗೆಂಥ ಭಯ? ಯಾರಾದ್ರೂ ಬೆದರಿಕೆ ಹಾಕಿದ್ರಾ!...."

"ಈ ನೆಪದಲ್ಲಿ ಗೌತಮನನ್ನ ಅವರೇ ಎಲ್ಲಿಯಾದರೂ ಅಡಗಿಸಿಟ್ಟಿರಬಹುದು ಅನ್ನುವ ಅನುಮಾನ ನನಗಿತ್ತು. ಅವನು ಪದೇ ಪದೇ ಫೋನು ಮಾಡಿ ಬಂದು ಬಿಡು ಅಂತ ಹೇಳ್ತಿದ್ದ."

"ನೀವು ಸುಳ್ಳು ಹೇಳ್ತಿದೀರಿ.... ಅವನನ್ನು ಈಗ ಪೋಲೀಸರು ಅರೆಸ್ಟ್ ಮಾಡಿದಾರೆ.... ಸರ್ಕಾರಿ ಆಸ್ಪತ್ರೇಲಿದಾನಂತೆ. ನೀವು ನೋಡಕ್ಕೆ ಹೋಗಲಿಲ್ವಾ? ಅಥವಾ ಅವನ ಸಹವಾಸ ಈಗ್ಯಾಕೆ ಅಂತ ಸುಮ್ಮನಾಗಿಬಿಟ್ರಾ?"

"ಹೋಗಿ ನೋಡ್ಬೇಕು ಅಂತ ಅನ್ಸುತ್ತೆ. ಆದರೆ ಶಶಾಂಕ ಏನಂತಾರೋ ಅಂತ ಯೋಚನೆಯಾಗಿದೆ. ನಾನೀಗ ಶಶಾಂಕನ ಪತ್ನಿ ಅಂತ ತಿಳಿದಿರುವ ಅವನು ಏನು ಬೆದರಿಕೆ ಹಾಕ್ತಾನೋ ಅಂತ ಭಯ ಆಗುತ್ತೆ...."

"ಆದರೂ ಅವನನ್ನು ಮರೆಯಕ್ಕೆ ಆಗಲ್ಲ ಅಲ್ವಾ!.... ಇದನ್ನೇ ಫಸ್ಟ್ ಲವ್ ಅನ್ನೋದು. ನೀವು ಮನಃಪೂರ್ವಕವಾಗಿ ಅವನನ್ನು ಪ್ರೀತಿಸಿದ್ರೆ ಯಾರು ನಿಮ್ಮಿಬ್ಬರ ಮಧ್ಯೆ ಅಡ್ಡಿ ಬರಲ್ಲ. ಒಮ್ಮೆ ಅವನನ್ನು ಮೀಟ್ ಮಾಡಿ ಮಾತಾಡಿ. ಅವನ ಮನಸ್ನಲ್ಲಿ ಏನಿದೆ ಅಂತ ಖಂಡಿತಾ ತಿಳಿಯುತ್ತೆ. ನಿಮ್ಮ ಹತ್ತಿರ ನಿಜವನ್ನ ಹೇಳಿದರೂ ಹೇಳಬಹುದು. ಆಗ ಅಪರಾಧಿಯೋ, ನಿರಪರಾಧಿಯೋ ಅಂತ ನಿಮಗೇ ಗೊತ್ತಾಗುತ್ತೆ. ನಿರಪರಾಧಿ ಆಗಿದ್ದರೆ ಆಗ ಶಶಾಂಕ ಅವನಾಗಿಯೇ ನಿಮ್ಮನ್ನ ಅವನ ಬಳಿಗೆ ಕಳಿಸಿಕೊಡ್ತಾನೆ. ಶಶಾಂಕ ಬೇರೆಯವರ ಸ್ವತ್ತನ್ನು ಬಲವಂತದಿಂದ ಇಟ್ಟುಕೊಳ್ಳುವವನಲ್ಲ."

"ಹೌದು ಈ ಬಗ್ಗೆ ಮೊದಲೇ ಹೇಳಿದಾರೆ. ನನಗೆ ರಕ್ಷಣೆ ಕೊಡುವ ಇಚ್ಛೆಯಿಂದ ನನ್ನನ್ನು ಮದುವೆಯಾಗಿದಾರೆ.

"ಐ ಸೀ... ಈ ಅನುಮಾನ ನನಗೆ ಮೊದಲೇ ಇತ್ತು. ನಿಮ್ಮ ಬಾಯಿಂದ ನಿಜಾಂಶ ಹೊರಬಿತ್ತು. ನಾನು ನಿಮ್ಮನ್ನು ಮೆಚ್ಚಿದೆ. ರಕ್ಷಣೆ ಸಿಗುತ್ತೆ ಅಂತ ತುಂಬಾ ದಿನಗಳು ಇಲ್ಲಿ ಇರಲು ಆಗಲ್ಲ. ಈಗ ಮದುವೆ ಆಗಿದೆ ಅಂತ ಇಬ್ಬರೂ ಹತ್ತಿರವಾಗಬೇಡಿ. ಇದರಿಂದ ನಿಮಗೇ ಕೇಡು. ಶಶಾಂಕ ಸಂಯಮದಿಂದ ಇರಬಲ್ಲ. ಆ ನಂಬಿಕೆ ನನಗಿದೆ. ಆದಷ್ಟು ಬೇಗ ಗೌತಮನ ಹತ್ತಿರ ಮಾತನಾಡಿ, ಅವನ ಮನಸ್ಸಲ್ಲಿ ಏನಿದೆ ಅಂತ ತಿಳ್ಕೊಳ್ಳಿ.... ಅಲ್ಲಿಯವರೆಗೂ ಶಶಾಂಕನಿಂದ ದೂರ ಇರಿ...." ಸೀಮಾಳ ಮುಖ ಕೆಂಪಾಯಿತು. ಮೈಬಿಸಿ ಆಗಿತ್ತು. ತನ್ನ ಬಾಯಿಂದ ಇನ್ನೇನ್ನ ಹೊರಗೆಡವಿ ಬಿಡುವಳೋ ಎಂದುಕೊಂಡು ಕುರ್ಚಿಯಲ್ಲೇ ಮುಲುಕಾಡಿದಳು.

"ಏನು ಸೀಮಾ ಏನಾಗ್ತಿದೆ? ಆರ್ ಯೂ ಆಲ್‌ರೈಟ್!"

"ಏನಿಲ್ಲ, ಐ ಆಮ್ ಆಲ್‌ರೈಟ್."

"ಗೌತಮನ ನೆನಪನ್ನು ಕೆದಕಿದೆ. ಅವನು ನಿಜವಾಗಿಯೂ ನಿಮ್ಮನ್ನು ಆಳವಾಗಿ ಪ್ರೀತಿಸೋದಾದ್ರೆ, ನೀವು ಬೇರೆಯವರನ್ನು ಮದುವೆಯಾಗುವುದನ್ನು ಅವನು ಒಪ್ಪಲಾರ... ಶಶಾಂಕನನ್ನು ಮದುವೆಯಾಗಿದೀರಿ ಅಂತ ತಿಳಿದ್ರೆ ಏನು ರಂಪ ಮಾಡ್ತಾನೋ! ಇರಲಿ. ಅವನು ಏನೇ ಹೇಳಿದ್ರೂ ಅವನ ಮಾತಿಲ್ಲ ಇಲ್ಲ ಅನ್ಬೇಡಿ. ಒಪ್ಕೊಳ್ಳಿ, ಇದರಿಂದ ಅವನ ನಿಜ ಬಣ್ಣ ಬಯಲಾಗುತ್ತೆ. ಆಗ ನೀವೂ ನೆಮ್ಮದಿಯಿಂದ ಇರಬಹುದು. ಇಲ್ಲದಿದ್ದರೆ ನಿಮಗೆ ಎಲ್ಲಿಯೂ ನೆಮ್ಮದಿ ಸಿಗುವುದಿಲ್ಲ, ತಿಳೀತಾ?"

"ಹೌದು ವಿಜಯ, ನಾನೂ ಯೋಚಿಸಿ ಯೋಚಿಸಿ ಸುಸ್ತಾಗಿದೀನಿ. ನನ್ನ ಆರೋಗ್ಯವೇ ಕೆಟ್ಟು ಹೋಗಿದೆ."

"ನಾನು ಶಶಾಂಕನಿಗೆ ಹೇಳ್ತೀನಿ, ಅವನು ನಿಮ್ಮನ್ನು ಗೌತಮನ ಬಳಿಗೆ ಕರೆದ್ಕೊಂಡು ಹೋಗ್ತಾನೆ. ಧೈರ್ಯವಾಗಿರಿ. ನೀವು ಈ ಅಪರಾಧಗಳಲ್ಲಿ ಶಾಮೀಲಾಗಿಲ್ಲದಿದ್ದರೆ ನಿಮಗ್ಯಾಕೆ ಭಯ?"

"ನಾನು ಅವನ ಅಪರಾಧಗಳಲ್ಲಿ ಶಾಮೀಲಾಗಿಲ್ಲ. ಆದರೆ ಅವನನ್ನು ಪ್ರೀತಿಸಿದ್ದೇ ಒಂದು ಅಪರಾಧವಾಗಿದೆ. ಅವನನ್ನು ಮರೆಯಲಾರೆ. ಶಶಾಂಕನಿಗೆ ದ್ರೋಹ ಮಾಡಲಾರೆ. ಆದಷ್ಟು ಬೇಗ ಈ ಗೊಂದಲಗಳಿಗೆ ಒಂದು ಪರಿಹಾರ ಸಿಕ್ಕರೆ ಸಾಕಾಗಿದೆ. ನಿಮ್ಮ ಹತ್ತಿರ ಮಾತನಾಡಿದ್ಮೇಲೆ ಎಷ್ಟೋ ಸಮಾಧಾನವಾಗಿದೆ. ಶಶಾಂಕನ ಹತ್ತಿರ ಹೀಗೆ ಮುಕ್ತವಾಗಿ ಮಾತನಾಡಲು ಸಾಧ್ಯವಾಗೋದೇ ಇಲ್ಲ. ವಾಣಿ ನನ್ನ ಆಪ್ತ ಸ್ನೇಹಿತೆ, ಎಷ್ಟೋ ವಿಷಯಗಳಲ್ಲಿ ನನಗೆ ಸಲಹೆ ನೀಡಿದಾಳೆ. ಸಹಾಯ ಮಾಡಿದಾಳೆ. ಆದರೆ ಅವಳಿಗೆ ಗೌತಮನ ಮೇಲೆ ನಂಬಿಕೆ ಇಲ್ಲ.

ಶಶಾಂಕನನ್ನು ದಿಢೀರನೆ ಮದುವೆಯಾಗಲು ಅವಳೇ ಕಾರಣ....."

"ಹೋಗಲಿ ಬಿಡಿ, ಈ ಮದುವೆ ನಡೆದಿರುವುದು ಹೊರಗಿನವರಿಗೆ ಗೊತ್ತಿಲ್ಲವಲ್ಲ. ಕ್ಯಾನ್ಸಲ್ ಆಯ್ತು ಅಂತ ತಿಳಿದರೆ ಗೌತಮನಿಗೆ ಸಂತೋಷವೇ ಆಗುತ್ತೆ. ಆದರೆ ಒಂದು ಮಾತು, ಗೌತಮನ್ನ ಎದುರು ಹಾಕ್ಕೋಬೇಡಿ. ಅವನು ಹೇಳಿದ ಹಾಗೆ ಕೇಳ್ಬಿಡಿ. ಅದರಿಂದ ನಿಮಗೇ ಒಳ್ಳೇದಾಗುತ್ತೆ." ಸೀಮಾ ಅಚ್ಚರಿಯಿಂದ ಅವಳ ಕಡೆ ನೋಡಿದಳು.

ಅವಳ ಮಾತುಗಳಿಂದ ಶಶಾಂಕ ತನ್ನನ್ನು ಮದುವೆಯಾಗಿರುವುದು ಇವಳಿಗೆ ಸಮ್ಮತವಿಲ್ಲ ಎಂದು ತಿಳಿಯಿತು. ಯಾವುದೆಂದೂ ನಿರ್ಧಾರವಾಗದೇ ತಾನು ಶಶಾಂಕನ ಪತ್ನಿಯಾಗಿ ಮುಂದುವರೆಯುವುದು ಸಾಧ್ಯವಿಲ್ಲ ಎನಿಸಿತು.

"ಈಗಾಗ್ಲೇ ತುಂಬಾ ಹೊತ್ತಾಗಿದೆ, ನೀವು ಹೋಗಿ ಮಲಕ್ಕೊಳಿ. ನಾನು ಹೇಳಿದ್ದು ನೆನಪಿದೆಯಲ್ಲ. ನಿಮ್ಮ ಒಳ್ಳೇದಕ್ಕೇ ಹೇಳ್ತಿರೋದು.... ತಿಳೀತಾ" ಎಂದಳು. ಸೀಮಾ ಉತ್ತರಿಸದೆ ಹೊರಬಂದು ಒಂದು ಗಳಿಗೆ ಅನುಮಾನಿಸುತ್ತ ನಿಂತಳು. ಶಶಾಂಕ ಎಚ್ಚರವಾಗಿದ್ದರೆ, ಅವನ ಹತ್ತಿರ ಮಾತಾಡಬೇಕೆಂದುಕೊಂಡು ಮಹಡಿ ಹತ್ತಿ ಅವನು ಮಲಗಿದ್ದ ರೂಮಿಗೆ ಬಂದಳು. ಅವನು ನಿದ್ದೆ ಹೋಗಿದ್ದ. ಅವನ ಕಡೆ ನೋಡುತ್ತಾ, ಬಾಗಿಲನ್ನು ಓರೆ ಮಾಡಿ, ದೀಪವನ್ನಾರಿಸಿ, ಅವನ ಪಕ್ಕದಲ್ಲಿ ಮಲಗಿದಳು. ಅವನ ಮೆಲುವಾದ ಗೊರಕೆ ಕೇಳಿಸುತ್ತಿತ್ತು. ವಿಜಯ ಹೇಳಿದ ಮಾತುಗಳನ್ನು ಮೆಲುಕು ಹಾಕುತ್ತಾ ಗೌತಮನನ್ನು ನೆನಯುತ್ತಾ ನಿದ್ರಿಸಲು ಯತ್ನಿಸಿದಳು.

* * * *

ಬೆಳಿಗ್ಗೆ ಅವಳಿಗೆ ಎಚ್ಚರವಾದಾಗ, ಪಕ್ಕದಲ್ಲಿ ಶಶಾಂಕನಿರಲಿಲ್ಲ, ಎದ್ದು ಕೆಳಗಿಳಿದು ಹೋಗಿದ್ದ. ಅಲ್ಲಿಯೇ ಬಾತ್‌ರೂಮ್‌ನಲ್ಲಿ ಮುಖ ತೊಳೆದು ಕೆಳಗಿಳಿದು ಬಂದಳು. ಅಕ್ಕ ತಮ್ಮ ಮಾತನಾಡುತ್ತಾ ಕುಳಿತಿದ್ದುದನ್ನು ಕಂಡು ಮನಸ್ಸಿಗೆ ಹಿತವೆನಿಸಲಿಲ್ಲ. ಇವಳನ್ನು ಕಂಡು ವಿಜಯ ಹಲ್ಲು ಕಿರಿದು, "ಗುಡ್ ಮಾರ್ನಿಂಗ್ ಸೀಮಾ.... ನಿದ್ದೆ ಬಂತಾ?" ಕೇಳಿದಳು.

ಸೀಮಾ ಶಶಾಂಕನ ಕಡೆ ನೋಡಿದಳು. "ಇವರು ಯಾವಾಗ ಬಂದು ಮಲಗಿದರೋ ಗೊತ್ತಾಗ್ಲೇ ಇಲ್ಲ. ಅಷ್ಟೊತ್ತು ಏನು ಮಾತಾಡಿದ್ರಿ ನೀವಿಬ್ರು!" ಶಶಾಂಕ ಕೇಳಿದಾಗ ಸೀಮಾಳಿಗೆ ಇಬ್ಬರ ಮೇಲೂ ಕೋಪ ಬಂದಿತ್ತು. ಅತ್ತೆ ಕೊಟ್ಟ ಕಾಫಿಯನ್ನು ಕುಡಿದು ಸ್ನಾನದ ಮನೆಗೆ ನಡೆದಳು.

"ನಿನ್ನ ಹೆಂಡತಿಗೆ ಕೋಪ ಬಂದಿದೆ. ಹೊರಗೆಲ್ಲಾದ್ರೂ ಕರ್ಕೊಂಡೋಗು"

ಎಂದು ವಿಜಯ ಹೇಳಿದ್ದು ಇವಳಿಗೆ ಕೇಳಿಸಿತ್ತು. ಸ್ನಾನ ಮಾಡುತ್ತಾ ಗೌತಮನ ಬಗ್ಗೆಯೇ ಆಲೋಚಿಸಿದಳು. ತನ್ನ ಒಡಲಲ್ಲಿ ಬೆಳೆಯುತ್ತಿರುವ ಮಗು ಗೌತಮನದ್ದು ಅಂತ ತಿಳಿದರೆ ಈ ವಿಜಯ ಇನ್ನೇನು ಕಿತಾಪತಿ ಮಾಡುವಳೋ.... ಅದಕ್ಕೆ ಮೊದಲು ತಾನೊಂದು ತೀರ್ಮಾನವನ್ನು ತೆಗೆದುಕೊಳ್ಳಲೇಬೇಕೆಂದುಕೊಂಡು ನಿಧಾನವಾಗಿ ಸ್ನಾನ ಮಾಡಿ ಹೊರಬಂದಳು. ತಾಯಿ ಮಗಳು ಅಡಿಗೆ ಮನೆಯಲ್ಲಿದ್ದರು. ಶಶಾಂಕ ಎಲ್ಲಿಯೂ ಕಾಣಲಿಲ್ಲ. ಸೀದಾ ಮಹಡಿಗೆ ಬಂದಳು. ಶಶಾಂಕ ಸ್ನಾನವನ್ನು ಮುಗಿಸಿ, ಇಸ್ತ್ರಿ ಮಾಡಿದ ಬಟ್ಟೆಯನ್ನು ಧರಿಸಿ, ಕನ್ನಡಿಯ ಮುಂದೆ ನಿಂತು ತಲೆಯನ್ನು ಬಾಚಿಕೊಳ್ಳುತ್ತಿದ್ದ, ಬಾಗಿಲಲ್ಲೇ ನಿಂತವಳ ಕಡೆ ತಿರುಗಿದ.

"ಬೇಗ ಡ್ರೆಸ್ ಮಾಡ್ಕೊಳ್ಳಿ, ತಿಂಡಿ ತಿಂದು ಹೊರಗೆಲ್ಲಾದ್ರೂ ಹೋಗಿಬರೋಣ." ಆಸೆಯಿಂದ ಕೇಳಿದ.

"ಎಲ್ಲಿಗೆ? ನಿಮ್ಮಕ್ಕ, ಅವರ ಮಕ್ಕಳೂ ಬರ್ತಾರಾ?"

"ಇಲ್ಲ, ಹೋಟೆಲ್ಲಿಗೆ ಹೋಗಿ, ಖಾತಿ ಮಾಡಿ ನಮ್ಮ ಲಗೇಜುಗಳನ್ನು ತರೋಣ. ಏನಂತೀರಿ"

"ನೀವು ಹೇಗೆ ಹೇಳ್ತೀರೋ ಹಾಗೆ..." ಉದಾಸೀನವಾಗಿ ಹೇಳಿದಳು.

"ಯಾಕೆ ನನ್ಮೇಲೆ ಕೋಪಾನಾ? ಇಲ್ಲಿ ನಿಮಗೆ ಇರೋಕೆ ಇಷ್ಟವಿಲ್ಲದಿದ್ರೆ ಹೇಳಿಬಿಡಿ. ಹೋಟೆಲ್ಲಿನಲ್ಲೇ ಇರೋಣ." ಅದಕ್ಕೆ ಅವಳು ಉತ್ತರಿಸಲಿಲ್ಲ. ತನ್ನ ಬಟ್ಟೆಗಳನ್ನು ತೆಗೆದುಕೊಂಡು ಪಕ್ಕದ ರೂಮಿಗೆ ಹೊರಟು ಹೋದಳು. ಇವನು ಮನದಲ್ಲೇ ನಕ್ಕೊಂಡು ಕೆಳಗಿಳಿದ.

ಸೀಮಾಳು ಕೆಳಗಿಳಿದು ಬಂದ ಮೇಲೆ ವಿಜಯ ಎಲ್ಲರಿಗೂ ತಿಂಡಿಯನ್ನು ಕೊಟ್ಟಳು. ಸೀಮಾಳ ಕಡೆ ಪದೇ ಪದೇ ನೋಡಿದಳು "ಸೀಮಾ ನೀವು ತುಂಬಾ ಚೆನ್ನಾಗಿ ಕಾಣ್ತಿದೀರಿ, ಈ ಸೀರೆ ನಿಮಗೆ ಚೆನ್ನಾಗಿ ಒಪ್ಪುತ್ತೆ."

"ಥ್ಯಾಂಕ್ಸ್" ಎಂದಷ್ಟೇ ಹೇಳಿ, ಸೀಮಾ ತಿಂಡಿಯ ತಟ್ಟೆಗೆ ಕೈ ಹಾಕಿದಳು. ಶಶಾಂಕ ಬೇಗ ಬೇಗನೇ ತಿಂಡಿಯನ್ನು ತಿಂದು ಕೈ ತೊಳೆದು, ಕಾರನ್ನು ಷೆಡ್‌ನಿಂದ ಹೊರತರಲು ನಡೆದ.

"ನನ್ನನ್ನ ಸ್ವಲ್ಪ ಲೈಬ್ರರಿಯ ಹತ್ತಿರ ಡ್ರಾಪ್ ಮಾಡ್ತೀಯಾ?" ತಂದೆ ಕೇಳಿದರು.

"ಈಗ ನೀವೆಲ್ಲಿಗೆ ಹೋಗ್ತೀರಿ, ಮಗಳು ಮೊಮ್ಮಕ್ಕಳು ಮನೆಗೆ ಬಂದಿದಾರೆ, ಹಾಯಾಗಿ ಮನೇಲಿರಬಾರ್ದಾ?" ತಾಯಿ ಅಬ್ಬರಿಸಿದಳು.

"ಹೌದಪ್ಪಾ, ಮನೇಲೇ ಇರಿ. ಅವರಿಬ್ಬರೂ ಓಡಾಡ್ಕೊಂಡು ಬರಲಿ" ವಿಜಯಳೂ ದನಿಗೂಡಿಸಿದಳು. ಸೀಮಾ ಎದ್ದು ಕೈತೊಳೆದು ಬಂದು, ವಿಜಯಳ

ಕಡೆ ತಿರುಗಿ, ಎಲ್ಲರಿಗೂ ಕೇಳುವಂತೆ. 'ಬರ್ತೀನಿ' ಎಂದಷ್ಟೇ ಹೇಳಿ ಹೊರಬಂದಳು. ಶಶಾಂಕ ಕಾರಿನ ಬಾಗಿಲನ್ನು ತೆರೆದ, ಇವಳು ಹತ್ತಿ ಕುಳಿತಳು. ಕಾರು ಹೊರಟಿತು.

* * *

ಮೊದಲಿಗೆ ಇಬ್ಬರೂ ಪೊಲೀಸ್ ಸ್ಟೇಷನ್‌ಗೆ ಬಂದರು. ಶಶಾಂಕ ಫೈಲ್ ರಿಜಿಸ್ಟರ್‌ನಲ್ಲಿ ತನ್ನ ಸಹಿ ಹಾಕಿದ. 'ಇವಳು ಸೀಮಾ..... ಗೌತಮನ ಕಲೀಗ್.... ಇವಳು ಅವನ ಹತ್ತಿರ ಮಾತಾಡ್ಬೇಕಂತೆ. ಪರ್ಮಿಷನ್ ಬೇಕಾಗಿತ್ತು' ಕೇಳಿಕೊಂಡ. ಆ ಅಧಿಕಾರಿ ಅವಳನ್ನೇ ಮೇಲಿನಿಂದ ಕೆಳಗೆ ನೋಡಿದ.

'ಸರಿ. ಅದಕ್ಕೆ ಸಂಬಂಧಪಟ್ಟ ಅಧಿಕಾರಿಗಳ ಹತ್ತಿರ ಮಾತಾಡ್ತೀನಿ... ಅವರು ಒಪ್ಪಿಗೆ ಕೊಟ್ಟ ಮೇಲೆ ಮೀಟ್ ಮಾಡಬಹುದು' ಎಂದು ಹೇಳಿ ಫೋನನ್ನೆತ್ತಿಕೊಂಡ.

'ಶಶಾಂಕ್, ಮೊದಲೇ ನನಗ್ಯಾಕೆ ಹೇಳ್ಲಿಲ್ಲಾ?' ಆಕ್ಷೇಪಿಸಿದಳು.

'ಗೌತಮ ನಿಮ್ಮನ್ನು ನೋಡ್ಬೇಕು, ಮಾತಾಡ್ಬೇಕು, ಅಂತ ಹೇಳ್ತಾನೇ ಇದಾನಂತೆ, ಒಂದ್ಸಾರಿ ನೋಡಿ ಮಾತಾಡಿ. ಅದರಲ್ಲಿ ತಪ್ಪೇನಿದೆ?'

'ಹಾಗಲ್ಲ, ಅವನು ನಮ್ಮಿಬ್ಬರನ್ನು ಒಟ್ಟಿಗೆ ನೋಡಿ ಬಾಯಿಗೆ ಬಂದ ಹಾಗೆ ಮಾತಾಡಿದ್ರೆ ನಿಮಗೆ ಅವಮಾನ ಆಗುತ್ತಲ್ಲ ಶಶಾಂಕ್...'

'ನಾನು ಅವನ ಎದುರಿಗೆ ಬರುವುದೇ ಇಲ್ಲ, ಬೇಕಾದ್ರೆ ವಾಣಿಯನ್ನು ಕರೆದುಕೊಂಡು ಹೋಗೋಣ, ಅವನಿಗೂ ಏನೇನಿದೆಯೋ ಹೇಳಿಕೊಳ್ಳೋಕೆ...'

'ಅವನ ಮೇಲೆ ಇಮಗೆ ಕೋಪ ಇಲ್ವಾ'?

'ಕೋಪ ತಾಪ ಎಲ್ಲಾ ಇದೆ.... ಆದರೆ ಅದನ್ನೆಲ್ಲ ತೋರಿಸ್ಕೊಂಡ್ರೆ ಈಗ ಏನು ಉಪಯೋಗ ಹೇಳಿ....' ಅಷ್ಟರಲ್ಲಿ ಪೊಲೀಸ್ ಅಧಿಕಾರಿ ಕರೆದಿದ್ದರು.

'ಮಧ್ಯಾಹ್ನ ಲಂಚ್ ಸಮಯದಲ್ಲಿ ಅವನ ಹತ್ರ ಮಾತಾಡ್ಬಹುದು. ನನ್ನ ರಿಕ್ವೆಸ್ಟ್‌ಗೆ ಒಪ್ಪಿದಾರೆ. ಹತ್ತು ಹದಿನೈದು ನಿಮಿಷಗಳಲ್ಲಿ ಮಾತು ಮುಗಿಸ್ಬೇಕು.' ಇಬ್ಬರೂ ಥ್ಯಾಂಕ್ಸ್ ಹೇಳಿ ಅಲ್ಲಿಂದ ಹೊರಬಿದ್ದರು. ಕಾರನ್ನು ಹತ್ತಿದರು.

'ಈಗಿನ್ನೂ ಹತ್ತೂವರೆ ಅಷ್ಟೇ. ಯಾವುದಾದ್ರೂ ಮೂವಿಗೆ ಹೋಗೋಣ ಬರ್ತೀರಾ?' ಕೇಳಿದ.

'ನನಗೆ ಸಿನಿಮಾ ನೋಡುವ ಮೂಡ್ ಇಲ್ಲ ಶಶಾಂಕ್, ನನ್ನ ಬಾಳೇ ಒಂದು ಸಿನಿಮಾ ಕತೆ ಆಗಿದೆ.'

'ಅದಕ್ಕೆಲ್ಲ ಒಂದು ಎಂಡ್ ಬರುತ್ತದೆ. ಗೌತಮನ ಹತ್ತಿರ ಎಚ್ಚರಿಕೆಯಿಂದ ಮಾತನಾಡಿ, ಅವನ ಮನಸ್ಥಿತಿ ಯಾವ ರೀತಿಯಿಂದಲೂ ಸರಿ ಇರಲ್ಲ.'

'ನಿಮಗೆ ಬೇಡ ಅನ್ನಿಸಿದರೆ ನಾನು ಅವನನ್ನು ಮೀಟ್ ಮಾಡಲ್ಲ.'

'ಹಾಗೆ ಮಾಡ್ಬೇಡಿ, ನನ್ನ ಮೇಲೆ ಈಗಾಗ್ಲೇ ಎಷ್ಟೋ ಅಪವಾದಗಳಿವೆ. ನಮ್ಮಿಬ್ಬರದ್ದೂ ಯಾವ ತಪ್ಪೂ ಇಲ್ಲ ಅಂತ ಎಲ್ಲರಿಗೂ ತಿಳಿಯಬೇಕು. ನೀವು ಖಂಡಿತಾ ಮಾತಾಡಿ, ಎಲ್ಲಾ ಕ್ಲಿಯರ್ ಆಗುತ್ತೆ.....'

'ಒಂದು ವೇಳೆ ಅವನು ಅಪರಾಧಿ ಅಲ್ಲ ಅಂತ ಸಾಬೀತಾದರೆ ನಾನು ನಿಮ್ಮನ್ನು ಬಿಟ್ಟು ಹೋಗಬೇಕಾಗುತ್ತೆ, ಅದಕ್ಕೆ ನಿಮ್ಮ ಆಕ್ಷೇಪಣೆ ಏನೂ ಇರಲ್ವಾ?'

'ಮೊದಲು ಅವನು ನಿರಪರಾಧಿ ಅಂತ ಸಾಬೀತಾಗಲಿ, ಅದಕ್ಕಿನ್ನು ಬೇಕಾದಷ್ಟು ಸಮಯವಿದೆ. ಅಲ್ಲದೇ ನೀವು ಹೇಗೆ ನಿರ್ಧಾರ ತಗೊಳ್ತೀರೋ ಅದಕ್ಕೆ ನನ್ನ ಒಪ್ಪಿಗೆ ಇದೆ. ನನ್ನ ಸಹಕಾರವಿದೆ. ನಿಮಗೆ ಯಾವ ಆತಂಕವೂ ಬೇಡ. ಈಗ ಏನು ಮಾಡೋಣ ಹೇಳಿ. ಹೀಗೇ ಕಾರ್ನಲ್ಲಿ ಕೂತು ಮಾತಾಡ್ತಾ ಇರೋಕೆ ಆಗುತ್ತಾ?' ಅವನು ನಕ್ಕ. ಅವಳೂ ತನ್ನ ನಗೆಯನ್ನು ಸೇರಿಸಿದಳು.

'ಹೋಟೆಲ್ಲಿಗೆ ಹೋಗೋಣ. ನನಗೆ ಸ್ವಲ್ಪ ರೆಸ್ಟ್ ಬೇಕು, ಏನೋ ಹಿಂಸೆ ಆಗ್ತಿದೆ.' ಅವನು ತಟ್ಟನೆ ಅವಳ ಕಡೆ ನೋಡಿದ.

'ಡಾಕ್ಟರ ಹತ್ರ ಏನಾದ್ರೂ ಹೋಗ್ಬೇಕಾಗಿತ್ತಾ?'

'ಬೇಡ, ನಾನು ವಾಣಿ ಹತ್ರ ಸ್ವಲ್ಪ ಮಾತಾಡ್ಬೇಕು, ಹೋಟೆಲ್ಲಿಗೆ ಹೋಗೋಣ.'

'ಓ.ಕೆ. ನಿಮ್ಮಿಷ್ಟ' ಹೋಟೆಲ್ಲಿನ ಕಡೆ ತಿರುಗಿತು. ಹೋಟೆಲ್ಲಿನ ರೂಮಿನಲ್ಲಿ ಅವಳನ್ನು ಬಿಟ್ಟು ಹೊರಡುವ ಮುನ್ನ ಅವಳ ಕೈಗೆ ಮೊಬೈಲ್‌ನಿತ್ತು ಹೇಳಿದ. 'ವಾಣಿ ಹತ್ತಿರ ಏನ್ಬೇಕೋ ಅದನ್ನ ಮಾತ್ರ ಹೇಳಿ. ವಿಜಯ ಮಾತಾಡಿದ್ದನ್ನೆಲ್ಲ ಹೇಳ್ಬೇಡಿ. ವಿಜಯ ಕೆಟ್ಟೋಳಲ್ಲ, ಅವಳಿಗೂ ಗೌತಮ ಕಸಿನ್. ಆದರೂ ಅವನ ಬಗ್ಗೆ ಏನೂ ಗೊತ್ತಿಲ್ಲ. ಸುಧಾಮನಿಗೆ ಇವಳನ್ನು ತಂದ್ಕೋಬೇಕು ಅನ್ನೋ ಆಸೆ ಅತ್ತೆ ಮಾವಂಗೆ ಇತ್ತು, ಆದರೆ ವಿಜಯ ಅವನನ್ನು ಒಪ್ಪಿಲಿಲ್ಲ, ಆ ಅಸಮಾಧಾನವೂ ಅವರಿಗಿದೆ.

ಅದೇ ಕಾರಣದಿಂದ ಗೌತಮ ರೇಣುಕಾಳ ಮೇಲೆ ಸೇಡು ತೀರಿಸಿಕೊಂಡಿರ ಬಹುದೇ ಅಂತ ಅನ್ನಿಸಿದರೂ ಅದನ್ನೂ ಹೇಳಲಿಲ್ಲ. ಅವನು ಅತ್ತ ಹೋದ ಮೇಲೆ ವಾಣಿಯ ನಂಬರನ್ನು ಡಯಲ್ ಮಾಡಿದಳು.

'ವಾಣೀ, ನಾನು ಇವತ್ತು ಗೌತಮನ್ನ ಮೀಟ್ ಮಾಡೋಕೆ ಹೋಗ್ತಿದೀನಿ, ಶಶಾಂಕನೇ ಕರ್ಕೊಂಡು ಹೋಗ್ತಿದಾರೆ. ಯಾಕೋ ಗಾಬರಿ ಆಗ್ತಿದೆ.....'

'ಗಾಬರಿ ಯಾಕೆ! ಏನೂ ಆಗಿಲ್ಲ ಅನ್ನುವಂತೆ ಸಹನೆಯಿಂದ ಮಾತಾಡು.' ಆದರೆ ಮರೆತೂ ನೀನು ಪ್ರೆಗ್ನೆಂಟ್ ಆಗಿರುವ ವಿಚಾರವನ್ನು ಹೇಳ್ಬೇಡ. ಅವನು ಅಬಾರ್ಷನ್ ಮಾಡಿಸ್ಕೋ ಅಂತ ಹೇಳಬಹುದು. ನನಗೆ ನಿನ್ನ ಮಗು ಬೇಕು ಸೀಮಾ... ಹಾಗೇ ಅವನು ಹೇಳೋದನ್ನ ರೆಕಾರ್ಡ್ ಮಾಡ್ಕೋ... ಮುಂದೆ

ಉಪಯೋಗಕ್ಕೆ ಬರಬಹುದು...'

'ಅವನ ಪರವಾಗಿ ಸಾಕ್ಷಿ ಹೇಳಬೇಕಾಗಿ ಬಂದ್ರೆ! ಶಶಾಂಕ ಒಪ್ತಾನೋ ಇಲ್ವೋ?'

'ಮೊದಲು ಅವನ ಆರೋಗ್ಯ ಸುಧಾರಿಸಲಿ, ಆಮೇಲೆ ವಿಚಾರಣೆ ಪ್ರಾರಂಭ ಮಾಡುವ ಮೊದಲು, ಸಾಕ್ಷಿಗಳ ಪಟ್ಟಿಯನ್ನು ತಯಾರು ಮಾಡ್ತಾರೆ, ಆಗ ಶಶಾಂಕ ಏನು ಹೇಳ್ತಾನೋ, ಅವನ ಲಾಯರ್ ಏನು ಹೇಳ್ತಾನೋ ಹಾಗೆ ಮಾಡಿದ್ರಾಯ್ತು. ಈಗ್ಲಿಂದ ಚಿಂತೆ ಯಾಕೆ? ನೀನು ಹೆಚ್ಚುವರಿ ಮಾಡ್ಕೋಬೇಡ. ಅದು ನಿನ್ನ ಬೇಬಿ ಮೇಲೆ ಪರಿಣಾಮ ಬೀರುತ್ತೆ. ಅದ್ಸರಿ, ನಿನ್ನ ಶಶಾಂಕನ ಮ್ಯಾರೀಡ್ ಲೈಫ್ ಹೇಗಿದೆ? ನಾನು ಹೇಳಿದ್ದನ್ನ ಮರೀಬೇಡ. ಶಶಾಂಕನಿಗೆ ನಿರಾಸೆ ಮಾಡ್ಬೇಡ.'

ಸೀಮಾ ಕದಪುಗಳ ಬಿಸಿಯಾದವು. 'ಶಶಾಂಕ್ ತುಂಬಾ ಒಳ್ಳೆಯವರು ವಾಣೀ. ಅವರು ನನ್ನ ಮನಃಸ್ಥಿತಿಯನ್ನು ಅರ್ಥ ಮಾಡ್ಕೊಂಡಿದಾರೆ. ಮನಸ್ಸಿಗೆ ಬೇಜಾರಾಗುವಂಥ ಮಾತನ್ನು ಸಹ ಆಡಲ್ಲ. ಮುಂದೆ ಏನೋ ಅಂತ ನೆನೆಸ್ಕೊಂಡ್ರೆ ದಿಗಿಲಾಗುತ್ತೆ...'

'ಅಂದ್ರೇ ಗೌತಮನ್ನ ಈಗಲೂ ಪ್ರೀತಿಸ್ತೀಯ ಅಂತನ್ನು...'

ಅವನ ಪಿಂಡ ನನ್ನ ಹೊಟ್ಟೇಲಿ ಬೆಳೀತಿರುವಾಗ ಅವನನ್ನು ಹೇಗೆ ಮರೆಯಕ್ಕೆ ಆಗುತ್ತೆ? ನಾನೂ ಅವನೂ ಪ್ರೀತಿಯಿಂದ ಒಂದಾಗಿದ್ವಿ ವಾಣಿ... ಆ ಕ್ಷಣಗಳನ್ನು ಹೇಗೆ ಮರೆಯಲಿ?'

'ಮರೀಲೇಬೇಕು, ಮರೀಲೇಬೇಕು. ಇಲ್ದಿದ್ರೆ ಗೌತಮ ನಿನಗೆ ಸುಖ ನೆಮ್ಮದಿ ಇಲ್ಲದ ಹಾಗೆ ಮಾಡ್ತಾನೆ. ಈ ಮಗು ನನ್ನದು.... ಮಗು ಹೆಲ್ತಿಯಾಗಿರ್ಬೇಕು, ನಿನಗೆ ಎಲ್ಲಿಯೂ ಸರಿ ಹೋಗ್ದಿದ್ರೆ ನನ್ನ ಮನೆಗೆ ಬಂದ್ಬಿಡು. ನಾನು ನಿನ್ನನ್ನು ಚೆನ್ನಾಗಿ ನೋಡ್ಕೊಳ್ತೀನಿ. ಬೇಕಾದ್ರೆ ಶಶಾಂಕನ ಹತ್ರ ಮಾತಾಡ್ತೀನಿ.'

'ಆಗ್ಲಿ ಯೊಚಿಸ್ತೀನಿ, ಇವತ್ತು ಗೌತಮನ್ನ ಮೀಟ್ ಮಾಡದಿದ್ರೆ ನಾನು ಮತ್ತೆಂದೂ ಮೀಟ್ ಮಾಡಕ್ಕೆ ಆಗಲ್ಲ, ಅಲ್ಲಿಂದ ಬಂದ್ಮೇಲೆ ಮತ್ತೆ ಮಾತಾಡ್ತೀನಿ.'

'ಓಕೇ.... ಸೀಮಾ, ಆಲ್ ದಿ ಬೆಸ್ಟ್, ಧೈರ್ಯವಾಗಿರು.' ವಾಣಿಗೆ ಥ್ಯಾಂಕ್ಸ್ ಹೇಳಿ ಮಾತನ್ನು ಮುಗಿಸಿದಳು.

ಎಷ್ಟೋ ಹೊತ್ತಿನ ನಂತರ ಶಶಾಂಕ ಒಳಗೆ ಬಂದ, ಕೈಯಲ್ಲಿ ಒಂದಿಷ್ಟು ಬಿಸ್ಕತ್ತು, ಹಣ್ಣುಗಳ ಚೀಲವನ್ನು ಹಿಡಿದಿದ್ದ, ಮಲಗಿದ್ದ ಸೀಮಾ ಅವನನ್ನು ಕಂಡು ಎದ್ದಳು.

'ಟೈಂ ಆಯ್ತು. ಗೌತಮನ್ನ ಮೀಟ್ ಮಾಡೋಕೆ ಹೋಗೋಣ್ವಾ?' ಕೇಳಿದ. ಅವಳು ಹೂಂ ಎಂದು ತಲೆಯಾಡಿಸಿ, ಕನ್ನಡಿಯ ಮುಂದೆ ನಿಂತು ತಲೆಗೂದಲನ್ನು

ಸೀರೆಯನ್ನು ಸರಿ ಮಾಡಿಕೊಂಡಳು. ಇಬ್ಬರೂ ಅಲ್ಲಿಂದ ಹೊರಟರು.

ಅಸಹಾಯಕನಂತೆ, ನಿಶ್ಯಕ್ತನಾಗಿ ಮಲಗಿದ್ದ ಗೌತಮನನ್ನು ಕಂಡು ಅವಳಿಗೆ ಬಹಳ ವ್ಯಥೆಯಾಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಅವಳನ್ನು ಕಂಡು ಗೌತಮ ಕ್ಷೀಣವಾಗಿ ನಕ್ಕ, 'ಹಲೋ ಸೀಮಾ, ಸಧ್ಯ ಈಗ್ಲಾದ್ರೂ ಬಂದ್ಯಲ್ಲಾ... ನಾನು ಬೇಗ ಹುಶಾರಾಗಿ ಬಿಡ್ತೀನಿ.... ನಾನು ಎಷ್ಟೇ ಫೋನು ಮಾಡಿದ್ರೂ ಅಲ್ಲಿಗ್ಯಾಕೆ ಬರ್ಲಿಲ್ಲ! ನೀನು ಆಗ್ಲೇ ಬಂದಿದ್ರೆ ನನಗೆ ಈ ಸ್ಥಿತಿ ಬರ್ತಿರ್ಲಿಲ್ಲ.'

'ಹಾಗೆ ಸುಲಭವಾಗಿ ಬರೋಕೆ ಆಗ್ತಿರ್ಲಿಲ್ಲ ಗೌತಮ, ನನ್ನ ಮೇಲೆ ಪೋಲೀಸರು ನಿಗಾ ಇಟ್ಟಿದ್ರು. ನಿನಗೆ ತೊಂದರೆ ಆಗ್ಬಾರ್ದು ಅಂತ ಬರ್ಲಿಲ್ಲ.'

'ನಂಗೆಲ್ಲಾ ಗೊತ್ತು, ಶಶಾಂಕನ ಮನೇಲಿ ಇದೀಯಂತೆ, ಅಮ್ಮ ಹೇಳಿದ್ಲು.... ಯಾಕೆ? ಅವನಲ್ಲಿ ಏನನ್ನು ಕಂಡೆ? ಗಂಡಸಿನ ಸಹವಾಸ ಇಲ್ದೇ ಇರೋಕೆ ಆಗಲ್ವಾ?'

'ಹಾಗೆಲ್ಲಾ ಮಾತಾಡ್ಬೇಡ ಗೌತಮ್, ನಾನು ನಿನ್ನನ್ನು ಎಷ್ಟು ಪ್ರೀತಿಸ್ತೀನಿ ಅಂತ ನಿಂಗೆ ಗೊತ್ತಿತ್ತು ಅಲ್ವಾ?... ನೀನೇ ಏನೇನೋ ಅವಾಂತರ ಮಾಡಿ ಕೊಂಡಿರೋನು...'

'ಈ ಸಮಯಕ್ಕಾಗಿ ಕಾಯ್ತಾ ಇದ್ದೆ ಅಂತ ಕಾಣುತ್ತೆ.... ಶಶಾಂಕನ ಮನೆಗೆ ಯಾಕೆ ಹೋಗ್ಬೇಕಾಗಿತ್ತು? ಯಾಕೆ ನಿನ್ನ ಅಪ್ಪ ಅಮ್ಮ ಸತ್ತು ಹೋಗಿದ್ರಾ?...'

'ನಾನೇ ಸತ್ತು ಹೋಗಿದ್ದಿದ್ರೆ ಚೆನ್ನಾಗಿರ್ತಿತ್ತು.... ಈ ದಿನ ನನಗೆ ಈ ಸ್ಥಿತಿ ಬರ್ತಿರ್ಲಿಲ್ಲ.'

'ಅಂಥಾದ್ದೇನಾಗಿದೆ?... ನಾನು ಮದುವೆ ಆಗ್ತಿರ್ಲಿಲ್ವಾ... ನನಗೋಸ್ಕರ ಕಾಯಕ್ಕೆ ಆಗ್ತಿರ್ಲಿಲ್ವಾ....?

'ಇಲ್ಲ ಗೌತಮ್.... ಕಾಯಕ್ಕೆ ಆಗ್ತಿರ್ಲಿಲ್ಲ, ನನ್ನ ನಿನ್ನ ಸ್ನೇಹ ಅತಿಯಾಗಿ ಮುಂದುವರೆದಿತ್ತು... ಅದರ ಫಲ ಈಗ ನನ್ನ ಹೊಟ್ಟೇಲಿ ಬೆಳೀತಿದೆ, ಈಗ ನಾನು ಪ್ರೆಗ್ನೆಂಟ್.

'ವ್ಹಾಟ್! ಪ್ರೆಗ್ನೆಂಟಾ? ನನಗ್ಯಾಕೆ ಮೊದಲೇ ಹೇಳ್ಲಿಲ್ಲ!... ತಕ್ಷಣ ಓಡಿ ನಿನ್ನ ಬಳಿಗೆ ಬರ್ತಿದ್ದೆ.'

'ಇಲ್ಲ ಗೌತಮ್, ನೀನು ಬರ್ತಿರ್ಲಿಲ್ಲ. ನನ್ನ ಪ್ರೀತಿಯನ್ನು ಮರೆತು, ಅಪವಾದಕ್ಕೆ ಹೆದರಿ, ಓಡಿ ಹೋಗಿ ತಲೆ ಮರೆಸ್ಕೊಂಡಿದ್ದೆ. ನನ್ನ ಮಾತನ್ನು ನಂಬ್ತಿದ್ಯಾ?... ಸುಳ್ಳು ಅಂತ ಹೇಳ್ತಿದ್ದೆ. ಅದಕ್ಕೇ ನಿಂಗೆ ತಿಳಿಸ್ಲಿಲ್ಲ... ಈಗ ತಿಳಿಸಿದ್ನಲ್ಲ ಏನ್ಮಾಡ್ತೀಯಾ?... ನಿರಪರಾಧಿ ಅಂತ ಸಾಬೀತಾಗಿ ಹೊರಬರುವಷ್ಟರಲ್ಲಿ ನನ್ನ ಡೆಲಿವರಿ ಆಗಿರುತ್ತೆ...'

'ಈ ಗೊಂದಲ ಎಲ್ಲಾ ಬೇಡ. ಅಬಾರ್ಷನ್ ಮಾಡಿಸ್ಕೋ... ನಾನು ನಿರಪರಾಧಿ ಅಂತ ಬಿಡುಗಡೆಯಾಗಿ ಹೊರಗೆ ಬಂದಾಗ ನೀನು ನನ್ನನ್ನ ನಗುನಗುತ್ತಾ ಸ್ವಾಗತಿಸ್ಬೇಕು.'

'ಮೊದಲು ನೀನು ನಿರಪರಾಧಿ ಅಂತ ಸಾಬೀತಾಗೋಕೆ ಎಷ್ಟು ದಿನ ಕಾಯಬೇಕೋ... ಅಬಾರ್ಷನ್ ಅದೂ ಇದೂ ಅಂತ ಆಸ್ಪತ್ರೆಗೆ ಓಡಾಡಿದರೆ ಎಲ್ರಿಗೂ ತಿಳಿಯಲ್ವಾ! ನನ್ನ ಮರ್ಯಾದೆ ಏನಾಗ್ಬೇಕು?'

'ಅದಕ್ಕೆ ಮರ್ಯಾದೆ ಬಿಟ್ಟು ಶಶಾಂಕನ ಮನೇಲಿರ್ತೀಯಾ? ಅವನ ವುಡ್‌ಬೀಯ ಕೊಲೆ ಆಗಿದ್ದಕ್ಕೆ ನಾನು ಅಪರಾಧಿ ಸ್ಥಾನದಲ್ಲಿದೀನಿ. ಇದೆಲ್ಲಾ ಅವನದೇ ಕೆಲಸ. ಮೊದಲಿಂದ ಅವನ ಕಣ್ಣು ನಿನ್ಮೇಲೆ ಇತ್ತು... ರೇಣುಕನ್ನ ಕೊಲೆ ಮಾಡಿ, ನಿನ್ನನ್ನ ತನ್ನ ಬುಟ್ಟಿಗೆ ಹಾಕ್ಕೊಂಡಿದಾನೆ, ಅವನನ್ನು ನಂಬಬೇಡ.

'ಅವನು ಅಂಥೋನು ಅಂತ ನಂಗೆ ಅನ್ಸಲ್ಲ...'

'ನಂಗಿಂತ ನಿಂಗೆ ಅವನು ಗೊತ್ತಾ? ಅವನು ನನ್ನ ಕಸಿನ್, ಮೊದಲಿಂದ ಅವನನ್ನು ಬಲ್ಲೆ.... ಅವನು ನಿನ್ನನ್ನು ನಿನ್ನ ಮಗುವನ್ನು ಉಳಿಯಗೊಡುವುದಿಲ್ಲ.'

'ಈಗ ನೀನು ಹೇಳ್ತಿರೋದು ಏನು? ಮಗುವನ್ನು ತೆಗೆಸಿಬಿಡು ಅಂತ ಹೇಳ್ತಿದೀಯಲ್ಲ, ನೀನು ಮನುಷ್ಯನಾ? ನಿನಗೆ ನನ್ನ ಮೇಲೆ ಪ್ರೀತಿ ಇಲ್ಲ, ನಮ್ಮಬ್ಬಿರ ಪ್ರೀತಿಯ ಮೇಲೆ ವಿಶ್ವಾಸವಿಲ್ಲ. ನೀನು ಹೀಗೆ ಬದಲಾಗ್ತೀಯ ಅಂತ ನಾನು ಅಂದ್ಕೊಂಡಿರ್ಲಿಲ್ಲ. ನಾನೇನು ತಪ್ಪು ಮಾಡಿದ್ದೆ! ನನ್ನ ಮಗು ಏನು ಅನ್ಯಾಯ ಮಾಡಿತ್ತು? ಹುಟ್ಟುವುದಕ್ಕೇ ಮೊದಲೇ ಕೊಲ್ಲುವ ಮಾತಾಡ್ತೀಯಲ್ಲ.'

'ಸಾರೀ ಸೀಮಾ.... ನನ್ನ ಮನಃಸ್ಥಿತಿ, ಆರೋಗ್ಯ ಎರಡೂ ಸರಿ ಇಲ್ಲ, ಏನೇನೋ ಮಾತನಾಡಿ ಬಿಡ್ತೀನಿ, ಐ ಆಮ್ ವೆರಿ ಸಾರೀ....'

'ಹಾಗಾದ್ರೆ ಮತ್ತೆ ಇಂಥಾ ಮಾತುಗಳನ್ನಾಡ್ಬೇಡ....'

'ಆಡಲ್ಲ, ಆದರೆ ನೀನು ಶಶಾಂಕನ ಮನೆಯಲ್ಲಿರಕೂಡದು, ಅದು ನನಗೆ ಸುತಾರಾಂ ಇಷ್ಟವಿಲ್ಲ.'

'ಮತ್ತೆಲ್ಲಿ? ಅವನು ನನಗೋಸ್ಕರ, ನಿನಗೋಸ್ಕರ ನನಗೆ ಹೆಲ್ಪ್ ಮಾಡ್ತಿದಾನೆ...'

'ಅವನಿಗೆ ಲಾಭ ಇಲ್ಲದೇ ಯಾಕೆ ಹೆಲ್ಪ್ ಮಾಡ್ತಾನೆ! ಇದರಲ್ಲಿ ಏನೋ ಮೋಸ ಇದೆ. ನನ್ನ ಮೇಲೆ ಕಾರಣವಿಲ್ಲದೇ ರಿವೇಂಜ್ ತಗೊಳ್ತಿದಾನೆ... ನೀನು ಅವನ ಜತೇಲಿದ್ದರೆ, ನಾನು ಬಿಡುಗಡೆಯಾಗೋದು ಹೇಗೆ? ಅವನು ಸಾಕ್ಷಿಯನ್ನೆಲ್ಲಾ ನಾಶ ಮಾಡಿ ಬಿಡ್ತಾನೆ... ನಾನೂ ನೀನು ಮತ್ತೆ ಒಂದಾಗಕ್ಕೆ ಅವನು ಬಿಡಲ್ಲ, ನಾನು ನಿರಪರಾಧಿ ಸೀಮಾ.... ನನ್ನದೇನೂ ತಪ್ಪಿಲ್ಲ. ನನಗೆ ಶಿಕ್ಷೆ ಆಗ್ಬೇಕಾ? ನಾನು ಬಿಡುಗಡೆಯಾಗಿ ಬರಲಿ ಅಂತ ನಿಂಗೆ ಆಸೆ ಆಗಲ್ವಾ?.... ನನಗೆ ಸಹಾಯ

ಮಾಡಲ್ವಾ?'

'ನೀನು ನಿಜವಾಗಿಯೂ ನಿರಪರಾಧಿ ಆಗಿದ್ದರೆ ನಿನಗೆ ಖಂಡಿತಾ ಬಿಡುಗಡೆ ಆಗುತ್ತೆ, ಅದಕ್ಕೆ ನಾನೇನು ಮಾಡ್ಬೇಕು ಅಂತ ಹೇಳು.... ನಡೆದುದನ್ನೆಲ್ಲವನ್ನು ನನಗೆ ವಿವರವಾಗಿ ಹೇಳು.... ನಾನು ಸಾಕ್ಷಾಧಾರಗಳನ್ನು ಕಲೆಕ್ಟ್ ಮಾಡ್ತೀನಿ.'

'ಥ್ಯಾಂಕ್ಸ್. ಆದರೆ ಅದಕ್ಕೆ ಮುಂಚೆ ನನ್ನ ಮಾತನ್ನು ನಡೆಸಿಕೊಡು. ನನ್ನ ಪ್ರೀತಿಯ ಮೇಲೆ ನಿನಗೆ ಭರವಸೆ ಇದ್ದರೆ, ನೀನು ಶಶಾಂಕನ ಮನೆಯಲ್ಲಿರಕೂಡದು. ನಮ್ಮ ಮನೇಲಿ ಹೋಗಿ ಅಲ್ಲಿರು... ಅದು ನಿನ್ನ ಮನೆ...'

'ನಿನ್ನ ಮನೇಲಾ? ಹೇಗೆ ಸಾಧ್ಯ ಗೌತಮ್... ನಿಮ್ಮ ತಾಯಿ ಒಪ್ತಾರಾ?'

'ಅಮ್ಮ ಈಗ ಬದಲಾಗಿದಾಳೆ, ಅವಳಿಗೆ ಈಗ ನನ್ನ ಬಿಡುಗಡೆ ಮುಖ್ಯ, ನಾನು ಹೇಳಿದರೆ ಇಲ್ಲ ಅನ್ನಲ್ಲ. ಖಂಡಿತಾ ಒಪ್ತಾಳೆ. ನಮ್ಮ ಮಗು ಹುಟ್ಟುವುದರೊಳಗೆ ನಾನು ಬಿಡುಗಡೆಯಾಗಿ ಬರ್ತೀನಿ... ತಕ್ಷಣವೇ ನಮ್ಮಿಬ್ಬರ ಮದುವೆ. ಆದರೆ ಒಂದೇ ಒಂದು ವ್ಯಥೆ ನಂಗೆ... ಈ ದಿನಗಳಲ್ಲಿ ನಾನು ನಿನ್ನ ಜತೇಲಿರ್ಬೇಕು. ನಿನ್ನ ಅನುಭವಗಳನ್ನು ಹಂಚ್ಕೋಬೇಕು ಅಂತ ನಿಂಗೆ ಆಸೆ ಆಗುತ್ತೆ. ಆದರೆ ಏನ್ಮಾಡ್ಲೀ....? ನಿಂಗೆ ನಮ್ಮ ಮನೇಲಿ ಏನೋ ತೊಂದರೆ ಆಗಲ್ಲ. ಅಮ್ಮ ನಿನ್ನನ್ನು ಮಗಳಂತೆ ನೋಡಿಕೊಳ್ತಾಳೆ... ನಿನಗೆ ಹುಟ್ಟುವ ಮಗುವಿನ ಮೇಲಾಣೆ. ನೀನು ನಮ್ಮ ಮನೆಗೆ ಹೋಗಿ ಅಲ್ಲಿರ್ಬೇಕು ಇದು ನನ್ನ ರಿಕ್ವೆಸ್ಟ್.' ಅವನು ಕೈ ಮುಗಿದ. ಗೌತಮನ ಬಗ್ಗೆ ಅಯ್ಯೋ ಅಂತೆನ್ನಿಸಿತು.

'ಓಕೆ... ನಿಂಗೋಸ್ಕರ ನಾನು ನಿನ್ನ ಮಾತಿಗೆ ಒಪ್ತೀನಿ, ಆದರೆ ನಿನ್ನ ತಂದೆ ತಾಯಿ ಅವಮಾನ ಮಾಡಿದ್ರೆ ಅಲ್ಲಿ ಒಂದು ಗಳಿಗೆ ಇರಲ್ಲ ನಾನು.'

'ಇಲ್ಲ ಹಾಗೇನೂ ಆಗಲ್ಲ, ನಾನು ಅಮ್ಮನ ಹತ್ರ ಮಾತಾಡ್ತೀನಿ, ನೀನು ನಾಳೇನೇ ನಮ್ಮ ಮನೆಗೆ ನಿನ್ನ ಲಗೇಜ್ ತಗೊಂಡು ಹೋಗು..... ಈಗ ಹೊತ್ತಾಯ್ತು, ನೀನು ಹೊರಡು, ಪೋಲೀಸ್ನೋನು ಎರಡೆರಡು ಸಲ ಬಂದು ನೋಡ್ಕೊಂಡು ಹೋದ. ನಿನ್ನ ಜೊತೆ ಯಾರು ಬಂದಿದ್ದಾರೆ?....

ಶಶಾಂಕ ಎಂದು ಹೇಳಲು ಅವಳ ನಾಲಿಗೆ ತಡೆಯಿತು. 'ವಾಣಿ ಬಂದಿದಾಳೆ ನಾನಿನ್ನು ಬರ್ಲಾ?' ಎಂದು ಹೇಳಿ ಅಲ್ಲಿಂದ ಹೊರಟಳು.

* * * *

ಮೌನವಾಗಿ ಕುಳಿತಿದ್ದವಳ ಕಡೆ ಒಂದೆರಡು ಬಾರಿ ನೋಡಿದ ಶಶಾಂಕ್, ಕಡೆಗೆ ತಾನೇ ಮೌನವನ್ನು ಮುರಿದ, 'ಗೌತಮ ಹುಷಾರಾಗಿದಾನೆ ತಾನೇ? ಆಸ್ಪತ್ರೆಯಿಂದ ಯಾವಾಗ ಡಿಸ್ಚಾರ್ಜ್ ಮಾಡ್ತಾರಂತೆ?'

'ಏನೋ ಗೊತ್ತಿಲ್ಲ, ನಾನು ಕೇಳ್ಲಿಲ್ಲ! ಡಿಸ್ಚಾರ್ಜ್ ಮಾಡಿದ್ರೂ, ಲಾಕಪ್‌ಗೆ

ಹೋಗ್ತಾನೆ. ವಿಚಾರಣೆ ಯಾವಾಗ ಪ್ರಾರಂಭವಾಗುತ್ತೋ... ಬಿಡುಗಡೆ ಆಗಿ ಬರ್ತೀನಿ ಅಂತ ಬಹಳ ಹಂಬಲ ಇಟ್ಕೊಂಡಿದಾನೆ.... ತಾನು ತಪ್ಪು ಮಾಡಿಲ್ಲ ಅಂತ ಹೇಳ್ದ.'

'ತಪ್ಪು ಮಾಡಿಲ್ಲದಿದ್ರೆ ಬಿಡುಗಡೆ ಆಗುತ್ತೆ, ಅದಕ್ಕೆ ವರಿ ಯಾಕೆ?'

'ವರಿ ಆಗ್ದೇ ಇರುತ್ತಾ ಶಶಾಂಕ್...?'

'ಯಾವ ರೀತೀಲಿ? ನಮ್ಮ ಮದುವೆ ಆಯ್ತು ಅಂತ ಹೇಳಿದ್ರಾ?'

'ಹೇಳಲಿಲ್ಲ, ಅವನ ಆಸೆಯೇ ಬೇರೆ ಇದೆ ಶಶಾಂಕ್.'

'ಆಸೆ ಏನೆಂದು ಅವನು ಕೇಳಲಿಲ್ಲ,' ಅವಳಾಗಿಯೇ ಮುಂದುವರೆದಳು.

'ನಾನು ಅವನ ಮನೇಲಿ ಹೋಗಿ ಇರ್ಬೇಕಂತೆ....' ದೃಷ್ಟಿ ತಪ್ಪಿಸಿದಳು.

'ಯಾಕಂತೆ! ಯಾವ ಸಂಬಂಧದಲ್ಲಿ...'

'ಅವನಿಗೋಸ್ಕರ ನಾನು ಅವನ ಮನೇಲಿದ್ಕೊಂಡು ಕಾಯ್ಬೇಕಂತೆ, ಅವನ ತಾಯಿ ಈಗ ನನ್ನನ್ನು ಸೊಸೆ ಅಂತ ಒಪ್ಕೊಂಡಿದಾರಂತೆ...'

'ಇದು ಸರಿ ಅನ್ಸುತ್ತಾ? ನಿಮ್ಮ ಅಮ್ಮಂಗೆ ಒಪ್ಪಿಗೆ ಆಗುತ್ತಾ?......'

'ನಮ್ಮಪ್ಪ ಅಮ್ಮನ ಮಾತು ಬಿಡಿ, ನಿಮ್ಗೆ ಏನನ್ನಿಸುತ್ತೆ.... ಹಾಗೇ ಮಾಡ್ತೀನಿ...'

'ಇಲ್ಲ ಈ ವಿಷಯದಲ್ಲಿ ನಿಮ್ಮ ತೀರ್ಮಾನವೇ ನನ್ನ ತೀರ್ಮಾನ. ಅವರುಗಳು ನನ್ನ ಸೋದರ ಮಾವ, ಸೋದರತ್ತೆ, ಅವರಿಗೂ ಅವರ ಮಗನ ಬಗ್ಗೆ ನಾನಾ ಭಾವನೆಗಳಿರುತ್ತವೆ. ಸುಧಾಮನೂ ಇಲ್ಲಿಲ್ಲ. ಗೌತಮನ ಕತೆ ಹೀಗೆ.... ಈಗ ಅತ್ತೆಯೂ ಬದಲಾಗಿರಬಹುದು.... ನಿಮ್ಮನ್ನು ಸೊಸೆ ಅಂತ ಒಪ್ಪಿಕೊಳ್ಳಬಹುದು...'

'ಅಂದರೆ ನೀನು ನನ್ನನ್ನು ಬಿಟ್ಟುಕೊಡಕ್ಕೆ ಸಿದ್ಧವಾಗಿದೀಯಾ!'

'ಸಿದ್ಧ ಅಂತಲ್ಲ, ಈ ಅನಿವಾರ್ಯದ ಮದುವೆ ಒಂದಿಲ್ಲದಿದ್ದರೆ, ನ್ಯಾಯವಾಗಿ ನೀವು ಅವರ ಮನೇಲಿರಬೇಕಾಗಿತ್ತು, ಈ ಮಗು ಅವರ ಮನೇಲಿ ಹುಟ್ಟಿ ಬೆಳೆಯಬೇಕು, ಅದೇ ನ್ಯಾಯ.'

'ಆದರೆ.... ಈಗ?'

'ಈಗ ನೀವು ನನ್ನ ಪತ್ನಿ, ಅದು ಬರೀ ನಮ್ಮ ಮನೆಯವರಿಗೆ ಮಾತ್ರ ತಿಳಿದಿರುವ ವಿಷಯ. ಇದೇ ಉದ್ದೇಶದಿಂದ ಅತ್ತೆ ಮಾವ ನಮ್ಮಿಬ್ಬರ ಮದುವೆಯನ್ನು ಕ್ಯಾನ್ಸಲ್ ಮಾಡ್ಸಿದಾರೆ. ನಾನೇ ನಿಜವನ್ನೂ ತಿಳಿಸಿ, ಅವರ ಮನೇಲಿ ನಿಮ್ಮನ್ನು ಬಿಡಬಲ್ಲೆ, ಆದರೆ ನಿಮ್ಮ ಇಷ್ಟ ಏನೂಂತ ಹೇಳಿ....'

'ಏನ್ಹೇಳ್ಬೇಕೂಂತ ಗೊತ್ತಾಗ್ತಿಲ್ಲ ಶಶಾಂಕ್ .... ಇದಿಷ್ಟುಕ್ಕೋಸ್ಕರ ನಾವು ಮದುವೆ ಆಗ್ಬೇಕಾಗಿತ್ತಾ? ಹಾಗಾದರೆ ಈ ಮದುವೆಗೆ ಅರ್ಥವೇ ಇಲ್ವಾ? ನಿಮ್ಮ ತಂದೆ ತಾಯಿ ಏನಂದ್ಕೊಳ್ತಾರೆ? ವಿಜಯ ಏನಂದ್ಕೊಳ್ಳಬಹುದು? ನನಗೆ ಈ

ಐಡಿಯಾ ಯಾಕೋ ಸರಿ ಅಂತ ಅನ್ನಿಸ್ತಿಲ್ಲ.'

'ಈ ಐಡಿಯಾ ಯಾರಿಗೂ ಸರಿ ಅನ್ನಿಸಲ್ಲ, ಆದರೆ ನೀವು ಒಂದೆರಡು ದಿನಗಳು ಇದ್ದು ಬರೋದ್ರಲ್ಲಿ ತಪ್ಪೇನಿದೆ?'

'ಇದೆಲ್ಲಾ ಬೇಕಾ ಶಶಾಂಕ್, ಬೇರೆ....?'

'ಹೇಳಿದ್ನಲ್ಲಾ ನಿಮ್ಮ ತೀರ್ಮಾನವೇ ಮುಖ್ಯ. ಆದರೆ ಈ ವಿಷಯದಲ್ಲಿ ನಮಗೆ ಒಂದು ಲಾಭವೂ ಇದೆ. ಅದೇ ಮನೇಲಿ ರೇಣುಕಾಳ ಕೊಲೆ ನಡೆದದ್ದು. ನಿಜವಾಗ್ಲೂ ಏನು ನಡೆದದ್ದು ಅಂತ ತಿಳ್ಕೊಳೋಕೆ ಇದು ಒಂದು ಅವಕಾಶ. ಯಾವುದಾದ್ರೂ ಕ್ಲೂ ಸಿಗಬಹುದು. ರೇಣುಕಾ ಅವಳಾಗಿಯೇ ಹೋಗಿದ್ಲಾ?.... ಗೌತಮನೇ ಕರೆಸಿಕೊಂಡಿದ್ನಾ? ಅಥವಾ ಇನ್ನೂ ಯಾರಾದ್ರೂ ಇದ್ದರಾ?.... ಯಾವುದೇ ಸಣ್ಣ ಕ್ಲೂ ಸಿಕ್ಕರೂ ಗೌತಮನ ಪರವಾಗಿಯಾದರೂ ಅಥವಾ ವಿರುದ್ಧವಾಗಿಯಾದರೂ....' ಎನ್ನುತ್ತಾ ಅವಳ ಕಡೆ ನೋಡಿ ಸುಮ್ಮನಾದ.

'ನನ್ನ ಕೈಲಿ ಅದನ್ನೆಲ್ಲ ಹುಡುಕೋಕ್ಕೆ ಆಗುತ್ತಾ ಶಶಾಂಕ್? ಎರಡು ದಿನಗಳಲ್ಲಿ ಏನೂ ಕ್ಲೂ ಸಿಗದಿದ್ದರೆ..... ಪೊಲೀಸ್ನೋರು ಎಲ್ಲವನ್ನೂ ಸಂಗ್ರಹಿಸಿರಬಹುದು... ಅಥವಾ ಮನೆಯವರು ಎಲ್ಲವನ್ನೂ ನಾಶ ಮಾಡಿರಬಹುದು....'

'ಅತ್ತೆಯ ಹತ್ತಿರ ನಿರ್ಭಯವಾಗಿ ಮಾತನಾಡಿ... ಗೌತಮನ ಬಗ್ಗೆ ಹೆಚ್ಚು ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳಿ.... ಸುಧಾಮ, ಅವನ ಹೆಂಡತಿ, ಅವರುಗಳ ಹತ್ತಿರ ಮಾತನಾಡಿ.... ಗೌತಮ ನಿಮ್ಮ ಬಗ್ಗೆ ಅವರುಗಳ ಹತ್ತಿರ ಏನನ್ನಾದರೂ ಹೇಳಿಲ್ಲದೇ ಇರಬಹುದು. ಆದರೆ ರೇಣುಕಾಳ ಬಗ್ಗೆ ಎಂದಾದರೂ, ಏನಾದರೂ ಹೇಳಿದ್ದು ಅವಳ ಬಗ್ಗೆ ಅವನಲ್ಲಿ ಯಾವ ಭಾವನೆ ಇತ್ತು ಅಂತ ತಿಳಿದರೆ....?

ಅವನು ಎಷ್ಟು ಕಷ್ಟದಿಂದ ಈ ಮಾತುಗಳನ್ನು ಹೇಳುತ್ತಿರುವನೆಂದು, ಎಷ್ಟು ನೋವು ತುಂಬಿದೆ ಎಂದು ಇವಳಿಗೆ ಅರ್ಥವಾಗಿತ್ತು. ತಾನು ಅಲ್ಲಿ ಹೋಗಿ ಕ್ಲೂ ತರೋದಾದ್ರೆ ಇದ್ರಿಂದ ಶಶಾಂಕನಿಗೆ ಲಾಭ ಆಗೋದಾದ್ರೆ.... ತಾನು ಒಪ್ಪಲೇಬೇಕು ಎಂದುಕೊಂಡಳು.

'ನಿಮ್ಮನ್ನು ಏನೋ ಆತಂಕ ಕಾಡ್ತಿದೆ... ನನ್ನ ಅಪ್ಪ ಅಮ್ಮನಿಗೆ ತಿಳಿದರೆ ಏನು ಅಂದ್ಕೋಬಹುದು ಅಂತ ಯೋಚಿಸ್ತಿದೀರಿ ಅಲ್ವಾ? ಅವರಿಗೆ ತಿಳಿಯೋದೇ ಬೇಡ. ವಿಜಯಂಗೂ ಗೊತ್ತಾಗೋದು ಬೇಡ.... ನೀವು ನಿಮ್ಮ ಸ್ನೇಹಿತೆಯ ಮನೆಗೆ ಹೋಗಿದೀರಿ ಅಂತ ಹೇಳಿದ್ರಾಯ್ತು.... ಅಥವಾ ನಿಮ್ಮ ತಂದೆ ತಾಯಿ ಮನೇಲಿದೀರಿ ಅಂತ ಹೇಳಿದ್ರೂ ಆಯ್ತು....'

'ಇದಲ್ಲಾ ಯಾಕ್ಬೇಕು ಶಶಾಂಕ್. ನಿಮಗೆ ನಾನು ಬೇಕಾಗಿಲ್ಲ ಅಂತ ನೇರವಾಗಿ ಹೇಳ್ಬಿಡಿ. ನಾನು ಎಲ್ಲಿಗಾದ್ರು ಹೊರಟುಹೋಗ್ತೀನಿ.'

'ಇದಕ್ಕೆ ನೀವು ಒಪ್ಪಲೇಬೇಕು ಅಂತೇನಿಲ್ಲ, ಗೌತಮನಾಗಲೀ, ಅವನ ಮನೆಯವರಾಗಲಿ ಮತ್ತೆ ಮತ್ತೆ ಒತ್ತಡ ಹಾಕುವ ಮೊದಲು ನಾನಾಗಿಯೇ ಈ ಅಧ್ಯಾಯವನ್ನು ಮುಗಿಸಿ ಬಿಡೋಣ ಅಂತ ಅನ್ನಿಸ್ತು. ಗೌತಮ ಅಪರಾಧಿ ಅಥವಾ ಅಪರಾಧಿ ಅಲ್ಲ ಎನ್ನುವುದು ಆದಷ್ಟು ಬೇಗ ತೀರ್ಮಾನವಾದರೆ ಎಲ್ಲರಿಗೂ ನಿರಾಳ.

'ಹೌದು ಆದಷ್ಟು ಬೇಗ ಈ ಗೋಜಲು ಮುಗಿದರೆ ಸಾಕಾಗಿದೆ. ಗೌತಮನ ಸ್ನೇಹಾನಾ ಯಾಕಾದ್ರು ಮಾಡಿದ್ನೋ ಅಂತ ಅನ್ನಿಸ್ತಿದೆ.... ಆದರೆ ಇವತ್ತು ಅವನನ್ನು ನೋಡಿದಾಗ ತುಂಬಾ ಅಯ್ಯೋ ಅಂತ ಅನ್ನಿಸ್ತು. ಬಹಳ ಇಳಿದು ಹೋಗಿದಾನೆ. ಅವನಿಗೆ ಬಿಡುಗಡೆ ಸಿಗುತ್ತಾ ಶಶಾಂಕ್?...'

ಪ್ರಯತ್ನ ಮಾಡೋಣ. ನನಗೆ ಅವನ ಮೇಲೆ ಕೋಪ ಇದೆ. ಆದರೆ ನಿಮಗೋಸ್ಕರ ಅವನು ಬಿಡುಗಡೆಯಾಗಿ ಬರಲಿ ಅಂತ ಹಾರೈಸ್ತೀನಿ. ಇದು ನಿಜ....'

'ನೀವು ತುಂಬಾ ಒಳ್ಳೆಯವರು ಶಶಾಂಕ್....'

'ನೀವೂ ತುಂಬಾ ಒಳ್ಳೆಯವರು ಸೀಮಾ....... ನಿಮಗೆ ಒಳ್ಳೇದಾಗ್ಲಿ ಅಂತ ಮನಸಾರೆ ಹಾರೈಸ್ತೀನಿ...' ಅವನ ಅಂತಃಕರಣ ಅವಳನ್ನು ಕಲಕಿತು. ಅವನ ಕೈ ಹಿಡಿದು ಥ್ಯಾಂಕ್ಸ್ ಹೇಳಿದಳು. ಅವನು ವಿಶ್ವಾಸದಿಂದ ಅವಳ ಕೈಯನ್ನು ಒತ್ತಿದ.

'ಹಾಗಾದ್ರೆ ಈಗ ಎಲ್ಲಿಗೆ ಹೋಗೋಣ? ಹೋಟೆಲ್ಲಿಗೆ ಹೋಗೋಣವೋ? ನಮ್ಮ ಮನೆಗೆ ಹೋಗೋಣವೋ?'

'ನನ್ನನ್ನು ವಾಣಿಯ ಮನೇಲಿ ಬಿಟ್ಬಿಡಿ. ಮೊದಲು ಹೋಟೆಲ್ಲಿಗೆ ಹೋಗಿ ಲಗೇಜು ತಗೊಂಡು ಬರೋಣ. ಆಮೇಲೆ ನೀವು ನಿಮ್ಮ ಮನೆಗೆ ಹೋಗಿ.'

'ಮನೇಲಿ ಕೇಳಿದ್ರೆ ಏನ್ಹೇಳ್ಲಿ?'

'ವಾಣಿ ಮನೇಲಿ ಇದಾಳೆ ಅಂಥ ಹೇಳ್ಬಿಡಿ. ಆಮೇಲೆ ನಿಮಗೆ ಏನು ಸರಿ ಅನಿಸುತ್ತೋ ಅದನ್ನೂ ಹೇಳಿ. ನಾನು ಅಲ್ಲಿಂದಲೇ ಗೌತಮನ ಮನೆಗೆ ಹೋಗ್ತೀನಿ. ಅಲ್ಲಿಯ ಪರಿಸ್ಥಿತಿ ನೋಡ್ಕೊಂಡು ಇರೋದೋ, ಬೇಡ್ವೋ ಅಂಥ ನಿರ್ಧರಿಸ್ತೀನಿ, ನಿಮಗೆ ಏನೂ ಗೊತ್ತಿಲ್ಲ ಅಂತಲೇ ಅವರುಗಳು ತಿಳಿದುಕೊಳ್ಳಲಿ. ಆಗ ನಿಜ ಏನೂಂತ ತಿಳಿಯುತ್ತೆ.

'ಆದರೆ, ಐ ಮಿಸ್ ಯೂ ಶಶಾಂಕ್... ನನಗೆ ಏನಾದ್ರೂ ಸಲಹೆ ಬೇಕಾದ್ರೆ ನಿಮಗೆ ಫೋನು ಮಾಡ್ತೀನಿ... ನಿಮಗೆ ತೊಂದರೆ ಆಗಲ್ಲ ಅಂತ ಅಂದ್ಕೊಳ್ತೀನಿ.'

'ಖಂಡಿತಾ ಇಲ್ಲ ಸೀಮಾ...' ಎಂದು ಮತ್ತೊಮ್ಮೆ ಅವಳ ಕೈಗಳನ್ನು ಒತ್ತಿದ. ಕಾರು ಮತ್ತೆ ಹೋಟೆಲ್ ಬಳಿಗೆ ಬಂದಿತು. ಲಗೇಜುಗಳನ್ನು ತೆಗೆದುಕೊಂಡು

ಬಿಲ್ ಪೇ ಮಾಡಿ ಅಲ್ಲಿಂದ ಹೊರಬಿದ್ದರು. ಸೀಮಾಳನ್ನು ವಾಣಿಯ ಮನೆಯಲ್ಲಿ ಬಿಟ್ಟು ತಾನು ತನ್ನ ಮನೆಗೆ ಬಂದ.

'ಸೀಮಾ ಬರ್ಲಿಲ್ಲವೇನೋ... ನಂಗೊತ್ತಿತ್ತು ಅವಳಿಗೆ ನನ್ನ ಜೊತೆ ಇರಕ್ಕೆ ಇಷ್ಟವಿಲ್ಲ ಅಂತ... ಅಮ್ಮನ ಮನೆಗೆ ಹೋದ್ಲಾ?' ವಿಜಯ ಕೇಳಿದಳು.

'ಇಲ್ಲ ವಾಣಿ ಮನೆಗ ಹೋದ್ಲು, ಇವತ್ತು ಅಲ್ಲಿರ್ತಾಳೆ, ನಾಳೆ ಅಲ್ಲಿಂದ ಗೌತಮನ ಮನೆಗೆ ಹೋಗ್ತಾಳೆ... ಇನ್ಮುಂದೆ ಅಲ್ಲೇ ಇರ್ತಾಳೆ.'

'ಏನಂದೆ? ಗೌತಮನ ಮನೆಗೆ ಹೋದ್ಲಾ? ಅಣ್ಣ ಅತ್ತಿಗೆ ಅವಳನ್ನು ಸೇರಿಸ್ತಾನೆ ಅಂತ ಅಂದ್ಕೊಂಡ್ಲಾ? ವಾಪಸ್ಸು ಇಲ್ಲಿಗೇ ಬರ್ತಾಳೆ. ಈಗ ಅವಳು ನಿನ್ನ ಹೆಂಡತಿ. ನೀನ್ಹೇಗೆ ಒಪ್ಪಿಗೆ ಕೊಟ್ಟೆ?' ತಾಯಿ ಖಾರವಾಗಿ ಕೇಳಿದಳು.

'ಇವತ್ತು ಗೌತಮನ್ನ ನೋಡೋಕೆ ಹೋಗಿದ್ದೆವು. ಅವನು ನಮ್ಮ ಮನೆಗೆ ಹೋಗು ಅಮ್ಮ ನಿನ್ನನ್ನ ಸೊಸೆ ಅಂತ ಒಪ್ಕೊಂಡಿದಾಳೆ ಅಂತ ಹೇಳಿದ್ನಂತೆ...'

'ಇವಳು ಒಪ್ಪಿ ಬಿಟ್ಲಾ? ಎಂಥಾ ಹುಡ್ಗೀನೋ ಇವಳು.... ಮನಸ್ಗೆ ಬಂದ್ಹಾಗೆ ವರ್ತಿಸ್ತಾಳೆ.... ಗೊತ್ತಿದ್ದು ಗೊತ್ತಿದ್ದು ಆ ಕೊಲೆಗಾರನ ಮನೆಗೆ ಯಾಕೆ ಹೋಗ್ಬೇಕು? ಅದೂ ಈಗ...? ಅವರದ್ದು ಏನೋ ಪ್ಲಾನ್ ಇರಬಹುದು. ಗೌತಮನ ಪರವಾಗಿ ಸಾಕ್ಷಿ ಹೇಳಲಿ ಅಂತ ಬಲವಂತ ಮಾಡಿ ಒಪ್ಪಿಸ್ತಾರೆ. ಈ ಜಾಣೆ ಒಪ್ಪಿ ಬಿಡ್ತಾಳೆ. ಹೇಗಾದ್ರೂ ಮಾಡಿ ಗೌತಮನಿಗೆ ಬಿಡುಗಡೆ ಸಿಗುವಂತೆ ಮಾಡ್ಬೇಕು ಅಂತ ಅವರಿಗೆ ಆಸೆ.... ಅದಕ್ಕೆ ನೀನು ಆಸ್ಪದ ಕೊಡ್ಬೇಡ. ಈಗ್ಲೇ ಸೀಮಳಿಗೆ ಫೋನು ಮಾಡಿ ಸೀದಾ ಇಲ್ಲಿಗೆ ಬಾ ಅಂತ ಹೇಳು. ಇಲ್ದಿದ್ರೆ ಅವಳು ಎಂದಿಗೂ ಈ ಮನೇಗೆ ಬರೋದೇ ಬೇಡ....'

'ಇಲ್ಲಮ್ಮ ನಾನು ಫೋನ್ ಮಾಡಲ್ಲ, ಅವಳಿಗೆ ಪೂರ್ಣ ಸ್ವಾತಂತ್ರ್ಯವಿದೆ, ಬಲವಂತವಾಗಿ ಅವಳನ್ನ ಈ ಮನೇಲಿ ಇಟ್ಕೊಳ್ಳೋಕೆ ಆಗಲ್ಲ.'

'ಈ ಚೆನ್ನಕ್ಕೆ ಮದುವೆ ಯಾಕೆ ಬೇಕಿತ್ತು ಇವಳಿಗೆ ಗೌತಮನ ಹಾಗೇ ಇವಳೂ ನಿನಗೆ ಮೋಸ ಮಾಡಿದಳು.'

'ಇಲ್ಲಿ ಮೋಸ ಗೀಸ ಏನೂ ಇಲ್ಲಮ್ಮ, ಇದು ನಾನು, ಸೀಮಾ ಹಾಗೂ ವಾಣಿ ಸೇರಿ ಮಾಡಿರುವ ಪ್ಲಾನ್. ಗೌತಮನ ಮನೇಲಿ ಅತ್ತೆ ಮಾವನ ಹೊರತು ಇನ್ಯಾರೂ ಇಲ್ಲ. ಅವಳು ಅಲ್ಲಿದ್ದುಕೊಂಡು ಏನಾದರೂ ಸಾಕ್ಷ್ಯಗಳು ಸಿಗುತ್ತಾ ಅಂತ ಹುಡುಕ್ತಾಳೆ... ಅದರಿಂದ ಈ ಕೇಸಿಗೆ ಅನುಕೂಲವಾಗುತ್ತೆ.

'ಗೌತಮನ ಪರವಾಗಿ ಸಾಕ್ಷ್ಯಗಳು ಇದ್ದರೆ?'

'ಒಳ್ಳೇದೇ ಆಯ್ತಲ್ವಾ? ಗೌತಮನಿಗೆ ಬಿಡುಗಡೆ ಆಗುತ್ತೆ, ನಿನ್ನ ಅಣ್ಣನ ಮಗ ನಿರಪರಾಧಿ ಅಂತ. ಆದರೆ ನಿಂಗೂ ಸಂತೋಷ ಅಲ್ವೇನಮ್ಮ?'

'ಏನು ಸಂತೋಷ? ರೇಣುಕಾ ಹಿಂದಕ್ಕೆ ಬರ್ತಾಳಾ?'

'ರೇಣುಕಾ ಬರಲ್ಲ ನಿಜ. ಆದರೆ ಸೀಮಾ ಮತ್ತೆ ಹಿಂತಿರುಗಿ ಬರ್ತಾಳೆ, ಆ ನಂಬಿಕೆ ನನಗಿದೆ.'

'ಅದ್ಹೇಗೆ ಹೇಳ್ತೀಯ? ಈ ಹುಡುಗಾಟವೆಲ್ಲಾ ಯಾಕೆ?'

'ಆಟವೋ, ಹುಡುಗಾಟವೋ ಎಲ್ಲಾದಕ್ಕೂ ಒಂದು ಕೊನೆ, ಸಧ್ಯದಲ್ಲೇ ಬರುತ್ತೆ. ಸೀಮಾ ಅವಳಾಗಿಯೇ ನಮ್ಮ ಮನೆಗೆ ಬರಲಿ ಯಾರ ವಿರೋಧವೂ ಬೇಡ. ಯಾರ ಬಲವಂತವೂ ಬೇಡ. ಅತ್ತೆ ಮಾವ ಮದುವೆಗೆ ಅಡ್ಡಿ ತಂದಿದಾರೆ ಅಲ್ವಾ! ಅವರು ಮತ್ತೆ ಮತ್ತೆ ಕಿತಾಪತಿ ಮಾಡದೇ ಇರುವವರಲ್ಲ.... ಗೌತಮನ ಕೇಸಿನ ವಿಚಾರಣೆ ಪ್ರಾರಂಭವಾದ ಮೇಲೆ ಸುಮ್ಮನಾಗ್ತಾರೆ.....'

'ಏನೋಪ್ಪ ಇದೊಂದು ನನಗೆ ಅರ್ಥವಾಗಲ್ಲ. ನಿನ್ನ ತಲೆ ಮೇಲೆ ಏನೂ ಬರದಿದ್ರೆ ಸಾಕು. ಕೆಲಸ ಹುಡುಕ್ಕೋ ಇವಳ ಅಪ್ಪನಂಥ ಹುಡುಗಿ ತಂದು ನಿನಗೆ ಮದುವೆ ಮಾಡ್ತೀನಿ.'

'ಇನ್ನು ಮದುವೆ ಗಿದುವೆ ಏನೂ ಬೇಡಮ್ಮ.... ಸೀಮಾ ವಾಪಸ್ಸು ಬಂದರೆ ಮನಸಾರೆ ಪತ್ನಿ ಅಂತ ಸ್ವೀಕರಿಸ್ತೀನಿ. ಇಲ್ದಿದ್ರೆ ಹೀಗೇ ಇದ್ದುಬಿಡ್ತೀನಿ...' ಎಂದು ಹೇಳಿ ಅಲ್ಲಿ ನಿಲ್ಲದೇ ಮಹಡಿ ಏರಿದ.

'ಏನೇ ವಿಜಿ... ಏನೇ ಇವನ ಗ್ರಹಚಾರ. ಗೊತ್ತಾದ ಹುಡುಗಿ ಕೊನೆಯಾದಳು. ಕೊಲೆ ಮಾಡಿದವಳ ಗೆಳತಿ ಮದುವೆಯಾಗಿ ಇವನಿಗೆ ಕೈಕೊಟ್ಲು. ಇನ್ನೇನೇ ಇವನ ಗತಿ?' ತಾಯಿ ರೋಧಿಸಿದಳು.

'ಅಳ್ಬೇಡಮ್ಮ, ಇದೆಲ್ಲಾ ಇವನದೇ ಏನೋ ಪ್ಲಾನ್ ಅಂತ ಕಾಣುತ್ತೆ. ಮೊದಲಿಗೆ ಸೀಮಾಳನ್ನು ಮದುವೆಯಾಗಿ ಅವಳ ವಿಶ್ವಾಸವನ್ನು ಗಳಿಸಿದ. ಈಗ ಅವಳು ಮುಖಾಂತರ ಗೌತಮನ್ನ ಅಪರಾಧಿ ಅಂತ ಸಾಬೀತು ಮಾಡ್ತಾನೆ. ನಿನ್ನ ಮಗ ಏನೂ ಕಮ್ಮಿ ಇಲ್ಲ. ಪ್ರತೀಕಾರ ತಗೋಬೇಕು ಅಂತ ಇವನಿಗೆ ಅನ್ನಿಸಲ್ವಾ?'

'ಆದ್ರೂ ಈ ಹುಡುಗಿ ಅವರ ಮನೆಗೆ ಹೋಗಿ ಇರೋದು ಅಂದ್ರೆ..... ಅವರು ಇವಳಿಗೆ ಏನಾದ್ರೂ ಅಪಾಯ ಮಾಡಿದ್ರೆ?'

'ಆಗ ನಿಜವಾಗಿಯೂ ಖಂಡಿತಾ ಸಿಕ್ಕಿ ಹಾಕಿಕೊಳ್ತಾರೆ.... ಅತ್ತೆ, ಮಾವ, ಸುಧಾಮ ಎಲ್ರೂ ಶಾಮೀಲು ಅಂತ ಎಲ್ಲರ ಮೇಲೂ ಕೇಸು ನಡೆಯುತ್ತದೆ....'

'ಗೌತಮನ ದೆಸೆಯಿಂದಾಗಿ, ರಂಗಣ್ಣ ಜೈಲಿಗೆ ಹೋಗಬೇಕೇನೆ? ಪಾಪ ಅವನದ್ದೇನು ತಪ್ಪು? ಮೇಷ್ಟ್ರಾಗಿ, ಒಳ್ಳೆಯ ಹೆಸರನ್ನು ಗಳಿಸಿದ್ದ, ಮರ್ಯಾದೆಯೆಲ್ಲ ಬೀದಿ ಪಾಲಾಗುತ್ತೆ.'

'ತಪ್ಪು ಮಾಡದ ಶಶಾಂಕ ಜೈಲಿಗೆ ಹೋಗಿಲ್ಲಲ್ವಾ?... ಹೀನಾಯ

ಅನುಭವವಿಸಲಿಲ್ಲವಾ?.... ಬಿಡಮ್ಮ...'

'ಶಶಾಂಕನ್ನ ಕರೀ, ಈ ರಗಳೆ ಎಲ್ಲಾ ಬೇಡ. ಈಗ್ಲೇ ಹೋಗಿ ಸೀಮನ್ನ ಕರ್ಕೊಂಡು ಬಾ ಅಂತ ಹೇಳ್ತೀನಿ. ಈಗ ಇವಳು ನಮ್ಮ ಮನೆಯ ಸೊಸೆ. ಗೌತಮನ ಗೆಳತಿ ಅಲ್ಲ. ಅವರ ಸಹವಾಸವೇ ಸಾಕು. ಅವರುಗಳು ಹೇಗಾದ್ರೂ ಇದ್ದುಕೊಳ್ಳಲಿ. ನನಗೊಬ್ಬ ಅಣ್ಣ ಇದ್ದ ಅನ್ನೋದನ್ನೇ ಮರೆತುಬಿಡ್ತೀನಿ.'

'ಹಾಗೆಲ್ಲ ಮಾತಾಡ್ಬೇಡಮ್ಮ, ಗೌತಮನದ್ದು ತಪ್ಪಿದರೆ ಈಗ ಅದು ಮನೆಯ ವರೆಲ್ಲರಿಗೂ ಅರ್ಥವಾಗಲೇಬೇಕು. ಮಾವ ಮೇಷ್ಟ್ರರಾದವರು ಒಪ್ಪಿಕೊಳ್ಳಲೇ ಬೇಕು. ಈಗ ಅವನಿನ್ನೂ ಚೇತರಿಸಿಕೊಳ್ತಿದಾನೆ. ಕೇಸು ಪ್ರಾರಂಭವಾಗಲಿ, ಆಗ ಗೊತ್ತಾಗುತ್ತೆ.'

'ಅದೇನೇ ಇರ್ಲಿ, ಈಗ ಸೀಮನ ಕತೆ ಏನೂಂತ ಹೇಳು.'

'ನಾನು ಅವಳ ಹತ್ತಿರ ಮಾತಾಡ್ತೀನಿ, ಅವಳಿಗೆ ಮನಸ್ಸಿದ್ದರೆ ಈ ಮನೆಗೆ ವಾಪಸ್ಸು ಬರಲಿ.... ಇಲ್ಲದಿದ್ದರೆ ಗೌಮನಿಗಾಗಿ ಕಾಯಲಿ. ಅಷ್ಟರಲ್ಲಿ ಮುದುಕಿ ಆಗ್ತಾಳೆ ಅಷ್ಟೇ... ಎನ್ನುತ್ತಾ ಫೋನನ್ನೆತ್ತಿಕೊಂಡಳು. ಮಾತನಾಡಿದವಳು ವಾಣಿ.

'ನಾವಿಬ್ರೂ ಮಾರ್ಕೆಟ್ಟನಲ್ಲಿದ್ದೀವೆ, ಆಮೇಲೆ ಮಾತಾಡ್ತೀವಿ' ಎಂದು ಹೇಳಿ ಮಾತನ್ನು ಕಟ್ ಮಾಡಿದ್ದಳು. ವಿಜಯ ಹಲ್ಲು ಕಡಿದಳು. 'ಅಮ್ಮ ಅವಳು ಎಲ್ಲಿಗೂ ಹೋಗಿಲ್ಲ, ವಾಣಿ ಮನೇಲೇ ಇದಾಳೆ, ನೀನು ಹೆಚ್ಚು ಚಿಂತಿಸ್ಬೇಡ' ಎಂದಳು ತಾಯಿಗೆ.

'ಬಾ ಅಂತ ಹೇಳ್ಬೇಕಾಗಿತ್ತು.'

'ಬರದೇ ಎಲ್ಲಿಗೆ ಹೋಗ್ತಾಳೆ ಬಿಡಮ್ಮ' ಎನ್ನುತ್ತಾ ಶಶಾಂಕನೊಡದೆ ಮಾತನಾಡಲೆಂದು ಮಹಡಿಗೆ ಬಂದಳು. ಶಶಾಂಕ, ತಾನು ಹಾಗೂ ಸೀಮಾ ಆಲೋಚಿಸಿರುವ ಪ್ಲಾನ್ ಬಗ್ಗೆ ಹೇಳಿದ.

'ನೀನು ಚಿಂತಿಸ್ಬೇಡ, ಸೀಮಾ ಈಗ ನನ್ನ ಪತ್ನಿ, ಅವಳ ರಕ್ಷಣೆ ನನ್ನದು. ಅತ್ತೆ ಮಾವ ಕೆಟ್ಟೋರಲ್ಲ, ಸುಧಾಮ ಊರಲ್ಲಿಲ್ಲ, ಗೌತಮನ ಕೇಸು ವಿಚಾರಣೆ ಪ್ರಾರಂಭವಾಗೋದ್ರೊಳ್ಗೆ ಸೀಮಾ ಇಲ್ಲಿಗೆ ವಾಪಸ್ಸು ಬರ್ತಾಳೆ ನೋಡ್ತಿರು.'

'ಬರದಿದ್ರೆ....'

'ಬರದಿದ್ರೆ ಹೋಗಿ ಎಳ್ಕೊಂಡು ಬರ್ತೀನಿ. ನಾನು ಮದುವೆ ಆಗಿಲ್ವಾ? ನನ್ನ ಹತ್ರ ಪ್ರೂಫ್‌ಗಳಿವೆ.'

'ಅದಪ್ಪ ಗಂಡನ ಲಕ್ಷಣ, ಅಮ್ಮ ಸುಮ್ನೆ ಚಿಂತೆ ಮಾಡ್ತಾಳೆ.'

'ನೀನು ಎಲ್ಲರ ತಲೇನೋ ಕೆಡಿಸ್ತೀಯಾ, ಸುಮ್ಮನಿರಬಾರ್ದಾ.... ಎಲ್ಲಾ ಸರಿ ಹೋಗುತ್ತೆ.'

'ಅಮ್ಮ ನಿನ್ನಷ್ಟೇ ಧೈರ್ಯವಂತೆ ಅಲ್ಲ, ನಾನೂ ಅಲ್ಲ.'

'ಸೀಮಾ ಧೈರ್ಯವಂತೆ, ರೇಣುಕಾ ಸೀಮಾಳಂತೆ ಇರಲಿಲ್ಲ. ಈ ಗುಣವನ್ನು ನಾನು ಮೆಚ್ಚಿದೆ. ಆ ಕಾರಣದಿಂದಲೇ ಮದುವೆ ಆದೆ. ಅವಳು ನನಗೆ ಮೋಸ ಮಾಡಲ್ಲ.'

'ಗುಡ್‌ಲಕ್ ಶಶಾಂಕ್, ಬಹುಶಃ ಅವಳ ಈ ನಿರ್ಧಾರಕ್ಕೆ ನಾನೇ ಕಾರಣ. ನಿನ್ನೆ ರಾತ್ರಿ ವಿಪರೀತ ಮಾತಾಡಿಬಿಟ್ಟೆ. ನಿನಗೂ ಹೇಳಿರ್ಬೇಕು ಅಲ್ವಾ?'

'ಇಲ್ಲ ಅವಳು ಏನನ್ನೂ ಹೇಳಿಲ್ಲ. ನನಗಿಂತ ಸೀಮಾಳಿಗೆ ಹೆಚ್ಚು ಆಘಾತ ವಾಗಿದೆ. ನೀನು ಹೀಗೆಲ್ಲಾ ಮಾತಾಡಬಾರದಾಗಿತ್ತು.'

'ಅವಳನ್ನು ನೋಡಿದ ಕೂಡಲೇ, ಗೌತಮ ಮಾಡಿದ ಕೃತ್ಯ ನೆಪಿಗೆ ಬಂತು. ನಾನೇನ್ಮಾಡ್ಲಿ?' ಅಷ್ಟರಲ್ಲಿ ಶಶಾಂಕನ ಫೋನು ರಿಂಗಾಗಿತ್ತು. ಅತ್ತಲಿಂದ ಸೀಮಾ ಮಾತನಾಡಿದ್ದಳು.

'ಸೀಮಾ....' ಎಂದು ಹೇಳುತ್ತಾ ಒಂದು ಬದಿಗೆ ಹೋಗಿ ನಿಂತ. ವಿಜಯ ಕೆಳಗೆ ಇಳಿದು ಹೋದಳು.

'ನಂಗೆ ಗೌತಮನ ಮನೆಯ ಅಡ್ರೆಸ್, ಫೋನ್ ನಂಬರ್ ಎಲ್ಲಾ ಬೇಕಿತ್ತು. ನನ್ನ ಹತ್ತಿರ ಯಾವುದೂ ಇಲ್ಲ' ಎಂದಳು. ಇವನು ಮುಕ್ತವಾಗಿ ನಕ್ಕ.

'ಯಾವುದನ್ನೂ ಇಟ್ಟುಕೊಳ್ಳದೇ ಎವಿಡೆನ್ಸ್‌ನ ಹೇಗೆ ಕಲೆಕ್ಟ್ ಮಾಡ್ತೀರಿ? ತಗೊಳ್ಳಿ ಎಂದು ಹೇಳಿ, ಆ ಮನೆಯ ವಿಳಾಸವನ್ನೂ ಫೋನ್ ನಂಬರನ್ನೂ ಕೊಟ್ಟ. ಒಂದು ಹೊಸಾ ಮೊಬೈಲ್ ತಗೊಳ್ಳಿ. ನಿಮ್ಮ ಉಪಯೋಗಕ್ಕೆ ಬೇಕಾಗುತ್ತೆ' ಎಂದ.

'ತಗೊಂಡಾಯ್ತು' ಎಂದು ಹೇಳಿ ಅವಳು ಹೊಸಾ ನಂಬರನ್ನು ಕೊಟ್ಟಳು. 'ಹೋಟೆಲ್ಲಿಗೆ ಮಲಗಲು ಹೋಗ್ತೀರೋ ಅಥವಾ ಮನೇಲೀ ಇರ್ತೀರೋ?' ಕೇಳಿದಳು.

'ಹೋಟೆಲ್ಲಿಗೆ ಒಬ್ಬನೇ ಯಾಕೆ ಹೋಗಲಿ? ನೀವು ಬರೋದಾದ್ರೆ ಹೇಳಿ' ನಕ್ಕ.

'ನಾನೀಗ ಮಿಷನ್ ಮೇಲಿದೀನಿ. ಅದನ್ನ ಮುಗಿಸಿಯೇ ನಿಮ್ಮ ಮನೆಗೆ ಬರೋದು... ನನಗಾಗಿ ಕಾಯ್ತೀರಿ ಅಲ್ವಾ?'

'ಯಾಕೆ! ನನ್ಮೇಲೆ ನಂಬಿಕೆ ಇಲ್ವಾ?'

'ತುಂಬಾ ನಂಬಿಕೆ ಇದೆ ಶಶಾಂಕ್.... ಗೌತಮನ ಮೇಲಿರುವುದಕ್ಕಿಂತ ಹೆಚ್ಚು.'

'ಅವನ ಮನೆಗೆ ಹೋಗಿ ನನ್ನನ್ನೂ ಮರೆತುಬಿಟ್ಟೀರಿ, ನಿಮ್ಮ ಸ್ನೇಹಿತನ

ನೆನಪಿರಲಿ....'

'ನಿಮಗೆ ನನ್ನ ಮೇಲೆ ನಂಬಿಕೆ ಇಲ್ವಾ?' ಪ್ರಶ್ನಿಸಿದಳು. ಇಬ್ಬರೂ ನಕ್ಕರು.

'ಏನೇ ವಿಷಯ ಇದ್ದರೂ ಸಂಕೋಚಪಟ್ಟುಕೊಳ್ಳದೇ ಫೋನ್ ಮಾಡಿ ಗುಡ್‌ನೈಟ್...' ಎಂದ. ಅವಳೂ ಗುಡ್‌ನೈಟ್ ಹೇಳಿ ಮಾತನ್ನೂ ಮುಗಿಸಿದಳು.

* * * *

ಸೀಮಾ ತನ್ನ ಫೋನಿನಿಂದ ಗೌತಮನ ಮನೆಗೆ ಫೋನು ಮಾಡಿದಳು. ಫೋನನ್ನೆತ್ತಿಕೊಂಡವನು ಸುಧಾಮ. ಸೀಮಾ ತನ್ನ ಪರಿಚಯವನ್ನು ಹೇಳಿ ಕೊಂಡು ತಾನು ಗೌತಮನನ್ನು ಭೇಟಿಯಾದುದನ್ನು ಅವನ ಆಸೆಯಂತೆ, ಆ ಮನೆಗೆ ಸೊಸೆಯಾಗಿ ಬರುವ ಆಸೆ ಇದೆಯೆಂದು ತಿಳಿಸಿದಳು.

ಸುಧಾಮ ಉತ್ಸಾಹದಿಂದ 'ನಿಜವಾಗಿಯೂ!... ಗೌತಮನ್ನ ನೀವು ಇಷ್ಟು ಪ್ರೀತಿಸ್ತೀರಿ ಅಂತ ಗೊತ್ತಿರ್ಲೇ ಇಲ್ಲ. ದ್ವೇಷಿಸ್ತಿದೀರಿ ಅಂತ ತಿಳ್ಕೊಂಡಿದ್ದೆ... ಮತ್ತೆ ನೀವ್ಯಾಕೆ ಶಶಾಂಕನ ಮನೇಲಿದ್ರೆ! ಅವನನ್ನು ಮದುವೆಯಾಗೋಕೆ ರೆಡಿಯಾಗಿದ್ರಿ! ಈಗೇನಾಯ್ತು?' ಕೇಳಿದ.

'ಮದುವೆ ಕ್ಯಾನ್ಸಲ್ ಆಯ್ತು. ನಿಮಗೂ ವಿಷಯ ಗೊತ್ತಿರಬೇಕಲ್ವಾ.... ಗೌತಮ ಕೇಳಿಕೊಳ್ಳದೇ ಇದ್ದಿದ್ರೆ ಏನ್ಮಾಡ್ತಿದ್ನೋ.... ಅವನ ಮಾತಿಗೆ ಇಲ್ಲ ಅನ್ನೋಕ್ಕೆ ಆಗ್ಲಿಲ್ಲ. ಅವನ ಬಿಡುಗಡೆ ಆಗೋವರ್ಗು ನಾನು ನಿಮ್ಮ ಮನೇಲಿರ್ತೀನಿ. ನನಗೆ ನಿಮ್ಮ ಸಹಕಾರ ಬೇಕು. ಗೌತಮನ್ನ ಪ್ರೀತಿಸಿದ್ದಕ್ಕೆ ಅಪ್ಪ ಅಮ್ಮ ನನ್ನನ್ನು ದೂರ ಮಾಡಿದಾರೆ. ವಾಣಿ ಮನೇಲಿ ಎಷ್ಟು ದಿನಾಂತ ಇರಲಿ! ಈಗ ನಿಮ್ಮ ಮನೆಯೇ ನನಗೆ ಗತಿ....'

ಸುಧಾಮ ಹಿಗ್ಗಿ ಹೋದ. ನಿಮ್ಮ ಸ್ನೇಹಿತೆ ಮನೆ ಎಲ್ಲಿದೆ ಅಂತ ಹೇಳಿ ವಾಣಿಯ ಮನೆಯ ವಿಳಾಸವನ್ನು ತೆಗೆದುಕೊಂಡ. ಬೆಳಿಗ್ಗೆ ನಾನು ಟ್ಯಾಕ್ಸಿ ತಗೊಂಡು ಬರ್ತೀನಿ ನೀವು ಸಿದ್ಧವಾಗಿರಿ' ಎಂದು.

'ನಿಮ್ಮ ತಾಯಿಗೆ ಹೇಳ್ಬಿಡಿ, ಅವರು ನನ್ನನ್ನು ಅಕ್ಸೆಪ್ಟ್ ಮಾಡ್ಕೊಳ್ತಾರೆ ತಾನೆ?' ಅನುಮಾನದ ಧ್ವನಿಯಲ್ಲಿ ಕೇಳಿದಳು.

'ಅನುಮಾನ ಯಾಕೆ? ಅಮ್ಮನಿಗೆ ಗೌತಮ ಮುದ್ದಿನ ಮಗ. ಅವನಿಗೆ ಬೇಕಾದ ನೀವು ಅಮ್ಮನ ಮೆಚ್ಚಿನ ಸೊಸೆ. ಗೌತಮ ವಾಪಸ್ಸು ಬರೋವರ್ಗೂ ನಾನು ನಿಮ್ಮನ್ನು ಚೆನ್ನಾಗಿ ನೋಡ್ಕೊಳ್ತೀನಿ.... ಯೂ ಡೋಂಟ್ ವರಿ' ಎಂದ.

ಸೀಮಾ ಸದ್ದು ಮಾಡದೇ ನಕ್ಕಳು. ಅವನು ಮತ್ತೊಮ್ಮೆ ತಾನು ಅವಳನ್ನು ಕರೆದೊಯ್ಯಲು ಬರುವುದಾಗಿ ತಿಳಿಸಿ 'ಗುಡ್‌ನೈಟ್' ಎಂದ. ಸೀಮಾ ಫೋನ್

ಸ್ವಿಚ್‌ನ್ನು ಒತ್ತಿ ವಾಣಿಯ ಕಡೆ ನೋಡಿ ನಕ್ಕಳು.

ನಿಂತಲ್ಲಿನಿಂದಲೇ ಸೀಮಾ ಮನೆಯ ಸುತ್ತ ನೋಟವನ್ನು ಹರಿಸಿದಳು. ಗೌತಮನ ರೂಮಿನ ಬಾಗಿಲಿಗೆ ದೊಡ್ಡ ಬೀಗವನ್ನು ಹಾಕಿತ್ತು. ಈ ರೂಮಿನಲ್ಲೇ ತಾನು ಗೌತಮನೊಡನೆ ಸರಸಕ್ಕೆ ಇಳಿದಿದ್ದು... ಎನ್ನುವ ವಿಷಯ ನೆನಪಿಗೆ ಬಂದು ಮನಸ್ಸು ಕಹಿಯಾಯಿತು. ಅವಳನ್ನೇ ಗಮನಿಸುತ್ತಿದ್ದ ಆಕೆ ನುಡಿದಳು.

"ಏನೋ ಆಗಬಾರದ್ದು ಆಗಿಹೋಯಿತು. ನಿನ್ನ ಗೌತಮನ ಗ್ರಹಚಾರ.... ವರ್ಷ ಕಳೆದ ಮೇಲೆ, ಸುಣ್ಣ ಬಣ್ಣ ಹೊಡೆಸಿ, ಗ್ರಹಶಾಂತಿಯನ್ನು ಮಾಡಿಸ್ತೀನಿ. ಅಲ್ಲಿಯವರೆಗೂ ಬಾಗಿಲ ಹಾಕಿರಲಿ ಅಂತ ಶಾಸ್ತ್ರಿಗಳು ಹೇಳಿದಾರೆ."

"ಅದನ್ನೆಲ್ಲ ಯಾಕಮ್ಮಾ ನೆನಸ್ಕೋತೀಯ... ಈಗ ನಿನ್ನ ಸೊಸೆ ಮನೆಗೆ ಬಂದಿದಾಳೆ. ಇವಳ ಊಟ, ತಿಂಡಿ, ಉಪಚಾರ ಎಲ್ಲಾ ನಿನಗೆ ಸೇರಿದ್ದು.... ಹಾಗೇ ಸೀಮಾಳಿಗೆ ಮನೆಕೆಲಸ, ಅಡಿಗೆ ಕೆಲಸಗಳನ್ನು ಹೇಳಿಕೊಡು. ಮುಂದೆ ಉಪಯೋಗಕ್ಕೆ ಬರುತ್ತೆ, ಅಲ್ವಾ ಸೀಮಾ?" ಅವಳ ಕಡೆ ನೋಡಿ ಮುಗುಳ್ನಕ್ಕ, ಅವಳು ನಗಲಿಲ್ಲ.

"ಹೋಗು....ಮಹಡಿಯ ಮೇಲಿನ ರೂಂನಲ್ಲಿ ಇವಳ ಲಗೇಜನ್ನು ಇಡು... ಎಲ್ರಿಗೂ ತಟ್ಟೆ ಹಾಕ್ತೀನಿ. ಊಟ ಮಾಡೋರಂತೆ. ನೀನು ಬೆಳಿಗ್ಗೆ ಬೇಗ ಏಳ್ಬೇಕಲ್ಲ.... ಅಲ್ಲಿ ರೂಮಲ್ಲಿ ಪುಸ್ತಕಗಳಿವೆ. ಟಿ.ವಿ. ಇದೆ. ಊಟಕ್ಕೆ ಮಾತ್ರ ಕೆಳಗಿಳಿದು ಬರಬೇಕಾಗುತ್ತೆ. ಅಟ್ಯಾಚ್ಡ್ ಬಾತ್ ರೂಮ್‌ನಲ್ಲಿ ಬಿಸಿ ನೀರು ಬರುತ್ತೆ." ಆಕೆ ಹೇಳಿದಳು. ಸೀಮಾ ನಿಂತಲ್ಲೇ ನಿಂತಿದ್ದಳು....

"ಬನ್ನಿ ಸೀಮಾ.... ನಿಮ್ಮ ರೂಮನ್ನು ನಿಮಗೆ ತೋರಿಸ್ತೀನಿ" ಎಂದು ಹೇಳಿ ಸುಧಾಮ ಅವಳ ಲಗೇಜನ್ನು ಎತ್ತಿಕೊಂಡು ಮೆಟ್ಟಿಲನ್ನೇರಿದ. ಸೀಮಾ ಅವನನ್ನು ಹಿಂಬಾಲಿಸಿದಳು.

"ಥ್ಯಾಂಕ್ಸ್, ನಂಗೆ ಊಟ ಬೇಡ. ಸೇರುವ ಹಾಗಿಲ್ಲ. ನಾನು ರೆಸ್ಟ್ ತಗೋ ತೀನಿ" ಎಂದಳು.

"ನೀವು ಊಟ ಮಾಡದಿದ್ರೆ ಅಮ್ಮನಿಗೆ ಬೇಸರ ಆಗುತ್ತೆ. ಬೇಕಾದ್ರೆ ನಾನು ಇಲ್ಲಿಗೇ ತಂದುಕೊಡ್ತೀನಿ." ಎಂದ. ಅವಳು ಬೇಡ ಅನ್ನಲಿಲ್ಲ. ಅವಳಿಗೆ ಕೆಳಗೆ ಇಳಿದು ಬರಲು ಇಷ್ಟವಿಲ್ಲ ಎಂದು ಅರಿತ. ಅವನತ್ತ ಹೋಗಿದ್ದ. ಇವಳು ಮಂಚದ ಮೇಲೆ ಸುಮ್ಮನೇ ಕಿಟಕಿಯ ಕಡೆ ನೋಡುತ್ತಾ ಕುಳಿತಳು. ಸ್ವಲ್ಪ ಹೊತ್ತಿನಲ್ಲೇ ಅವನು ತಟ್ಟೆಯನ್ನು ತಂದ. ಕುಡಿಯಲು ನೀರು ಹಾಲು ಎಲ್ಲವೂ ಇತ್ತು. ಹಣ್ಣುಗಳು ಎಲ್ಲಾ ಇದ್ದವು... ಪಲಾವ್, ಪಾಯಸ, ಮೊಸರು ತಂದಿದೀನಿ. ನಿಮಗೆ ಏನು ಸೇರುತ್ತೋ ಅದನ್ನೇ ತಿನ್ನಿ.. ನಾನು ಸರ್ವ್ ಮಾಡಲಾ?" ಅವಳನ್ನೇ

ನೋಡುತ್ತಾ ಕೇಳಿದ.

"ಥ್ಯಾಂಕ್ಸ್ ಬೇಡ." ಎಂದಳು

"ಪ್ಲೀಸ್, ಉಪವಾಸ ಮಲಗ್ಬೇಡಿ. ಹೆಂಗಸ್ರು ಉಪವಾಸ ಮಲಗ್ಬಾರ್ದಂತೆ. ಅಮ್ಮ ಹೇಳಿದಾಳೆ." ಮತ್ತೆ ನಸುನಕ್ಕು ನುಡಿದ. ಏನಾದ್ರೂ ಬೇಕಾದ್ರೆ ನನ್ನನ್ನು ಕರೀರಿ... ಸಂಕೋಚ ಪಟ್ಕೋಬೇಡಿ..." ಎಂದು ಹೇಳಿ ಕೆಳಗಿಳಿದು ಹೋಗಿದ್ದ. ಅವಳು ರೂಮಿನ ಬಾಗಿಲನ್ನು ಹಾಕಿಕೊಂಡು, ಮೊಬೈಲ್ ಫೋನನ್ನು ತೆಗೆದಳು. ಶಶಾಂಕನೊಡನೆ ಮಾತನಾಡುವ ಆಸೆಯಾಗಿತ್ತು. ಆದರೆ, ತನ್ನ ಮಾತನ್ನು ಯಾರಾದರೂ ಕದ್ದು ಆಲಿಸಿದರೆ ಎಂದುಕೊಂಡು, ವಾಣಿಗೆ ಫೋನು ಮಾಡಿದಳು. ಪಿಸುದನಿಯಲ್ಲಿ ಮಾತಾಡಿದಳು.

"ಉಪವಾಸ ಇರ್ಬೇಡ ಸೀಮಾ...ಊಟ ಮಾಡು... ಈಗ ನಿನಗೆ ಅದರ ಅಗತ್ಯವಿದೆ" ಎಂದಳು.

"ಶಶಾಂಕನಿಗೆ ನಾನು ಇಲ್ಲಿದೀನಿ ಅಂತ ಹೇಳ್ಬಿಡಿ." ಎಂದು ಹೇಳಿ ತಟ್ಟೆಯನ್ನೆತ್ತಿಕೊಂಡಳು.

"ಈ ಸುಧಾಮ, ಬಹಳ ಖದೀಮ. ತನಗೆ ಕೂತಲ್ಲೇ ಉಪಚಾರ ಮಾಡಿ, ತಾನು ಒಳ್ಳೆಯವನು ಅಂತ ಅನ್ನಿಸ್ಕೋಬೇಕು ಅಂತಿದಾನೆ" ಎಂದು ಕೆಳದನಿಯಲ್ಲಿ ಹೇಳಿ ಮಾತನ್ನು ಮುಗಿಸಿ, ಪಲಾವ್‌ಗೆ ಮೊಸರನ್ನು ಹಾಕಿಕೊಂಡು ತಿನ್ನಲು ಪ್ರಾರಂಭಿಸಿದಳು. ಸ್ವಲ್ಪವನ್ನು ಮಾತ್ರ ತಿಂದು, ಪಾಯಸವನ್ನು ಕುಡಿದಳು....ಅಡಿಗೆ ರುಚಿಯಾಗಿದ್ದರೂ, ಮನಸ್ಸಿಗೆ ಮುದವೆನಿಸಲಿಲ್ಲ. ತಾನು ಇಲ್ಲಿಗೆ ಬಂದುದು ಸರಿಯೇ...? ಪದೇ ಪದೇ ತಾನು ತಪ್ಪು ಮಾಡುತ್ತಿದ್ದೇನೆ ಎಂದುಕೊಂಡು ತಟ್ಟೆಯನ್ನು, ಬಟ್ಟಲುಗಳನ್ನು ವಾಷ್ ರೂಂನಲ್ಲಿ ಇಟ್ಟು ಕೈ ತೊಳೆದು ಬಂದಳು. ಎದುರಿಗಿದ್ದ ಡ್ರೆಸಿಂಗ್ ಮಿರರ್‌ನಲ್ಲಿ ತನ್ನನ್ನು ತಾನೇ ನೋಡಿಕೊಂಡಳು. ಹೊಟ್ಟೆಯ ಭಾಗ ಉಬ್ಬಿದಂತೆ ಅನ್ನಿಸಲಿಲ್ಲ. ತನ್ನನ್ನು ನೋಡಿದವರಿಗೆ, ತಾನು ಪ್ರೆಗ್ನೆಂಟ್ ಎಂದು ಅನ್ನಿಸುವುದಿಲ್ಲ. ಆದರೆ ಇನ್ನು ಕೆಲವೇ ತಿಂಗಳುಗಳು... ಎಲ್ಲಾ ಗರ್ಭಿಣಿ ಹೆಂಗಸರಂತೆ.... ಉಬ್ಬಿದ ಹೊಟ್ಟೆ.... ಕೊಬ್ಬಿದ ದೇಹ.... ಒಡಲೊಳಗೆ ಮುಲುಕಾಡುವ ಮಗು... ಆ ಅನಿಸಿಕೆ ಅವಳಲ್ಲಿ ಗಾಬರಿಯನ್ನುಂಟುಮಾಡಿತು. ಕನ್ನಡಿಯ ಮುಂದಿನಿಂದ ಸರಿದು ಬಂದು ಮಂಚದ ಮೇಲೆ ಉರುಳಿಕೊಂಡಳು.... ವಿಶಾಲವಾದ ಮಂಚ... ಶಶಾಂಕನೂ ತನ್ನ ಜೊತೆಯಲ್ಲಿ ಇರುವಂತಿದ್ದರೇ....ಅಂತ ಅನ್ನಿಸದೇ ಇರಲಿಲ್ಲ.

ಈ ಗೊಂದಲಗಳು ಆದಷ್ಟು ಬೇಗ ಮುಗಿಯಬೇಕು... ತಾನು ಶಶಾಂಕನ ಮನೆಗೆ ಹೋಗಬೇಕು... ಗೌತಮ ಅಪರಾಧಿ ಎಂದು ಸಾಬೀತು ಆಗಬೇಕು...

ಅವನ ವಿರುದ್ಧವಾಗಿ ಸಾಕ್ಷಿ ಹೇಳುವುದಕ್ಕೆ ಈ ಮನೆಯಲ್ಲಿ ಏನಾದರೂ ಎವಿಡೆನ್ಸ್ ಸಿಕ್ಕರೇ. ಗೌತಮನ ರೂಮಿನ ಬಾಗಿಲಿಗೆ ಹಾಕಿರುವ ಬೀಗವನ್ನು ತೆಗೆಸಿ, ಒಳಗೆ ಏನಿದೆ ಅಂತ ನೋಡಬೇಕು... ಸುಧಾಮನ ಹತ್ತಿರ ನಯವಾಗಿ ಮಾತನಾಡಿ, ಗೌತಮನ ಬಗ್ಗೆ ತಿಳಿದುಕೊಳ್ಳಬೇಕು. ಶಶಾಂಕನ ಮೇಲೆ ಇವರುಗಳಿಗೆ ಏನಾದರೂ ದ್ವೇಷ ಇದೆಯೋ ಅಂತ ತಿಳಿದುಕೊಳ್ಳಬೇಕು... ರೇಣುಕಾಳ ಮೇಲೆ ಇವನ ಕಾಮ ದೃಷ್ಟಿ ಹೇಗೆ ಬಿತ್ತು... ಯಾಕೆ ಬಿತ್ತು... ಅವನು ಹೇಳುತ್ತಿರುವುದು ನಿಜ ಎಂದು ಅರಿಯುವುದು ಹೇಗೆ ಎಂದು ಚಿಂತಿಸುತ್ತಾ ಕಣ್ಣು ಮುಚ್ಚಿದಳು... ಇದ್ದಕ್ಕಿದ್ದಂತೆ ಅವಳ ಎದೆ ಬಡಿತ ನಿಂತಂತಾಯಿತು. ಯಾರದೋ ಹೆಜ್ಜೆಯ ಸಪ್ಪಳ... ರೂಮಿನ ಬಾಗಿಲ ಬಳಿ.... ಸದ್ದಾಗದಂತೆ, ರೂಮಿನ ದೀಪವನ್ನು ಆರಿಸಿದಳು... ಯಾರಿರ ಬಹುದು ಎಂದು ಯೋಚಿಸುವಷ್ಟರಲ್ಲಿ ವಾಷ್ ರೂಂನಿಂದ ಈ ರೂಮಿಗೆ ಇದ್ದ ಬಾಗಿಲು ತೆರೆದಂತಾಯಿತು.... ತಾನು ಮಲಗಿರುವಾಗ ಈ ರೂಮಿಗೆ ಯಾರು ಬಂದಿರಬಹುದು....? ರೇಣುಕಾಳ ಪ್ರೇತಾತ್ಮ...? ತನಗೆ ಏನಾದರೂ ಹೇಳಲು ಬಂದಿರಬಹುದೆ...? ಕಣ್ಣು ಬಿಟ್ಟು ನೋಡಲು ಹೆದರಿ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಉಸಿರು ಬಿಗಿ ಹಿಡಿದಳು... ರೂಮಿನ ದೀಪ ಝುಗ್ಗನೆ ಬೆಳಗಿತು... ಬೆಚ್ಚಿ ಕಣ್ಣುಗಳನ್ನು ತೆರೆದಳು... ಎದುರಿಗೆ ಸುಧಾಮ ನಿಂತಿದ್ದ.... ಮೈಯಲ್ಲಿ ನಡುಕ ಉಂಟಾಯಿತು... ಎದ್ದು ನಿಂತಳು..."ನೀವಾ...? ಇಲ್ಯಾಕೆ...?" ತೊದಲಿದಳು.

"ಹೆದರ್ಬೇಡಿ ಸೀಮಾ.... ನೀವು ಮಲಗಿದೀರೋ ಇಲ್ಲವೋ ಅಂತ ನೋಡೋಕೆ ಬಂದೆ.... ನಾನು ಸ್ವಲ್ಪ ಮಾತಾಡ್ಬೇಕು..." ಎನ್ನುತ್ತಾ ಅವಳನ್ನು ಎಳೆದು ಕೂರಿಸಿದ.

"ಈಗ ಹೀಗೆ.... ಇಲ್ಲಿಂದ...." ವಾಷ್ ರೂಂ ಕಡೆ ನೋಡಿದಳು. ಅವಳು ಇದನ್ನು ನಿರೀಕ್ಷಿರಲಿಲ್ಲ.

"ನೀವು ಮಲಗಿದ್ರೆ ಎಬ್ಬಿಸೋದು ಬೇಡ ಅಂತ ಅಂದ್ಕೊಂಡು ಬಾಗಿಲನ್ನು ಬಡೀಲಿಲ್ಲ. ನಾನು ಇಲ್ಲಿ ಕೂತ್ಕೊಳ್ಲಾ?" ಎಂದು ಕೇಳುತ್ತಾ ಮಂಚದ ಮೇಲೆ ಕುಳಿತ.

"ಪ್ಲೀಸ್, ಈಗ ನೀವು ಹೋಗಿ, ನಾಳೆ ಮಾತಾಡೋಣ...." ಎಂದಳು.

"ಈಗ ನಾನು ಇಲ್ಲಿಗೆ ಯಾಕೆ ಬಂದಿದೀನಿ ಅಂಥ ಅರ್ಥವಾಗಿಲ್ವಾ? ನಾನು ಹೇಳ್ತೀನಿ" ಎನ್ನುತ್ತಾ ಅವಳ ಮುಖದ ಬಳಿಗೆ ಮುಖವನ್ನು ತಂದ. ಅವಳು ಅಸಹ್ಯದಿಂದ ಹಿಂದೆ ಸರಿದಳು. ಕೆಟ್ಟದಾಗಿ ನೋಡಿದಳು.

"ನೀವು ಡ್ರಿಂಕ್ಸ್ ತಗೊಂಡಿದೀರಿ, ಏನೇನೋ ಮಾತಾಡ್ತಿದೀರಿ. ಈಗ ಹೊರಟು ಹೋಗಿ." ಸ್ವಲ್ಪ ಜೋರಾಗಿಯೇ ಹೇಳಿದಳು.

"ಡ್ರಿಂಕ್ಸ್ ತಗೊಂಡಾಗ ನಾನು ಬಹಳ ನಾರ್ಮಲ್ ಆಗಿರ್ತೀನಿ. ಈಗ ನೀನಾ

ಗಿಯೇ ನೀನು ನನಗೆ ನಿನ್ನನ್ನು ಒಪ್ಪಿಸಿಕೊಂಡರೆ ಸರಿ. ಇಲ್ದಿದ್ರೆ ರೇಪ್ ಮಾಡ್ಬೇಕಾಗುತ್ತೆ." ಅವನು ಜಬರ್ದಸ್ತಿನಿಂದ ಹೇಳಿದಾಗ ಅವಳು ಹೆದರಲಿಲ್ಲ.

"ರೇಪ್ ಮಾಡಿದ್ರೆ, ಗೌತಮನಿಗೆ ಏನು ಗತಿ ಆಗಿದೆಯೋ ಅದೇ ನಿಮಗೂ ಆಗುತ್ತೆ. ದೂರ ಇರಿ.... ಹತ್ತಿರ ಬರ್ಬೇಡಿ." ಕಿರುಚಿದಳು.

"ಗೌತಮನ್ನ ಹತ್ತಿರಕ್ಕೆ ಸೇರಿಸಿದ್ದೆ.... ಸರಸ ಆಡಿದ್ದೆ.... ಶಶಾಂಕನ ಜೊತೇಲಿ ತಿರುಗಾಡ್ತೀಯಾ, ಚೆಲ್ಲಾಟ ಆಡ್ತೀಯಾ, ಇನ್ನ ನನ್ನ ಹತ್ತಿರ ಏನು ಬಿಗುಮಾನ? ಸುಮ್ನೇ ಬಿದ್ಕೋ.... ನೀನು ಎಂಥೋಳು ಅಂತ ನಂಗೊತ್ತು."

"ನಾನು ಗೌತಮನ್ನ ಮದುವೆಯಾಗೋಳು... ನನ್ನ ಹತ್ತಿರ ಹೀಗೆಲ್ಲಾ ಮಾತಾಡ್ತೀರಲ್ಲ. ನಿಮಗೆ ನಾಚ್ಕೆ ಆಗುಲ್ವಾ? ನೀವು ಹೀಗೆಲ್ಲಾ ಮಾತಾಡಿದ್ರೆ, ನಿಮ್ಮ ತಾಯಿಗೆ, ನಿಮ್ಮ ಹೆಂಡತಿಗೆ ತಿಳಿಸಬೇಕಾಗುತ್ತೆ... ಗೌತಮ ನಿಮ್ಮನ್ನು ಸುಮ್ಮನೆ ಬಿಡೊಲ್ಲ."

"ತಿಳಿಸು.... ಅವರ್‍ಯಾರೂ ನಿನ್ನ ಮಾತನ್ನು ನಂಬಲ್ಲ... ನೀನೇ ನನ್ನನ್ನು ಕರೆದೆ ಅಂತ ಹೇಳ್ತೀನಿ.." ಕೆಟ್ಟದಾಗಿ ನಕ್ಕ.

"ನೀವು ಇಷ್ಟು ಭಂಡರು ಅಂತ ನಂಗೆ ಗೊತ್ತಿದ್ದಿದ್ದರೆ ನಾನು ನಿಮ್ಮ ಮನೆಗೆ ಬರುತ್ತಲೇ ಇರ್ಲಿಲ್ಲ. ನಾನು ಈಗಲೇ ಪೋಲೀಸರಿಗೆ ಫೋನು ಮಾಡ್ತೀನಿ..." ಎನ್ನುತ್ತಾ ಮೊಬೈಲ್‌ನ ಕೈಗೆತ್ತಿಕೊಂಡಳು. ಅವನು ಅವಳ ಕೈಯಿಂದ ಮೊಬೈಲನ್ನು ಕಿತ್ತುಕೊಂಡು ಬಾಗಿಲ ಬಳಿಗೆ ಎಸೆದ....

"ನಾವು ಹೀಗೇ ಮಾತಾಡ್ತಿದ್ರೆ ಇಡೀ ರ್‍ಯಾತ್ರಿ ಹೀಗೇ ಕಾಲ ಕಳೆದು ಹೋಗುತ್ತೆ....ಸುಮ್ನೆ ಬಾರೇ..." ಎನ್ನುತ್ತಾ ಅವಳ ಮೈ ಮೇಲೆ ಕೈ ಹಾಕಿದ. ಅವಳು ಅವನ ಕೈಯನ್ನು ಬಿಡಿಸಿಕೊಳ್ಳಲು ಹೆಣಗಾಡಬೇಕಾಯಿತು. ಅವನು ಅವಳ ಬಟ್ಟೆಯನ್ನು ಎಳೆದಾಡಿದ. ಉದ್ವೇಗದಿಂದ ಎಗರಾಡುತ್ತಿದ್ದವನ ಕೆನ್ನೆಗೆ ಜೋರಾಗಿ ಹೊಡೆದಳು. ಅನಿರೀಕ್ಷಿತವಾಗಿ ಬಿದ್ದ ಪೆಟ್ಟಿನಿಂದ ಅವನು ತತ್ತರಿಸಿದ. ಅವನ ಹಿಡಿತ ಸಡಿಲವಾಯಿತು. ಆ ಸಮಯಕ್ಕಾಗಿ ಕಾಯುತ್ತಿದ್ದವಳು, ಅವನಿಂದ ತಪ್ಪಿಸಿಕೊಂಡು ಬಾಗಿಲ ಬಳಿಗೆ ಓಡಿದಳು. ಅವನು ಸರ್ರನೆ ಅವಳನ್ನು ಹಿಂದಕ್ಕೆ ಎಳೆದ. ಅವಳು ಬಿದ್ದಳು. ಅವಳ ಮೇಲೆ ಅವನು ಬಾಗಿದ. ಅವಳು ಶಕ್ತಿಯನ್ನೆಲ್ಲ ಬಿಟ್ಟು ಅವನ ಹೊಟ್ಟೆಗೆ ಒದ್ದಳು. ಅವನು ಹಿಂದಕ್ಕೆ ಬಿದ್ದ... ಅವನು ಸಾವರಿಸಿ ಕೊಂಡು ಏಳಲು ನೋಡಿದ. ಮೂಲೆಯಲ್ಲಿದ್ದ ಕ್ರಿಕೆಟ್ ಬ್ಯಾಟ್‌ನ್ನೆತ್ತಿಕೊಂಡು, ಅವನ ತಲೆಯ ಮೇಲೆ ಬಲವಾಗಿ ಒಂದೇಟು ಹಾಕಿದಳು. ಅವನು ಅಯ್ಯೋ ಎಂದು ಕಿರುಚಿಕೊಂಡು, ಕೆಳಕ್ಕೆ ಉರುಳಿದ. ಅವಳು ತನ್ನ ಮೊಬೈಲ್‌ನ್ನೆತ್ತಿಕೊಂಡು ಹೊರ ಬಂದು, ರೂಮಿನ ಬಾಗಿಲನ್ನು ಭದ್ರ ಪಡಿಸಿದಳು. ಪಕ್ಕದಲ್ಲೇ ಇದ್ದ

ಅಟ್ಯಾಚ್ಡ್ ರೂಮಿನ ಬಾಗಿಲಿನ ಚಿಲಕವನ್ನು ಹಾಕಿ, ಶಶಾಂಕನಿಗೆ ಫೋನು ಮಾಡಿ ವಿಷಯವನ್ನು ಹೇಳಿದಳು. "ನೀವು ಈಗ್ಲೇ ಪೋಲೀಸರಿಗೆ ಫೋನು ಮಾಡಿ... ಬೇಗ ಬಂದು ನನ್ನನ್ನು ಇಲ್ಲಿಂದ ಕರ್ಕೊಂಡು ಹೋಗಿ" ಎಂದಳು.

"ಸೀಮಾ, ನಿಮಗೆ ಏನೂ ಆಗಿಲ್ಲ ತಾನೇ.... ಕ್ಷೇಮವಾಗಿದೀರಿ ತಾನೇ?" ಆತಂಕದಿಂದ ಕೇಳಿದ.

"ಹ್ಞೂಂ ನನಗೆ ಏನೂ ಆಗಿಲ್ಲ. ಬರುವಾಗ ವಾಣೀನೂ ಕರ್ಕೊಂಡು ಬನ್ನಿ. ನಾನು ಕಾಯ್ತಾ ಇರ್ತೀನಿ" ಎಂದು ಹೇಳಿ ಕೆಳಗೆ ಇಳಿದು ಬಂದಳು. ಗೌತಮನ ತಂದೆ-ತಾಯಿ ಮಲಗಿದ್ದ ರೂಮಿನ ಬಾಗಿಲನ್ನು ಸದ್ದಾಗದಂತೆ ಹೊರಗಿನಿಂದ ಭದ್ರಪಡಿಸಿದಳು. ವಾಣಿಗೆ ಫೋನು ಮಾಡಿ, ಕೆಳದನಿಯಲ್ಲಿ ವಿಷಯವನ್ನು ತಿಳಿಸಿದಳು. "ಸುಧಾಮ ಇಂಥೋನು ಅಂತ ನಂಗೆ ಗೊತ್ತಿರಲಿಲ್ಲ. ಅಣ್ಣ ತಮ್ಮ ಇಬ್ಬರೂ ಒಂದೇ ಜಾತಿ.... ಗೌತಮ ನನ್ನನ್ನು ಪ್ರೀತಿಸ್ತಿದ್ದ. ಅವನು ಮಾಡಿದ್ದು ಹೇಯವಾದ ಕೆಲಸ.... ಇವನಿಗೆ ಮದುವೆಯಾಗಿ ಒಂದು ಮಗು ಸಹ ಇದೆ.... ಮೃಗಗಳು.... ಮೃಗಗಳು.." ಎಂದಳು.

"ಸಮಾಧಾನ ಮಾಡ್ಕೋ. ನೀನು ಧೈರ್ಯವಂತೆ. ನಿನ್ನನ್ನು ನೀನು ಕಾಪಾಡಿಕೊಂಡಿದೀಯ. ಪೋಲೀಸರು ಬರೋವರ್ಗ್ಗೂ ಯಾವುದೇ ಕಾರಣಕ್ಕೂ ನೀನು ರೂಮಿನ ಬಾಗಿಲುಗಳನ್ನು ತೆಗೆಯಬೇಡ. ಭಯ ಪಟ್ಕೋಬೇಡ" ಎಂದಳು.

"ಪೋಲೀಸರು ಬೇಗ ಬರದೇ ಇದ್ರೆ ಅಕ್ಕಪಕ್ಕದವರನ್ನು ಕೂಗಿ ಕರೆದು, ಎಲ್ಲಾ ಹೇಳ್ತೀನಿ. ಇವರ ಮಾನ ಹರಾಜಾಗುತ್ತೆ...." ಅಷ್ಟರಲ್ಲಿ ಪೋಲೀಸು ಜೀಪು ಮನೆಯ ಮುಂದೆ ಬಂದು ನಿಂತಿತು. "ಬಂದ್ರು ಅಂತ ಕಾಣುತ್ತೆ. ನೀವೂ ಬೇಗ ಬಂದ್ಬಿಡಿ" ಎಂದು ಹೇಳಿ, ಮಾತನ್ನು ಕಟ್ ಮಾಡಿ, ವೆರಾಂಡದ ಕಿಟಕಿಯಿಂದ ಇಣುಕಿದಳು.

ಪೋಲೀಸರು ಕಾಲಿಂಗ್ ಬೆಲ್ ಮಾಡಿದರು. ಸೀಮಾ ಅನುಮಾನಿಸುತ್ತಾ ಬಾಗಿಲನ್ನು ತೆರೆದಳು..."ಇಲ್ಲಿ ಏನೋ ಗಲಾಟೆ ನಡೆದಿದೆ ಅಂತ ಕಂಪ್ಲೆಂಟ್ ಬಂದಿದೆ.... ಏನಾಯ್ತು? ನೀವು ಯಾರು...?" ಸಬ್ ಇನ್ಸ್‌ಪೆಕ್ಟರ್ ಅಧಿಕಾರ ವಾಣಿಯಿಂದ ಕೇಳಿದ.

ಅಷ್ಟರಲ್ಲಿ ಗೌತಮನ ತಂದೆ ತಾಯಿ ಒಳಗಿನಿಂದ ಬಾಗಿಲನ್ನು ಜೋರಾಗಿ ಬಡಿದು, "ಬಾಗಿಲು ತೆಗೀರಿ...ತೆಗೀರಿ" ಎಂದು ಕೂಗುತ್ತಿದ್ದರು.

"ಯಾರದು? ಒಳಗಿರೋದು... ಕೂಡಿಹಾಕಿದ್ದು ಯಾರು?" ಎಂದು ಕೇಳಿದರು.

"ಏನೋ ನಂಗೊತ್ತಿಲ್ಲ... ನಾನು ಮೇಲಿನ ರೂಮಿನಲ್ಲಿ ಮಲಗಿದ್ದೆ...ಅವನು ನನ್ನನ್ನು ರೇಪ್ ಮಾಡಕ್ಕೆ ಬಂದ... ನಾನು ಹೊಡೆದು ಬೀಳಿಸಿ, ಹೊರಗೆ ಬಂದು

ಶಶಾಂಕ್‌ಗೆ ಫೋನು ಮಾಡಿದೆ... ಅವರೇ ನಿಮಗೆ ತಿಳಿಸಿದ್ದು... ಅಲ್ಲಿ ಮೇಲಿನ ರೂಮಿನಲ್ಲಿ ಆ ಕ್ರಿಮಿನಲ್ ಬಿದ್ದಿದ್ದಾನೆ. ಮೊದಲು ಅವನನ್ನು ಅರೆಸ್ಟ್ ಮಾಡಿ" ಎಂದಳು.

ಪೋಲೀಸಿನವನು ಅವರಿಬ್ಬರೂ ಇದ್ದ ರೂಮಿನ ಬಾಗಿಲನ್ನು ತೆರೆದ. ಇಬ್ಬರೂ ಹೊರಬಂದು ಗಾಬರಿಯಿಂದ "ಏನಾಯ್ತು? ನೀವುಗಳ್ಯಾಕೆ ಬಂದಿದೀರಿ?" ಎಂದು ಕೇಳಿದರು.

"ನಿಮ್ಮನ್ನು ನಿಧಾನವಾಗಿ ವಿಚಾರಿಸಿಕೊಳ್ತೀವಿ. ಮೇಲೆ ಒಬ್ಬ ವ್ಯಕ್ತಿ ಕುಡಿದು ಬಿದ್ದಿದಾನಂತೆ. ಅವನನ್ನು ಕರಕೊಂಡು ಬರ್ತೀವಿ" ಎಂದು ಮಹಡಿ ಹತ್ತಿದರು.

"ಸೀಮಾ ಇದೆಲ್ಲಾ ಏನಮ್ಮ.... ಸುಧೀ ಎಲ್ಲಿ....? ಯಾವೋನು ಬಂದ....? ನಮ್ಮನ್ಯಾಕೆ ಎಬ್ಬಿಸಲಿಲ್ಲ....?" ರಂಗಣ್ಣ ಕೇಳಿದರು.

ಅಷ್ಟರಲ್ಲಿ ಮೇಲೆ ಹೋಗಿದ್ದವರು ಸುಧಾಮನನ್ನು ಎಳೆದುಕೊಂಡು ಬಂದರು. ಅವನು ತಲೆ ತಗ್ಗಿಸಿ, ಕೆಟ್ಟ ಮೋರೆ ಹಾಕಿಕೊಂಡು ನಿಂತಿದ್ದ..."ಸುಧೀ... ಏನಾಯ್ತೋ... ಮೇಲೆ ಯಾಕೆ ಹೋಗಿದ್ಯೋ....?" ತಾಯಿ ಅವನ ಹತ್ತಿರ ಬಂದು ಕೇಳಿದಳು.

ಇಷ್ಟೆಲ್ಲಾ ನಡೆಯುವಷ್ಟರಲ್ಲಿ ವಾಣೀ ಹಾಗೂ ಶಶಾಂಕ್ ಅಲ್ಲಿಗೆ ಬಂದರು. ಸುಧಾಮ, ಶಶಾಂಕನನ್ನು ಕೆಕ್ಕರಿಸಿ ನೋಡಿದ. "ನೀನ್ಯಾಕೋ ಇಲ್ಲಿಗೆ ಬಂದೆ? ಈಗ್ಲೇ ಹೋಗು" ಎಂದು ಅಬ್ಬರಿಸಿದ.

"ವಾಣೀ ಫೋನು ಮಾಡಿದ್ರು.... ಸೀಮನ್ನ ಅವರ ಮನೆಗೆ ಕರೆದುಕೊಂಡು ಹೋಗಕ್ಕೆ ಬಂದೆ....? ಸೀಮಾ ನಡೀರಿ... ವಾಣೀ ಇವರನ್ನು ಕರ್ಕೊಂಡು ಬನ್ನಿ" ಎಂದು ಹೇಳಿ ಎರಡು ಹೆಜ್ಜೆ ನಡೆದ.

"ಏಯ್ ನಿಲ್ಲೋ, ನೀನ್ಯಾರು ಇವಳನ್ನು ಕರೆದುಕೊಂಡು ಹೋಗೋಕ್ಕೆ... ಇವಳು ಈ ಮನೆಯ ಸೊಸೆ... ಇವಳು ಇಲ್ಲೇ ಇರ್ತಾಳೆ. ಅವಳಾಗಿಯೇ ಇಲ್ಲಿಗೆ ಬಂದಿದ್ದಾಳೆ. ನಿನ್ನ ಜೊತೇಲಿ ಬರೋಲ್ಲ."

"ಅದನ್ನು ಸೀಮಾ ಹೇಳಲಿ... ನೀನ್ಯಾರು ಹೇಳೋಕ್ಕೆ? ಸೀಮಾ ನೀವ್ಯಾಕೆ ಇಲ್ಲಿಗೆ ಬಂದ್ರಿ?" ಏನನ್ನೂ ತಿಳಿಯದವನಂತೆ ಪ್ರಶ್ನಿಸಿದ. ಶಶಾಂಕ ಗದರಿದ.

"ಷಟಪ್!" ಪೋಲೀಸ್ ಅಧಿಕಾರಿ ಕೂಗು ಹಾಕಿದ. "ಇಲ್ಲಿ ನಾನಿದೀನಿ. ನಮ್ಮ ಸ್ಟೇಷನ್‌ಗೆ ಫೋನು ಮಾಡಿದವರು ಯಾರು...? ಇವರು ಯಾರು...?" ಸೀಮಾಳ ಕಡೆ ನೋಡಿ ಕೇಳಿದ.

"ನಿಮಗೆ ಫೋನು ಮಾಡಿದವನು ನಾನು. ಇವರು ಸೀಮಾ ಅಂತ ನನ್ನ ಸ್ನೇಹಿತೆ... ಇವನು ಇವರೊಡನೆ ಕೆಟ್ಟದಾಗಿ ವರ್ತಿಸಿದಾನೆ... ಇವರು ವಾಣೀಗೆ ಫೋನು ಮಾಡಿದ್ದಾರೆ. ವಾಣಿ ನನಗೆ ಫೋನು ಮಾಡಿ, ನಿಮಗೆ ಕಂಪ್ಲೆಂಟ್

ಕೊಡುವಂತೆ ಹೇಳಿದರು."

"ವಾಣಿ ಯಾರು?"

"ವಾಣಿ ನನ್ನ ಸ್ನೇಹಿತೆ.... ನಾನು ಅವರ ಮನೆಯಲ್ಲಿ ಇದ್ದೆ.... ಇವರು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದರು. ಮಹಡಿ ಮೇಲಿನ ರೂಮಿನಲ್ಲಿ ನಾನು ಇರುವಂತೆ ಹೇಳಿದರು. ಆದರೆ ಒಂದು ಹೊತ್ನಲ್ಲಿ.... ಈ ವ್ಯಕ್ತಿ ನನ್ನ ರೂಮಿಗೆ ಬಂದ."

"ಎಲ್ಲಾ ಸುಳ್ಳು.... ಇವಳಾಗಿಯೇ ಇಲ್ಲಿಗೆ ಬಂದಿದಾಳೆ. ನನ್ನ ತಮ್ಮನ ಹೇಂಡತಿ. ಇವಳ ಮಾತನ್ನು ನಂಬಬೇಡಿ" ಎಂದ.

"ನೀವು ಸುಮ್ನಿರಿ, ಮಧ್ಯೆ ಮಾತಾಡ್ಬೇಡಿ...ಕಂಪ್ಲೇಂಟ್ ಬಂದಿದೆ. ವಿಚಾರಣೆ ಮಾಡ್ಬೇಕು. ಈಗ ನಿಮ್ಮನ್ನು ಪೋಲೀಸ್ ಸ್ಟೇಷನ್‌ಗೆ ಕರ್‍ಕೊಂಡು ಹೋಗ್ತೀನಿ....ಅಲ್ಲಿ ನಿಮ್ಮೆಲ್ಲರ ಹೇಳಿಕೆಯನ್ನು ತೆಗೆದುಕೊಂಡು, ಕೇಸ್ ಫೈಲ್ ಮಾಡ್ತೀವಿ....ಅದನ್ನೆಲ್ಲ ನಮಗೆ ಬಿಡಿ.... ಇವರನ್ನು ಕರ್‍ಕೊಂಡು ಹೋಗಿ ಜೀಪ್‌ನಲ್ಲಿ ಕೂರಿಸಿ." ಅಧಿಕಾರಿ ಆಜ್ಞೆ ಮಾಡಿದ.

"ಅರೆಸ್ಟ್ ಮಾಡ್ಬೇಡಿ ಸಾರ್.... ಇವನು ಅಂಥೋನಲ್ಲ. ಮದುವೆ ಆಗಿದೆ, ಮಗು ಇದೆ. ಇವಳು ಯಾವುದೋ ದ್ವೇಷದ ಮೇಲೆ ಇವನ ಮೇಲೆ ಆರೋಪವನ್ನು ಹೊರಿಸ್ತಿದ್ದಾಳೆ. ಇವನನ್ನು ಬಿಟ್ಬಿಡಿ" ತಾಯಿ ಕೇಳಿಕೊಂಡಳು.

"ಕಂಪ್ಲೆಂಟ್ ಬಂದ ಮೇಲೆ ಹಾಗೆಲ್ಲಾ ಸುಮ್ಮನೇ ಬಿಡೋಕ್ಕಾಗೋಲ್ಲ... ಇವರದ್ದು ತಪ್ಪು ಏನೂ ಇಲ್ಲ ಅಂತ ತೀರ್ಮಾನವಾದರೆ ಬಿಟ್ಟು ಬಿಡ್ತೀನಿ."

"ಈಗಾಗ್ಲೇ ಒಬ್ಬ ಮಗ ಜೈಲಿನಲ್ಲಿದ್ದಾನೆ. ಇವನನ್ನು ಕರ್‍ಕೊಂಡು ಹೋದರೆ ನಮ್ಮ ಗತಿ ಏನು? ಇವನ ಹೆಂಡತಿಯ ಗತಿ ಏನು...? ನೀನ್ಯಾಕೋ ಹೋಗಿದ್ದೆ ಇವಳ ರೂಮಿಗೆ?"

"ಅಮ್ಮ, ನಾನು ಹೋಗಿರ್ಲಿಲ್ಲ. ಇವಳೇ ಕರೆದಿದ್ದು."

"ಅವಳು ಕರೆದಿದ್ರೆ ನೀನ್ಯಾಕೆ ಹೋದೆ? ನನ್ನನ್ನು ಎಬ್ಬಿಸಬಾರದಾಗಿತ್ತಾ....?"

"ಸುಮ್ನೇ ಪ್ರಲಾಪ ಮಾಡ್ಬೇಡಿ.... ನಮ್ಮ ಕೆಲಸ ಮಾಡೋಕ್ಕೆ ನಮಗೆ ಬಿಡಿ" ಎಂದು ಹೇಳಿ, ಪೋಲೀಸು ಅಧಿಕಾರಿ ಜೋರು ಮಾಡಿದ. ಎಲ್ಲರೂ ತೆಪ್ಪಗಾದರು. ಪೋಲೀಸರು ಅವನನ್ನು ಅರೆಸ್ಟ್ ಮಾಡಿಕೊಂಡು ಜೀಪಿನಲ್ಲಿ ಕೂರಿಸಿಕೊಂಡರು. ಸೀಮಾ ಶಶಾಂಕನ ಹಿಂದೆ ಹೊರಟಳು. ಆಕೆ ಇವಳನ್ನು ಉರಿಗಣ್ಣಿನಿಂದ ನೋಡಿದಳು.

"ಎಂಥಾ ಹೆಂಗಸೇ ನೀನು? ನನ್ನ ಗಂಡಮಕ್ಕಳ ಮೇಲೆ ಕಣ್ಣು ಹಾಕಿ ಅವರ ಜೀವನವನ್ನೇ ಹಾಳು ಮಾಡ್ತಿದೀಯಲ್ಲ... ಯಾಕೆ...? ಏನ್ಮಾಡಿದ್ರು ಅವರು...?

ಗೌತಮ ನಿನ್ನನ್ನು ಪ್ರೀತಿಸ್ಲಿಲ್ವಾ....? ಅವನಿಗೋಸ್ಕರ ಬಂದೆ ಅಂತ ಸುಳ್ಳು ಯಾಕೆ ಹೇಳ್ದೆ?"

"ಗೌತಮ ನನಗೆ ದ್ರೋಹ ಮಾಡಿಬಿಟ್ಟ.... ಅವನು ಅಪರಾಧಿ ಅಂತ ನಿಮ್ಮ ಈ ಮಗನೇ ನನಗೆ ಹೇಳಿದರು... ಅಂಥವನನ್ನು ಸುಳ್ಳು ಸಾಕ್ಷಿ ಹೇಳಿ, ನಾನು ಉಳಿಸಿಕೊಳ್ಳಬೇಕಾ....? ನನ್ನ ಪ್ರೀತಿಗೆ ನಿಮ್ಮ ಮಗ ಅರ್ಹನಲ್ಲ. ನೀವುಗಳು ಎಂಥೋರು ಎಂದು ಗೊತ್ತಾಯ್ತಲ್ಲ?"

"ಹೀಗೆಲ್ಲಾ ಸುಳ್ಳು ಹೇಳಿ ನನ್ನ ಹೊಟ್ಟೆ ಉರಿಸಬೇಡ್ವೇ.... ಇಬ್ಬರೂ ಮುಗ್ಧರು. ಇಷ್ಟಕ್ಕೆಲ್ಲಾ ಶಶಾಂಕನೇ ಕಾರಣ. ಅವನ ಮಾತನ್ನು ಕೇಳಿ, ನೀನು ಹಾಳಾಗ್ತಿದೀಯ ಅಷ್ಟೇ. ನಾವು ನಿನ್ನನ್ನು ನಂಬಿ ಕೆಟ್ಟೆವು ಅಷ್ಟೇ. "

"ನಾನು ಯಾರ ಮಾತನ್ನೂ ಕೇಳಿಲ್ಲ. ಹೇಗೂ ಕೋರ್ಟಿನಲ್ಲಿ ವಿಚಾರಣೆ ನಡೆಯುತ್ತಲ್ಲ. ಆಗ ನಿಜ ಯಾವುದು, ಸುಳ್ಳು ಯಾವುದು ಅನ್ನೋದನ್ನು ನೀವೇ ಕಿವಿಯಾರೆ ಕೇಳೋರಂತೆ...ನಿಮ್ಮ ಬಗ್ಗೆ ನನಗೆ ಅಯ್ಯೋ ಅನ್ನಿಸುತ್ತೆ....ಆದರೆ, ನನ್ನಿಂದ ಯಾವ ಸಹಾಯವನ್ನು ನಿರೀಕ್ಷಿಸಬೇಡಿ..." ಎಂದು ಹೇಳಿ ಹೊರ ನಡೆದಳು.... ಮೂವರೂ ಕಾರನ್ನು ಹತ್ತಿದರು. ಕಾರು ಪೋಲೀಸ್ ಸ್ಟೇಷನ್ ಕಡೆಗೆ ಓಡಿತು.

ಸೀಮಾಳಿದ್ದ ರೂಮಿನಲ್ಲಿ ಚೆಲ್ಲಾಪಿಲ್ಲಿಯಾಗಿದ್ದ ವಸ್ತುಗಳ ಫೋಟೋಗಳನ್ನು ತೆಗೆದುಕೊಂಡು ಮಾಹಿತಿಗಳನ್ನು ಬರೆದುಕೊಂಡು, ಫಿಂಗರ್ ಪ್ರಿಂಟ್‌ಗಳನ್ನು ಸಂಗ್ರಹಿಸಿ, ಆ ರೂಮಿಗೆ ಬೀಗವನ್ನು ಹಾಕಿ ಸೀಜ್ ಮಾಡಿದ್ದರು... ಗೌತಮನ ತಾಯಿ ತಲೆಯ ಮೇಲೆ ಕೈ ಹೊತ್ತು ಕುಳಿತರು. "ಎಂಥಾ ಗತಿ ಬಂತಲ್ಲ... ಏನೋ ಮಾಡೋಕ್ಕೆ ಹೋಗಿ ಏನೋ ಆಯ್ತಲ್ಲ.... ಸುಧಾಮನೂ ಇಂಥೋನು ಅಂತ ನಾನು ಅಂದುಕೊಂಡಿರ್ಲಿಲ್ಲ. ಸೀಮಾನ್ನ ಮನೆಗೆ ಕರ್ಕೊಂಡು ಬಂದು ತಪ್ಪು ಮಾಡಿಬಿಟ್ಟೆವು....ನನ್ನ ಮಕ್ಕಳಿಗೆ ಯಾಕಿಂಥ ಕೆಟ್ಟ ಬುದ್ಧಿ ಬಂತೋ...?" ಅತ್ತಳು.

"ಅತ್ತರೇನು ಪ್ರಯೋಜನ? ಈಗ ಮಕ್ಕಳನ್ನು ಹೇಗೆ ಬಿಡಿಸಿಕೊಂಡು ಬರೋದು ಅನ್ನೋದನ್ನ ಯೋಚಿಸೋಣ.... ನಮಗೋಸ್ಕರ ಓಡಾಡಿ ಮಾಡೋರು ಯಾರು ಇದ್ದಾರೆ? ಸೀಮಾ ನಮ್ಮ ಕಡೆಗೆ ಇದ್ದಿದ್ದರೆ, ಎಲ್ಲಾ ಸರಿ ಹೋಗ್ತಿತ್ತು.... ಇವಳು ಗೌತಮನ ಮಾತಿಗೆ ಒಪ್ಪಿ ಬಂದವಳು. ಸುಧೀ ಅವಳ ರೂಮಿಗೆ ಹೋಗದೇ ಇದ್ದಿದ್ದರೆ ಈ ಹಗರಣ ಆಗುತ್ತಿರಲಿಲ್ಲ. ಗೌತಮನ ಬಿಡೂ ಆಗೋವರ್ಗೂ ಸೀಮಾ ಇಲ್ಲಿಯೇ ಇರ್ತಿದ್ಲು. ಈಗ ಎಲ್ಲಾ ಎಡವಟ್ಟು ಆಗಿ ಹೋಯ್ತು. ಮೇಲೆ ಮೇಲೆ ನಮ್ಮ ಮರ್ಯಾದೆ ಹೋಗ್ತಿದೆ. "

"ಈಗ ಒಂದೇ ದಾರಿ ಇರೋದು... ಸೀಮಾನ್ನ, ಶಶಾಂಕನ್ನ ಕೇಳಿಕೊಳ್ಳೋಣ .... ಅವರು ಕೇಸನ್ನು ವಾಪಸ್ಸು ತೆಗೆದುಕೊಂಡರೆ, ಮಕ್ಕಳಿಗೆ ಬಿಡುಗಡೆ ಸಿಗಬಹುದು. ಆದರೆ ಕೇಳೋದು ಹೇಗೆ.... ತಲೆ ತಗ್ಗಿಸುವಂತೆ ಆಗಿದೆ...."

"ಅಂತೂ ಇಬ್ಬರೂ ನಮ್ಮನ್ನು ಭೂಮಿಗೆ ಇಳಿಸಿಬಿಟ್ಟರು. ಗೌತಮ ಜೈಲು ಸೇರಿದ್ದನ್ನು ನೋಡಿಯಾದರೂ ಸುಧಾಮ ಹೀಗೆ ವರ್ತಿಸಬಾರದಾಗಿತ್ತು. ಇವನಿಗೇನು ಕೇಡುಗಾಲ ಬಂತೋ? ಇವನನ್ನು ನಂಬಿಕೊಂಡಿರುವ ಹೆಂಡತಿ ಇದಾಳೆ ಅನ್ನುವ ಜ್ಞಾನ ಬೇಡ್ವಾ....? ಅವಳಿಗೆ ಈ ವಿಷಯ ತಿಳಿದ್ರೆ, ಇವನ ಜೊತೆ ಸಂಸಾರ ಮಾಡ್ತಾಳಾ....? ಅವಳೂ ಬಿಟ್ಟು ಹೋಗ್ತಾಳೆ.. ನಾವು ಯಾತಕ್ಕೋಸ್ಕರ ಬದುಕಿರ್ಬೇಕು?"

"ಸಾಕ್ಮಾಡು, ಮುಂದೆ ಏನು ಮಾಡ್ಬೇಕು ಅಂತ ಯೋಚಿಸೋಣ. ನಿನ್ನ ಸೊಸೆಗೆ ಈ ವಿಷಯವನ್ನು ತಿಳಿಸುವುದು ಬೇಡ."

"ಇಂಥಾ ವಿಷಯಗಳು ಬೇಗ ಹರಡುತ್ತವೆ.... ಆದಷ್ಟು ಬೇಗ ಏನಾದ್ರು ಮಾಡಿ, ಸುಧಾಮನನ್ನು ಬಿಡಿಸಿಕೊಳ್ಳಬೇಕು. ನಾನು ನಾಳೇನೇ ಸೀಮಾಳ ಹತ್ತಿರ ಮಾತಾಡ್ತೀನಿ." ಎಂದಳು. ಇಬ್ಬರೂ ಬೆಳಗಿನವರೆಗೂ ನಿದ್ದೆ ಇಲ್ಲದೆ ಕಾಲ ಕಳೆದರು.

*****

ಪೋಲೀಸ್ ಸ್ಟೇಷನ್‌ನಲ್ಲಿ ಕಂಪ್ಲೇಂಟ್ ಬರೆಸಿ, ಹೇಳಿಕೆಗಳನ್ನು ಕೊಟ್ಟು ಸಹಿ ಮಾಡಿ ಮುಗಿಸುವ ಹೊತ್ತಿಗೆ, ಮಧ್ಯರಾತ್ರಿ ಕಳೆದು ಬೆಳಗಿನ ಜಾವ ಪ್ರಾರಂಭವಾಗಿತ್ತು. ಶಶಾಂಕ, ವಾಣಿ ಹಾಗೂ ಸೀಮಾಳನ್ನು ಹೊರಡಿಸಿಕೊಂಡು ಹೊರಟ. ವಾಣಿಯ ಮನೆಯ ಬಳಿ ಕಾರನ್ನು ನಿಲ್ಲಿಸಿದ. ಇಬ್ಬರೂ ಇಳಿದರು. ಸೀಮಾ ಮುಂದೆ ನಡೆದಳು.

"ವಾಣೀ ಸೀಮಾಳನ್ನು ಸ್ವಲ್ಪ ಚೆನ್ನಾಗಿ ನೋಡ್ಕೊಳ್ಳಿ.... ತುಂಬಾ ಬೇಸರ ಗೊಂಡಿದ್ದಾಳೆ" ಎಂದ.

"ಹೌದು ಶಶಾಂಕ್... ಇದೆಲ್ಲಾ ಅವಳಿಗೆ ಯಾಕೆ ಬೇಕಿತ್ತು...? ಇದರಿಂದ ಏನನ್ನು ಸಾಧಿಸಿದ ಹಾಗಾಯ್ತು?" ಏನೋ ಮಾಡ್ಲಿಕ್ಕೆ ಹೋಗಿ ಏನೋ ಆಯ್ತು."

"ಬೇಡ ಅಂತಂದ್ರೂ ಕೇಳಲಿಲ್ಲ... ಆದರೆ ಸುಧಾಮನೂ ಇಂಥೋನು ಅಂತ ನಂಗೆ ಗೊತ್ತಿರ್ಲಿಲ್ಲ."

"ಈಗ ಇನ್ನೂ ಒಂದು ಎವಿಡೆನ್ಸ್ ಸಿಕ್ಕಂತಾಯ್ತು.... ಈ ವಿಷಯ ಗೌತಮನಿಗೆ ತಿಳಿದರೆ, ಸೀಮಾಳನ್ನು ಸಾಕ್ಷಿ ಹೇಳುವಂತೆ ಬಲವಂತ ಪಡಿಸುವುದಿಲ್ಲ...ಅವನು ಇನ್ನೂ ಹೆದರಿರ್ತಾನೆ...."

"ಹೌದು... ಒಂದು ವಿಷಯದಲ್ಲಿ ಒಳ್ಳೇದೇ ಆಯ್ತು... ಆದರೆ ಸೀಮಾ

ತುಂಬಾ ಅಪ್ಸೆಟ್ ಆಗಿದಾಳೆ.... ಅವಳು ಏನಾದ್ರೂ ಮಾಡ್ಕೊಂಡ್ರೆ ಅಂತ ಭಯ ನಂಗೆ..."

"ಇಲ್ಲ, ಸೀಮಾ ಅಂಥೋಳಲ್ಲ....ಅವಳಿಗೆ ಬದುಕುವ ಆಸೆ ಇದೆ."

ವಾಣಿ ಎಂದಳು, "ಹಾಗೇ ಇವಳನ್ನು ನನಗೋಸ್ಕರ ಬದುಕಿಸಿಕೊಳ್ಳುವ ಆಸೆ ನನಗಿದೆ.... ನಾನು ಅವಳನ್ನು ಪ್ರೀತಿಸಲು ಪ್ರಾರಂಭಿಸಿದೀನಿ.... ಈ ವಿಷಯ ಅವಳಿಗೆ ತಿಳಿಯಲೇ ಬೇಕು.... ನನಗೋಸ್ಕರ ಅವಳು ಘಟ್ಟಿಯಾಗಬೇಕು.... ಕೆಲವು ದಿನಗಳು ಬೇಕಾದರೆ ಇಲ್ಲಿರಲಿ....."

"ಹೌದು, ಇವಳು ಈಗಲೇ ನಿಮ್ಮ ಮನೆಗೆ ಬರೋದು ಬೇಡ. ಅವರುಗಳಿಗೆ ಅನುಮಾನ ಬರುತ್ತೆ. ಸೀಮಾ ಬಾಗಿಲಲ್ಲಿ ಕಾಯ್ತಾ ನಿಂತಿದಾಳೆ.... ನಾನು ಹೊರಗಿನಿಂದ ಬೀಗ ಹಾಕ್ಕೊಂಡು ಬಂದಿದ್ದೆ. ನೀವೂ ಬನ್ನಿ, ಬೆಳಿಗ್ಗೆ ಕಾಫಿ ಕುಡಿದು ಹೋಗೋರಂತೆ."

ಹಾಗೆ ಅವಳು ಹೇಳಿದ್ದೇ ತಡ, ಅವನು ಇಂಜಿನ್ ಆಫ್ ಮಾಡಿ ಕೆಳಗಿಳಿದ. "ಹೌದು, ನಂಗೆ ಸ್ಟ್ರಾಂಗ್ ಕಾಫಿ ಬೇಕು....ನರಕ್ಕೆ ಚೈತನ್ಯ ಬೇಕಾಗಿದೆ" ಎಂದು ನಸುನಕ್ಕ.

"ಸೀಮಾ ನೀವು ರೆಸ್ಟ್ ತಗೊಳ್ಳಿ, ನಾನು ಇಲ್ಲೇ ಇರ್ತೀನಿ... ನೀವು ನಿಶ್ಚಿಂತೆಯಿಂದಿರಿ" ಎಂದು ಹೇಳಿ, ಸೋಫಾ ಮೇಲೆ ಕುಳಿತು ಬೆನ್ನಿಗೆ ಒರಗಿದ. ವಾಣಿ, ಮೂವರಿಗೂ ಬಿಸಿ ಬಿಸಿ ಕಾಫಿಯನ್ನು ತಂದಿತ್ತಳು.... ಕಾಫಿ ಕುಡಿದ ಸೀಮಾ ಹಾಗೂ ವಾಣಿ ಒಳಗಿನ ರೂಮಿಗೆ ಹೋಗಿದ್ದರು. ಶಶಾಂಕ ಹಾಗೇ ಕಣ್ಣು ಮುಚ್ಚಿದ. ಯಾಕೋ ಏನೋ ಯಾವುದೂ ಸರಿಯಾಗಲಿಲ್ಲ ಎಂದೆನಿಸಿತ್ತು. ಮತ್ತೂ ಹದಗೆಟ್ಟಿದೆ ಎನಿಸಿತ್ತು. ಬಾಲ್ಯದ ದಿನಗಳು ನೆನಪಿಗೆ ಬಂದವು. ಗೌತಮ, ಸುಧಾಮ ಇವನ ಸೋದರ ಮಾವನ ಮಕ್ಕಳು. ಒಂದೇ ಓರಗೆಯವರು. ಹಬ್ಬ ಹರಿದಿನಗಳಲ್ಲಿ ತಾಯಿಯೊಡನೆ ಇವನು ಮಾವನ ಮನೆಗೆ ಬರುತ್ತಿದ್ದ. ಒಟ್ಟಿಗೇ ಆಡುತ್ತಿದ್ದರು.

ಇಂಜಿನಿಯರಿಂಗ್ ಓದುವ ಕಾಲದಲ್ಲಿ ಗೌತಮ ಹಾಗೂ ಶಶಾಂಕ್ ಬೇರೆ ಬೇರೆ ಊರಿಗೆ ಹೊರಟು ಹೋಗಿದ್ದರು. ಸುಧಾಮ ಅದೇ ಊರಿನ ಸಮೀಪದ ಕಾಲೇಜಿನಲ್ಲಿ ಓದುತ್ತಿದ್ದ. ಆ ನಂತರ, ಇದೇ ಊರಿನ ಬೇರೆ ಬೇರೆ ಪ್ರೈವೇಟ್ ಕಂಪನಿಗಳಲ್ಲಿ ಇಂಜಿನಿಯರ್ ಆಗಿ ಕೆಲಸಕ್ಕೆ ಸೇರಿಕೊಂಡರು. ಅಲ್ಲಿ ಗೌತಮನಿಗೆ ಸೀಮಾಳ ಪರಿಚಯವಾಗಿತ್ತು. ಗೌತಮ ಸುಂದರ. ಹೆಣ್ಣು ಹುಡುಗಿಯರೊಡನೆ ಬೆರೆತು ಮಾತನಾಡುವುದೆಂದರೆ ಅವನಿಗೆ ಇಷ್ಟ. ಸೀಮಾ ಬಹಳ ಬೇಗ ಅವನಿಗೆ ಆಕರ್ಷಿತಳಾಗಿದ್ದಳು. ಅವಳೂ ಅವನೂ ಒಟ್ಟೊಟ್ಟಿಗೆ ತಿರುಗಾಡುತ್ತಿದ್ದರು. ಅವನು

ಒಮ್ಮೆ ಸೀಮಾಳನ್ನು ಶಶಾಂಕನಿಗೆ ಪರಿಚಯ ಮಾಡಿಕೊಟ್ಟ....ತಾವಿಬ್ಬರೂ ಮದುವೆಯಾಗಲಿದ್ದೇವೆಂದು ತಿಳಿಸಿದ್ದ. ಆದರೆ, ತಾಯಿಗೆ ಸೀಮಾ ಇಷ್ಟವಿಲ್ಲವೆಂದು ಕೂಡಾ ಹೇಳಿದ್ದ.... ಆದರೂ ಒಂದಲ್ಲ ಒಂದು ದಿನ ತಾನು ಅವಳನ್ನೇ ಮದುವೆಯಾಗುವುದಾಗಿ ಹೇಳಿದ್ದ.... ಆದರೆ ಆದದ್ದೇನು...?

ಶಶಾಂಕನಿಗೆ ಗೊತ್ತಾಗಿದ್ದ ರೇಣುಕಾ, ಬೇರೆ ಊರಿನವಳು... ಮದುವೆ ನಿಶ್ಚಯವಾದ ಸಮಯದಲ್ಲಿ ಅವಳು ಇದೇ ಊರಿನ ಯಾವುದೋ ಒಂದು ಆಫೀಸ್‌ನಲ್ಲಿ ಕೆಲಸದಲ್ಲಿದ್ದಳು... ಒಬ್ಬ ವಯಸ್ಸಾದ ಹೆಂಗಸಿನ ಮನೆಯಲ್ಲಿ ಪೇಯಿಂಗ್ ಗಸ್ಟ್ ಆಗಿದ್ದಳು. ಶಶಾಂಕ ಅವಳನ್ನು ಭೇಟಿಯಾಗುತ್ತಿದ್ದ. ಅಲ್ಲಿ ಇಲ್ಲಿ ಕರೆದುಕೊಂಡು ಹೋಗುತ್ತಿದ್ದ.

"ಶಶೀ, ನಾನು ನನ್ನ ಗರ್ಲ್‌ಫ್ರೆಂಡ್‌ನ ನಿನಗೆ ಪರಿಚಯ ಮಾಡಿಕೊಟ್ಟೆ. ನೀನು ನಿನ್ನ ವುಡ್‌ಬೀಯನ್ನು ತೋರಿಸಿಯೇ ಇಲ್ಲವಲ್ಲೋ... ಯಾಕೋ?" ಎಂದು ಬೆನ್ನಿನ ಮೇಲೆ ಗುದ್ದಿದ.

"ಮದುವೆಗೆ ಬರ್ತೀಯಲ್ಲೋ. ಆಗ ಪರಿಚಯ ಮಾಡಿಸ್ತೀನಿ"

"ಮದುವೆಗೆ ಇನ್ನೂ ತುಂಬಾ ದಿನಗಳಿವೆಯಲ್ಲೋ.... ಹೋಗಲಿ ವಾರದಲ್ಲಿ ಎಷ್ಟು ಬಾರಿ ಮೀಟ್ ಮಾಡ್ತೀರಿ? ಏನೇನು ಮಾತಾಡ್ತೀರಿ....? ಇನ್ನು ಏನೇನು?" ಕೀಟಲೆಯ ಧ್ವನಿಯಲ್ಲಿ ಕೇಳಿದ್ದ.

"ಅಂಥದ್ದೆಲ್ಲ ಏನೂ ಇಲ್ಲ. ಅವಳು ಒಬ್ಬರ ಮನೇಲಿ ಪೇಯಿಂಗ್ ಗೆಸ್ಟ್ ಆಗಿದಾಳೆ.... ಅಲ್ಲಿಗೆ ನಾನು ಹೋಗುವಂತಿಲ್ಲ.... ಮದುವೆಗೆ ಮೊದಲು ಅವಳು ನಮ್ಮ ಮನೆಗೆ ಬರುವಂತಿಲ್ಲ. ವಾರದಲ್ಲಿ ಒಂದು ದಿನ ಅದೂ ಫ್ರೀಯಾಗಿದ್ದರೆ.... ಹೋಟೆಲ್ಲಿಗೆ ಹೋಗ್ತೀವಿ, ಅಷ್ಟೇ...."

"ಎಂಗೇಜ್ ಮೆಂಟ್ ಆದ ಮೇಲೆ ಏನು ಭಯವೋ.... ನಾವು ಹಾಗೇನೂ ಇಲ್ಲಪ್ಪಾ. ಬಹಳ ಫ್ರೀಯಾಗಿದ್ದೀವಿ.... ಆಗ ಈಗ ಡಿನ್ನರ್‌ಗೆ ಹೋಗ್ತೀವಿ. ಅವಳ ಮನೆಯವರ ಒಪ್ಪಿಗೆ ಇದೆ. ಯಾವ ರೆಸ್ಟ್ರಿಕ್ಷನ್ನೂ ಇಲ್ಲ.... ಅಪ್ಪ ಅಮ್ಮ ಊರಿನಲ್ಲಿಲ್ಲ ದಾಗ ಅವಳನ್ನು ನಮ್ಮ ಮನೆಗೆ ಕರ್ಕೊಂಡು ಬರ್ತೀನಿ. ಇಬ್ಬರೂ ಎಂಜಾಯ್ ಮಾಡ್ತೀವಿ... ನಿನಗೂ ಆ ಆಸೆ ಇದ್ದರೆ ಹೇಳು... ನಮ್ಮ ಮನೆಯಲ್ಲಿ ಪ್ರೈವೆಸಿ ಇದೆ... ಮದುವೆಗೆ ಮುಂಚಿನ ಸಂಗ ಸುಖ ಹೇಗಿರುತ್ತೆ ಅಂತ ಟ್ರೈ ಮಾಡು....ನಾನು ಯಾರಿಗೂ ಹೇಳೋಲ್ಲ..."

"ನನಗೆ ಇದೆಲ್ಲ ಬೇಕಿಲ್ಲ ಗೌತಮ್. ನಮ್ಮಿಬ್ಬರ ಸಂಬಂಧ ಏನೇ ಇದ್ದರೂ ಮದುವೆಯ ನಂತರ.... ಈಗ ಇವೆಲ್ಲಾ ಸರಿಯಲ್ಲ."

"ಏ, ಗೂಷ್ಲೂ... ವಯಸ್ನಲ್ಲಿ ಎಂಜಾಯ್ ಮಾಡ್ಬೇಕು. ಅದ್ಯಾಕೆ ಹಾಗೆ

ಹೆದರ್‍ತೀಯೋ... ನಾನು ನಿನಗೆ ಹೇಗಿರ್ಬೇಕು ಅಂತ ಹೇಳಿಕೊಡ್ತೀನಿ... ನೋಡ್ತಿರು... ಒಂದು ದಿನ ನಿನಗೆ ಒಂದು ಸಪ್ರೈಸ್ ಕಾದಿರುತ್ತೆ...."

"ನನಗೆ ಯಾವ ಸಪ್ರೈಸೂ ಬೇಡ. ಈಗ ನಾನು ಹೇಗಿದೀನೋ ಹಾಗೇ ಸರಿಯಾಗಿದೀನಿ..." ಎಂದು ಹೇಳಿ, ಅಲ್ಲಿಂದ ಕದಲಿದ್ದ. ಇದ್ದಕ್ಕಿದ್ದಂತೆ ಗೌತಮ ನಾಡಿದ ಮಾತುಗಳು ನೆನಪಿಗೆ ಬಂದವು. ಆ ಸಮಯದಲ್ಲಿ ಆ ಸಪ್ರೈಸ್ ಅಂದರೆ, ಬೇರೆ ಯಾವುದೋ ಹುಡುಗಿಯನ್ನು ನನಗೆ ಪರಿಚಯಿಸಿ ಕೊಡ್ತಾನೆ ಅಂತ ಅಂದುಕೊಂಡಿದ್ದ. ಆ ನಂತರ ಗೌತಮನನ್ನು ಕಂಡರೂ ದೂರ ಹೊರಟು ಹೋಗುತ್ತಿದ್ದ.

ಆ ಸಪ್ರೈಸ್‌ನ ನನಗಾಗಿ ಸಿದ್ಧ ಮಾಡಿದ್ದನಾ... ರೇಣುಕಾನ್ನ ತನ್ನ ಮನೆಗೆ ಫೋನು ಮಾಡಿ ಕರೆಸಿಕೊಂಡಿದ್ನಾ...? ರೇಣುಕಾ ನನಗೆ ಫೋನು ಮಾಡಿ, ಈ ವಿಷಯವನ್ನು ತಿಳಿಸಿದ್ದರೆ... ಈ ಅನಾಹುತ ನಡೆಯುತ್ತಿರಲಿಲ್ಲ. ಶಶಾಂಕ ಬರುತ್ತಾನೆ ಅಂತ ಅವಳಿಗೆ ಹೇಳಿರಬಹುದೇ... ಅವಳು ನಂಬಿರಬಹುದೇ..ಆದರೆ, ಅವಳಿಗೆ ಗೌತಮನ ಪರಿಚಯವೇ ಇರಲಿಲ್ಲ.... ಗೌತಮನಿಗೆ ರೇಣುಕಾಳ ಫೋನು ನಂಬರ್ರು ಸಿಕ್ಕಿದ್ದೆಲ್ಲಿ...?

ರೇಣುಕಾ, ತನ್ನ ರೂಂ ಮೇಟ್‌ಗೆ, ತಾನು ಶಶಾಂಕನ ಜೊತೆಯಲ್ಲಿ ಷಾಪಿಂಗ್ ಹೋಗ್ತೀನಿ ಅಂದ್ಲಂತೆ.... ಅವಳ್ಯಾಕೆ ಸುಳ್ಳು ಹೇಳಿದಳು...? ಆ ದಿನ ನಾವು ಮೀಟ್ ಮಾಡುವ ವಿಚಾರವೇ ಇರಲಿಲ್ಲ. ಮತ್ತೆಲ್ಲಿಗೆ ಹೋದಳು....? ಇವನಿಗೆಲ್ಲಿ ಸಿಕ್ಕಿದಳು...? ಅವನು ನಿಜವನ್ನು ಹೇಳುತ್ತಾನೆಯೇ? ಅವನಿಂದ ನಿಜವನ್ನು ಕಕ್ಕಿಸ್ತೀನಿ ಅಂತ ಸೀಮಾ ಪ್ರಯತ್ನ ಮಾಡಿ ಅವರ ಮನೆಯಲ್ಲಿ ತೋರಿಕೆಗೆ ಇರುವ ನಾಟಕ ವನ್ನು ಆಡುತ್ತೇನೆಂದಳು. ಆದರೆ ಆದದ್ದೇನು...? ಸುಧಾಮ ಇವಳ ಮೇಲೆ ಅತ್ಯಾಚಾರ ಮಾಡಲು ಪ್ರಯತ್ನಿಸಿದ. ಸಧ್ಯ ಸೀಮಾ ತಪ್ಪಿಸಿಕೊಂಡಳು. ಇಲ್ಲದಿದ್ದರೆ, ರೇಣುಕಾಳಿಗೆ ಆದ ಗತಿಯೇ ಇವಳಿಗೂ ಆಗುತ್ತಿತ್ತೋ ಏನೋ..... ಮುಂದೆ ಊಹಿಸಲಾಗದವನಂತೆ ಕಣ್ಣುಗಳನ್ನು ಬಿಟ್ಟ... ಮನೆಯ ಮುಂದೆ ಆಟೋ ರಿಕ್ಷಾ ನಿಂತ ಸದ್ದು ಕೇಳಿಸಿತು. ಯಾರಿರಬಹುದು ಎಂದುಕೊಂಡು ಕಿಟಕಿಯ ಪರದೆಯನ್ನು ಸರಿಸಿ ನೋಡಿದ. ಗೌತಮನ ತಂದೆ ತಾಯಿ ರಿಕ್ಷಾದಿಂದ ಇಳಿದರು. ಇವರಿಬ್ಬರೂ ಈ ಹೊತ್ನಲ್ಲಿ ಇಲ್ಲಿಗೇಕೆ ಬಂದರು...? ಸೀಮಾಳನ್ನು ಮತ್ತೆ ಕರೆದು ಕೊಂಡು ಹೋಗಲು ಬಂದಿರಬಹುದೇ... ಯಾಕೆ ಬಂದಿದಾರೆ ಅಂತ ಕೇಳಿಯೇ ಬಿಡ್ತೀನಿ ಎಂದುಕೊಂಡು ಮುಂಬಾಗಿಲನ್ನು ತೆರೆದ.

"ನೀನೇನು ಮಾಡ್ತಿದೀಯೋ ಇಲ್ಲಿ...? ಸೀಮಾನ್ನ ಕರಿ" ಆಕೆ ಹೇಳಿದಳು.

"ನೀವು ಬರ್ತೀರಿ ಅಂತ ಗೊತ್ತಿತ್ತು. ನಿಮಗೋಸ್ಕರವೇ ಕಾಯ್ತಿದ್ದೆ. ಏನಾಗ್ಬೇಕು

ನಂಗೇ ಹೇಳಿ..."

"ಸೀಮಾ ಹತ್ರ ಮಾತಾಡ್ಬೇಕು"

"ಏನು ಬಾಕಿ ಉಳಿದಿದೆ...? ಅವಳು ನಿಮ್ಮ ಹತ್ರ ಮಾತಾಡುಲ್ಲ."

"ಅದನ್ನು ಹೇಳೋಕ್ಕೆ ನೀನ್ಯಾರು? ಅವಳನ್ನು ಕರಿ... ಸೀಮಾ... ಸೀಮಾ..." ಎಂದು ಎತ್ತರದ ಧ್ವನಿಯಲ್ಲಿ ಕರೆದಳು. ಎಚ್ಚರಗೊಂಡ ವಾಣಿ ಹೊರಕ್ಕೆ ಬಂದಳು. ಅವರಿಬ್ಬರನ್ನೂ ನೋಡಿ ಹಾಗೇ ನಿಂತು, ಶಶಾಂಕನ ಕಡೆ ತಿರುಗಿದಳು.

"ಸೀಮಾ ಹೇಗಿದಾಳೆ ಅಂತ ನೋಡೋಕೆ ಬಂದಿದಾರೆ" ವ್ಯಂಗವಾಗಿ ಹೇಳಿದ.

"ಅವಳನ್ನು ಕ್ಷಮೆ ಕೇಳ್ತೀವಿ..." ಆತ ಕೈ ಮುಗಿದಾಗ, ಶಶಾಂಕನಿಗೆ ಮುಜುಗರವಾಯಿತು.

"ಕ್ಷಮೆ ಕೇಳಿದ್ರೆ ಏನು ಪ್ರಯೋಜನ ಮಾವಾ? ನಿಮ್ಮ ಮಕ್ಕಳ ಶಿಕ್ಷೆ ಕಡಿಮೆ ಆಗೋಲ್ಲ..."

"ನಾನು ನಿನ್ನ ಪ್ರೀತಿಯ ಮಾವ ಕಣೋ, ನನ್ನ ಹತ್ರ ಹೀಗೆ ಮಾತಾಡಿ, ಮನಸ್ಸನ್ನು ನೋಯಿಸ್ಬೇಡ. ಒಂದೇ ಒಂದು ಸಾರಿ ಸೀಮಾ ಹತ್ರ ಮಾತಾಡಿ ಹೊರಟು ಹೋಗ್ತೀವಿ. ಅಪರಾಧ, ಕೋರ್ಟು, ಶಿಕ್ಷೆ ಎಲ್ಲಾ ನನಗೂ ತಿಳಿದಿದೆ.... ಅದ್ಸರಿ... ಸೀಮಾಳನ್ನು ನೀನ್ಯಾಕೆ ಇಷ್ಟು ರಕ್ಷಣೆ ಮಾಡ್ತಿದೀಯಾ.... ನಿನಗೂ ಅವಳಿಗೂ ಏನು ಸಂಬಂಧ...?"

"ಸೀಮಾ ನನ್ನ ಸ್ನೇಹಿತೆ..ನಾನು ಹೆಂಗಸರನ್ನು ತುಂಬಾ ಗೌರವಿಸ್ತೀನಿ... ಸೀಮಾಳನ್ನು ಗೌತಮ ಕೆಡಿಸಿದಾನೆ... ಸುಧಾಮ ಅತ್ಯಾಚಾರ ಮಾಡಲು ಪ್ರಯತ್ನಿಸಿದಾನೆ... ಅವಳು ಪೋಲೀಸರ ಮೊರೆ ಹೋಗಿದ್ದಾಳೆ. ನಾನು ಅವಳಿಗೆ ಸಪೋರ್ಟ್ ಮಾಡ್ತಿದೀನಿ... ಸಧ್ಯದಲ್ಲೇ ಮದುವೆ ಸಹ ಆಗ್ತೀವಿ... ಈಗ ಅವಳ ರಕ್ಷಣೆಯ ಜವಾಬ್ದಾರಿ ನನ್ನದು. ಇದು ತಪ್ಪಾ ಮಾವ...? ನೀವು ಸ್ಕೂಲಲ್ಲಿ ಪಾಠ ಹೇಳಿ ಕೊಡುವ ಮೇಷ್ಟ್ರಾಗಿದ್ರಿ... ಅತ್ತೆ ನೀವು ಒಬ್ಬರು ಹೆಣ್ಣು... ಗೌತಮ ಇಬ್ಬಿಬ್ಬರು ಹೆಣ್ಣುಗಳಿಗೆ ಅನ್ಯಾಯ ಮಾಡಿದಾನೆ... ಇದು ಸರಿ ಅನಿಸುತ್ತಾ ನಿಮಗೆ...? ನಿಮಗೂ ಒಬ್ಬಳು ಮಗಳಿದ್ದಿದ್ದರೆ.... ಅವಳಿಗೆ ಇಂಥಾ ಪರಿಸ್ಥಿತಿ ಒದಗಿದ್ದರೆ ಏನ್ಮಾಡ್ತಿದ್ರಿ?" ಇಬ್ಬರ ಮುಖವೂ ಪೆಚ್ಚಾಯಿತು. ಆದರೂ ನುಡಿದಳು.

"ನೀನು ಚಿಕ್ಕೋನು. ಈ ಭಾಷಣವೆಲ್ಲಾ ಬೇಡ. ಸೀಮಾ ಹತ್ರ ನಾವು ಮಾತಾಡಿದ್ರೆ, ನೀನೇನು ಕಳೆದ್ಕೊಳ್ತೀಯಾ... ಈಗ ಅವಳು ನನ್ನ ಸೊಸೆ. ..ಮದುವೆಯ ನಂತರ ಅವಳು ನಿನ್ನ ಹೆಂಡ್ತಿ....ಆಮೇಲೆ ಅವಳ ಮೇಲೆ ಅಧಿಕಾರವನ್ನು ಚಲಾಯಿಸುವಂತೆ.... ಎಲ್ಲಮ್ಮ ವಾಣೀ, ಅವಳನ್ನು ಕರೀ....ಅಥವಾ ನಾವೇ ಅಲ್ಲಿಗೆ ಹೋಗ್ತೀವಿ...." ವಾಣಿ ಅವಳನ್ನು ಕರೆದಳು. ಸೀಮಾ ಒಪ್ಪಲಿಲ್ಲ.

"ಅವರನ್ನು ಹೋಗಿ ಅಂತ ಕಳಸ್ಬಿಡಿ ವಾಣೀ" ಎಂದಳು.

"ಈಗ ಹೋದ್ರೆ ಮತ್ತೆ ಬರ್ತಾರೆ.... ಏನ್ಹೇಳ್ತಾರೋ ಅಲ್ಲಾಗೆ ಕೇಳ್ಬಿಡು."

"ಸರಿ, ಅದೂ ಮುಗೀಲಿ.." ಎಂದು ಗೊಣಗುತ್ತಾ ಹೊರಕ್ಕೆ ಬಂದಳು. ಆಕೆ ಅವಳ ಬಳಿಗೆ ಬಂದಳು.

"ಹೇಗಿದೀಯಮ್ಮ ಸೀಮಾ?" ಎನ್ನುತ್ತಾ ಮೈದಡವಿಗಳು. ಸೀಮಾ ಕೆಟ್ಟ ಮುಖ ನೋಡಿ ಮೈ ಮುದುಡಿದಳು. "ಸಧ್ಯ ದೇವರ ದಯೆ, ನಿನಗೆ ಏನೂ ಆಗಿಲ್ಲವಲ್ಲ.... ಅವನಿಗೇನು ದುರ್ಬುದ್ಧಿ ಬಂದಿತ್ತೋ... ಹೆಂಡ್ತಿ ಬೇರೆ ಬಾಣಂತಿ.... ಹಾಗಂತ ಹೀಗೆ ಮಾಡೋದಾ? ಅದೂ ತಮ್ಮನ ಹೆಂಡತಿಯಾಗೋಳ ಹತ್ರ.... ಇನ್ನೂ ನಾಲ್ಕು ಬಡೀಬೇಕಾಗಿತ್ತು.." ಸೀಮಾ ತಡೆದಳು.

"ಇದನ್ನು ಹೇಳೋಕ್ಕೆ ನೀವು ಇಲ್ಲಿಯ ತನಕ ಬರಬೇಕಾಗಿರ್ಲಿಲ್ಲ. ಫೋನಿನಲ್ಲಿ ಮಾತಾಡಿದ್ರೂ ಆಗ್ತಿತ್ತು."

"ಎದುರಿಗೆ ನೋಡಿ ಕ್ಷಮೆ ಕೇಳೋಣ ಅಂಥ ಬಂದಿದೀವಮ್ಮ.... ನಮ್ಮ ಮಕ್ಕಳು ಮಾಡಿದ ತಪ್ಪಿಗೆ ನಾವು ಅನುಭವಿಸ್ತಿದೀವಿ... ದೊಡ್ಡ ಮನಸ್ಸು ಮಾಡಿ ಕ್ಷಮಿಸಿ ಬಿಡು."

"ಕ್ಷಮಿಸುವಂಥ ತಪ್ಪಾ ಅದು, ಆಂಟೀ?" ವಾಣಿ ಪ್ರಶ್ನಿಸಿದಳು.

"ಹೌದಮ್ಮ, ನಾನು ಒಪ್ಕೋತೀನಿ. ಆದರೆ ವಿಚಾರಣೆ ನಡೆದು ತೀರ್ಮಾನ ಬಂದ ಮೇಲೆ ತಾನೇ ತಪ್ಪು ಅಥವಾ ಅಲ್ಲ ಅಂತ ಗೊತ್ತಾಗೋದು... ಆದರೆ ಕ್ಷಮೆ ಅನ್ನೋದು ಸಹ ಇದೆಯಲ್ಲ."

"ಅದನ್ನೆಲ್ಲ ಕೋರ್ಟ್ಸು ತೀರ್ಮಾನ ಮಾಡುತ್ತೆ. ನನ್ನನ್ನು ಏನೂ ಕೇಳ್ಬೇಡಿ."

"ನಮ್ಮ ಮಕ್ಕಳಿಬ್ಬರೂ ನಮ್ಮಿಂದ ದೂರ ಆಗಿ ಹೋದ್ರೆ, ನಾವು ವಯಸ್ಸಾದೋರು ಹೇಗೆ ಇರೋದು.... ನೀನಾದ್ರೂ ಹೇಳೋ ಶಶಾಂಕ...."

"ನಿಮ್ಮ ಮಕ್ಕಳು ಇದನ್ನೆಲ್ಲಾ ಯೋಚಿಸ್ಬೇಕಾಗಿತ್ತು.... ಈಗ ನಾನೇನು ಹೇಳೋಕಾಗುತ್ತೆ."

"ಇಬ್ಬರೂ ಅವಿವೇಕಿಗಳು. ತಿಳುವಳಿಕೆ ಸಾಲದು. ನಿನ್ನ ಹಾಗೆ ಜಾಣರಲ್ಲ. ಗೌತಮನ ಬಿಡುಗಡೆಗೆ ಸಹಾಯ ಮಾಡೋದನ್ನಾ ಬಿಟ್ಟು, ಸುಧಾಮ ತಾನೂ ತಪ್ಪು ಮಾಡಿದ. ಆದರೆ ಅವನ ಹೆಂಡತಿ, ಹಾಗೂ ಮಗುವಿಗ್ಯಾಕೆ ಶಿಕ್ಷೆ....? ಸುಧಾಮನ ಹೆಂಡತಿ, ಒಂದು ತಿಂಗಳ ಮಗುವಿನ ಬಾಣಂತಿ. ಅವಳಿಗೆ ಈ ವಿಷಯ ತಿಳಿದರೆ ಕುಸಿದು ಬೀಳ್ತಾಳೆ. ಅವಳ ಮಗುವಿನ ಭವಿಷ್ಯದ ಗತಿ ಏನು...? ಒಂದು ಸಾರಿ ಜೈಲಿನಲ್ಲಿದ್ದ ಅಂತ ಹರಡಿದರೆ ಸಾಕು... ಅವನ ವ್ಯಕ್ತಿತ್ವವೇ ಹಾಳಾಗಿ ಹೋಗುತ್ತೆ... ಅವನ ಸಂಸಾರ ಹಾಳಾಗಿ ಹೋಗುತ್ತದೆ. ಈಗ ಅದನ್ನು

ಉಳಿಸುವುದು ನಿನ್ನ ಕೈಲಿದೆ...."

"ಸುಧಾಮನ ಅಪರಾದ ಏನೂಂತ ನಿಮ್ಮ ಮನೇಲೇ ನಡೆದಿರೋದ್ರಿಂದ ನಿಮಗೆ ಗೊತ್ತಿದೆ. ಇವಳ ಮನಸ್ಸಿಗೆ ಘಾಸಿ ಆಗಿದೆ.... ಇವಳ ಬಾಳು ಹಾಳಾಗುಲ್ವಾ?" ವಾಣೀ ನುಡಿದಳು.

"ನಮಗೆ ಗೊತ್ತು. ಹೀಗಾಗ್ಬಾರದಾಗಿತ್ತು. ಇದೊಂದು ಸಾರೀ ಕ್ಷಮಿಸಿಬಿಡು. ಭಾರೀ ಅಪರಾಧ ನಡೆಯುವ ಮೊದಲೇ ದೈವವಶಾತ್ ತಪ್ಪಿದೆ. ಅವನು ಜೈಲಿಗೆ ಹೋದರೆ ಅವನ ಸಂಸಾರ ಹಾಳಾಗಿ ಹೋಗುತ್ತದೆ. ಅವನ ಬದುಕು ಕೆಟ್ಟು ಹೋಗುತ್ತದೆ. ಅವನಿಗೆ ತಿದ್ದಿಕೊಂಡು ಬಾಳಲು ಅವಕಾಶ ಮಾಡಿಕೊಡು.... ದಯವಿಟ್ಟು ಕೇಸನ್ನು ಹಿಂದಕ್ಕೆ ತೆಗೆದುಕೋ... ಅವರಿಬ್ಬರೂ ನಿನ್ನ ತಂಟೆಗೆ ಬರದಂತೆ ನಾವು ನೋಡಿಕೊಳ್ತೀವಿ...ಇದೊಂದು ಸಾರಿ, ಇಬ್ಬರನ್ನೂ ಕ್ಷಮಿಸಿ ಬಿಡಮ್ಮಾ...." ಆಕೆ ಕೈ ಮುಗಿದು, ಕಣ್ಣೀರು ಸುರಿಸಿದಳು.

ಶಶಾಂಕ ಸೀಮಾ ಕಡೆ ನೋಡಿದ. ಅವಳು ಕಲ್ಲಿನಂತೆ ನಿಂತಿದ್ದಳು. ವಾಣಿ ಮುಂದೇನು ಎನ್ನುವಂತೆ ಶಶಾಂಕನನ್ನು ಕಣ್ಣಿನಲ್ಲೇ ಪ್ರಶ್ನಿಸಿದಳು. "ಶಶಾಂಕ್, ನೀನಾದ್ರೂ ಇವಳಿಗೆ ಹೇಳೋ... ಈ ರೀತಿ ದ್ವೇಷ ಸಾಧಿಸುವುದರಿಂದ ಏನು ಪಯೋಗ ...? ನೀವು ಇಬ್ಬರೂ ಇನ್ನೂ ಬಾಳಿ ಬದುಕಬೇಕಾದವರು.... ಇದನ್ನೆಲ್ಲಾ ಬಿಟ್ಟು, ಇಬ್ಬರೂ ಮದುವೆ ಮಾಡಿಕೊಂಡು ಸುಖವಾಗಿರಿ.... ನಿಮ್ಮಿಬ್ಬರ ಮದುವೆಗೆ ನಾವು ಅಡ್ಡಿ ಬರುವುದಿಲ್ಲ...."

"ಹಾಗಂತ, ಸ್ಟ್ಯಾಂಪ್ ಪೇಪರ್ ಮೇಲೆ ಬರೆದುಕೊಡಿ...." ವಾಣಿ ಎಂದಳು.

"ಬರೆದು ಕೊಡ್ತೀವಿ... ನಮ್ಮ ಮಕ್ಕಳು ಮನೆಗೆ ವಾಪಸ್ಸು ಬಂದರೆ ಸಾಕು. ಏನು ಬೇಕಾದ್ರೂ ಬರೆದುಕೊಡ್ತೀವಿ... ಅವರಿಬ್ಬರೂ ನಿಮ್ಮ ತಂಟೆಗೆ ಎಂದೂ ಬರದಂತೆ ಬರೆದು ಕೊಡ್ತೀನಿ" ಗೌತಮನ ತಂದೆ ಹೇಳಿದರು.

"ಸರಿ, ನೀವು ಇಷ್ಟು ಕೇಳಿಕೊಂಡ ಮೇಲೆ ನಾವು ಯೋಚಿಸಬೇಕು. ನಮಗೂ ಈ ಕೇಸು, ಕೋರ್ಟು ಅಂತ ಸಮಯ, ಹಣವನ್ನು ವೇಸ್ಟ್ ಮಾಡಲು ಇಷ್ಟವಿಲ್ಲ... ಆದರೆ ಗೌತಮ ಬಹಳ ದೊಡ್ಡ ಅಪರಾಧವನ್ನು ಮಾಡಿದಾನೆ. ಅದನ್ನು ಯಾರೂ ಕ್ಷಮಿಸಲು ಸಾಧ್ಯವಿಲ್ಲ. ಅವನು ತಾನು ಮಾಡಿರುವ ಅಪರಾಧವನ್ನು ಒಪ್ಪಿಕೊಂಡು, ಕ್ಷಮಿಸುವಂತೆ ಕೇಳಿಕೊಂಡು ಜೀವದಾನವನ್ನು ನ್ಯಾಯಾಧೀಶರಲ್ಲಿ ಬೇಡಿಕೊಳ್ಳಲಿ. ಅವನಿಗೆ ಶಿಕ್ಷೆ ಕಡಿಮೆ ಆದರೂ ಆಗಬಹುದು... ಒಳ್ಳೆಯವನಾಗಿ ಬದುಕಲು ಪ್ರಯತ್ನ ಪಡಲಿ. ಇದಕ್ಕಿಂದ ಹೆಚ್ಚು ನಾನು ಏನೂ ಮಾಡುವುದಿಲ್ಲ. ವಿಚಾರಣೆ ನಡೆಯಲಿ. ತೀರ್ಮಾನ ಪಡೆಯಲಿ... ನಾನು ಕೇಸನ್ನು ಮಾತ್ರ ಹಿಂದಕ್ಕೆ ತೆಗೆದುಕೊಳ್ಳು ವುದಿಲ್ಲ... ಹಾಗೆ ಮಾಡಿದರೆ, ಇಂಥಾ ಅಪರಾಧಗಳು ಹೆಚ್ಚುತ್ತವೆ. ಅಪರಾಧಿಗಳಿಗೆ

ಭಯವೇ ಇರುವುದಿಲ್ಲ. ಸಮಾಜದಲ್ಲಿ ಇಂಥವರು ಹೆಚ್ಚುತ್ತಾರೆ... ಇದು ಸರಿಯಾ ಯೋಚಿಸಿ ಮಾವಾ.... ನೀವು ಗುರುಗಳಾಗಿದ್ದವರು..."

"ಹೌದು ಶಶಾಂಕ್.... ಆದರೆ ಗೌತಮ ನನ್ನ ಮಗ ಕಣೋ.... ಇನ್ನೂ ಚಿಕ್ಕವನು, ಹೇಳಿದ್ನಲ್ಲ...."

"ಅವನು ತಪ್ಪನ್ನು ಒಪ್ಪಿಕೊಂಡು, ಕ್ಷಮಾಪಣೆಯನ್ನು ಕೇಳಿಕೊಳ್ಳಲಿ. ಕೋರ್ಟು ಏನು ನಿರ್ಧಾರ ನೀಡುತ್ತದೋ ಅದು ನನಗೆ ಒಪ್ಪಿಗೆ.... ನಿಮಗೋಸ್ಕರ ಇಷ್ಟನ್ನು ಮಾಡ್ತೀನಿ. ಇದಕ್ಕಿಂತ ಹೆಚ್ಚಿನದನ್ನು ನನ್ನಿಂದ ಅಪೇಕ್ಷಿಸಬೇಡಿ.... ಇನ್ನು ಸುಧಾಮನ ವಿಷಯ.... ಅದು ಸೀಮಾಗೆ ಸೇರಿದ್ದು. ಅವರು ನಿರ್ಧರಿಸಲಿ. ನಾನು ಈ ವಿಷಯದಲ್ಲಿ ತಲೆ ಹಾಕುವುದಿಲ್ಲ. ಆದರೆ ನೀವೇ ಯೋಚಿಸಿ ಮಾವಾ, ಸುಧಾಮ ಮನೆಗೆ ಹಿರಿಯ ಮಗನಾಗಿ, ತಮ್ಮ ಮಾಡಿದ ತಪ್ಪನ್ನೇ ಮಾಡಲು ಹೊರಟಿದ್ದನಲ್ಲ....ಇದಕ್ಕೆ ನೀವೇನು ಹೇಳ್ತೀರಿ....?"

"ಅವಿವೇಕಿಗಳು. ನನ್ನ ಮಕ್ಕಳು ಅವಿವೇಕಿಗಳು.... ಇವರಿಬ್ಬರ ಕಾರಣದಿಂದ ನಾವುಗಳು ಅವಮಾನವನ್ನು ಅನುಭವಿಸುವಂತಾಗಿದೆ.... ಈ ವಯಸ್ನಲ್ಲಿ ನಾವು ಮಕ್ಕಳು ಮೊಮ್ಮಕ್ಕಳೊಂದಿಗೆ ನಿರಾಳವಾಗಿ ಇರಬೇಕು ಅಂತ ಆಸೆ.... ನಾವು ಇವರಿಗೆ ಕೆಟ್ಟ ಬುದ್ಧಿಯನ್ನೂ ಕಲಿಸಿಕೊಡಲಿಲ್ಲ. ಆದರೆ ಇನ್ನು ಮುಂದಾದರೂ ಒಳ್ಳೆಯ ವರಾಗಿ ಬದುಕಲಿ ಎಂದು ಆಶಿಸುತ್ತೇವೆ. ಇದಕ್ಕೆ ನೀವಿಬ್ಬರೂ ಅವಕಾಶ ಮಾಡಿಕೊಡಿ. ಇಷ್ಟನ್ನೇ ನಾನು ಕೇಳಿಕೊಳ್ಳುವುದು.... ಆತ ಮತ್ತೆ ಕೈ ಮುಗಿದಾಗ ಶಶಾಂಕನಿಗೆ ಕೆಡುಕೆನಿಸಿತು.

"ವಾಣೀ, ಇವರಿಗೆ ಕಾಫಿ ಕೊಡಿ.... ನಾನು ಸೀಮಾಳ ಹತ್ತಿರ ಮಾತನಾಡ್ತೀನಿ" ಎಂದು ಹೇಳಿ ವರಾಂಡಕ್ಕೆ ಬಂದ. ಸೀಮಾ ಅವನ ಹಿಂದೆ ಬಂದಳು....

"ಸೀಮಾ, ನಂಗೇನ್ಮಾಡ್ಬೇಕು ಅಂತ ಅರ್ಥ ಆಗ್ತಿಲ್ಲ. ಇಬ್ಬರಿಗೂ ವಯಸ್ಸಾಗಿದೆ .... ಅವರನ್ನು ನೋಡ್ಕೋಳ್ಳೋಕೂ ಯಾರಿಲ್ಲ. ಅವರು ನಮ್ಮ ಬಳಿಗೆ ಬರದೇ ಇದ್ದಿದ್ದರೆ ಚೆನ್ನಾಗಿತ್ತು.... ಈಗ ಸಂಧಿಗ್ದಕ್ಕೆ ಸಿಕ್ಕಿಬಿದ್ದಿದ್ದೀನಿ. ಆದರೆ ನಿಮಗೆ ಹೀಗೇ ಮಾಡಿ ಅಂತ ನಾನು ಹೇಳುವುದಿಲ್ಲ. ನಿಮಗೆ ಹೇಗೆ ಸರಿ ಎನಿಸುತ್ತೋ ಹಾಗೆ ಮಾಡಿ.... ನಿಮಗೆ ಪೂರ್ಣ ಸ್ವಾತಂತ್ರವಿದೆ."

"ನಂಗೂ ತುಂಬಾ ಬೇಜಾರಾಗ್ತಿದೆ. ಇಂಥಾ ಸ್ಥಿತಿ ಯಾರಿಗೂ ಬರಬಾರದು. ಆದರೆ ಇದು ಕ್ಷಮೆಗೆ ಅರ್ಹವಾದ ಅಪರಾಧ ಅಲ್ಲ. ಒಂದು ವೇಳೆ ನಾವು ಅವರನ್ನು ಕ್ಷಮಿಸಿದರೂ ಜನ ನಮ್ಮನ್ನು ಸುಮ್ಮನೇ ಬಿಡ್ತಾರಾ....? ಇವರುಗಳು ಹೊರಬಂದ ಮೇಲೆ ಒಳ್ಳೆಯವರಾಗ್ತಾರೆ ಅಂತ ಏನು ಗ್ಯಾರೆಂಟಿ?"

"ಅದು ನಿಜ... ವಿಪರೀತ ಅನ್ಯಾಯವಾಗಿರುವುದು ರೇಣುಕಾಳ ತಂದೆ-

ತಾಯಿಗೆ. ಅವರು ಇವನನ್ನು ಖಂಡಿತಾ ಕ್ಷಮಿಸುವುದಿಲ್ಲ. ಆದರೆ, ಸುಧಾಮನ ವಿಷಯ ನಮ್ಮ ಹೊರತು ಬೇರೆ ಯಾರಿಗೂ ಗೊತ್ತಿಲ್ಲ. ಯಾರಿಗೂ ತಿಳಿಸುವುದು ಬೇಡ..."

"ಅಂದರೇ, ಸುಧಾಮನ್ನ ಕ್ಷಮಿಸು ಅಂತ ಹೇಳ್ತೀರಾ?"

"ಇಲ್ಲ, ಖಂಡಿತಾ ಹೇಳಲ್ಲ.... ಲಾಯರ್ರ ಹತ್ರ ಮಾತಾಡೋಣ. ಅವರು ಏನಂತಾರೋ ಹಾಗೇ ಮಾಡೋಣ. ಸ್ವಲ್ಪವಾದರೂ ಸರಿ, ಶಿಕ್ಷೆ ಅನುಭವಿಸಲಿ...." ಅವನು ಕಟುವಾಗಿ ನುಡಿದಾಗ, ಅವಳಿಗೂ ಪೆಚ್ಚಾಗಿತ್ತು.

"ಯಾಕೆ ಹೀಗಾಯ್ತು ಶಶಾಂಕ್.... ನಾವೇನು ಪಾಪ ಮಾಡಿದ್ವಿ?" ಅವಳು ಕೇಳಿದಾಗ, ಅವನಿಗೂ ಹಾಗೇ ಅನ್ನಿಸಿತ್ತು.

"ನಂಗೊತ್ತಿಲ್ಲ ಸೀಮಾ... ಏನೇ ಬಂದರೂ ಇಬ್ಬರೂ ಒಟ್ಟಿಗೇ ಎದುರಿಸೋಣ" ಎಂದ. ಅವಳು ಅವನ ಎದೆಗೆ ಒರಗಿದಳು. ಅವನು ಬೆನ್ನ ಮೇಲೆ ಕೈಯಾಡಿಸಿ, ಅವಳನ್ನು ಸರಿಸಿದ." ಒಳಗಡೆ ಅವರುಗಳು ಕಾಯ್ತಾ ಇದಾರೆ, ಹೋಗೋಣ... ಈಗ ನೀವು ಏನೇ ಡಿಸಿಷನ್ ತಗೊಂಡ್ರೂ ನನಗೆ ಸಮ್ಮತ....ನಾನು ಯಾವುದೇ ಒತ್ತಡ ಹೇರುವುದಿಲ್ಲ" ಎಂದ. ಇಬ್ಬರೂ ಒಳಕ್ಕೆ ಬಂದರು.

"ಏನಮ್ಮಾ ಸೀಮಾ... ಏನು ಯೋಚಿಸ್ದೆ?" ಆತ ಕೇಳಿದರು.

"ನಂಗೆ ಸ್ವಲ್ಪ ಸಮಯ ಬೇಕು. ನಾನು ಯೋಚಿಸ್ಬಿಟ್ಟು ತಿಳಿಸ್ತೀನಿ."

"ಆದಷ್ಟು ಬೇಗ ತಿಳಿಸಮ್ಮ... ಒಂದೊಂದು ನಿಮಿಷವೂ ಒಂದೊಂದು ಯುಗವಾಗಿ ಕಾಣ್ತಿದೆ... ನನ್ನ ಮೊಮ್ಮಗು ಹಾಲು ಹಸುಳೆ. ಅದರ ಅಮ್ಮ ಹಸೀ ಬಾಣಂತಿ. ಅವರಿಬ್ಬರನ್ನೂ ನೆನೆಸಿಕೊಂಡರೆ ಕರುಳು ಕಿತ್ತು ಬರುತ್ತೆ."

ಸೀಮಾಳ ಒಡಳೊಳಗೆ ಏನೋ ಹರಿದಂತಾಯ್ತು.... ನನ್ನ ಒಡಲೊಳಗೆ ಇರುವ ಮಗುವಾದರೂ ಇನ್ನೂ ರೂಪುಗೊಂಡಿಲ್ಲ.... ತಾನು ಜೀವ ತಾಳುತ್ತಿದ್ದೇನೆ ಎಂದು ಸಹ ತಿಳಿಯದು....ಬೇರೆಯವರಿಗೂ ಅಷ್ಟೇ.... ಈ ಮಗು ಶಶಾಂಕನದೆಂದೇ ಭಾವಿಸುತ್ತಾರೆ. ಆದರೆ ಆ ಮಗು! ಮಗುವಿನ ತಂದೆ ಜೈಲಿನಲ್ಲಿದ್ದಾನೆ ಅಂತ ಮಗುವಿನೆಡೆ ಬೊಟ್ಟು ಮಾಡುತ್ತಾರೆ. ಆಗ ಆ ತಾಯಿಗೆ ಎಷ್ಟು ಹಿಂಸೆ ಆಗುವುದಿಲ್ಲ....! ಈ ಪಾಪಿಯ ದೆಸೆಯಿಂದಾಗಿ ನಿರಪರಾಧಿಗಳಾದ ಅವರು ನಿಂದೆಯನ್ನು ಕೇಳಬೇಕಾಗುತ್ತದೆ. ಅದನ್ನು ತಾನೀಗ ತಪ್ಪಿಸಬಹುದು.

"ಏನಮ್ಮಾ ಏನೂ ಹೇಳ್ತಿಲ್ಲವಲ್ಲ. ತಳಮಳ ಹೆಚ್ಚಾಗ್ತಿದೆ.... ಇದರ ಬದಲು ವಿಷ ತಗೊಂಡು ಸಾಯೋದೇ ಮೇಲು ಅಂತ ಅನ್ನಿಸ್ತಿದೆ..."

"ಹೇಳಿದ್ನಲ್ಲ ಸಮಯ ಬೇಕು ಅಂತ. ಸ್ವಲ್ಪ ಸಮಯ ಕೊಡಿ.... ಹೀಗೆ ದಿಢೀರನೆ ಕೇಳಿದರೆ ಏನು ಹೇಳೋಕ್ಕಾಗುತ್ತೆ... ಈಗ ನೀವು ಹೋಗಿ... ಫೋನು

ಮಾಡಿ ತಿಳಿಸ್ತಾಳೆ..." ವಾಣಿ ನುಡಿದಳು.

"ನೀನಾದ್ರೂ ಒಪ್ಪಿಸಮ್ಮ ವಾಣಿ.... ಹೆತ್ತ ಒಡಲ ಸಂಕಟ ಬೇರೆ ಯಾರಿಗೂ ಅರ್ಥ ಆಗುಲ್ಲ. ಮುಂದೆ ನಿಮಗೇ ಮಕ್ಕಳಾದಾಗ, ಆ ಮಕ್ಕಳು ತೊಂದರೆಗೆ ಸಿಕ್ಕಿ ಬಿದ್ದಾಗ ಈ ಕಷ್ಟ ಕರಗುವಂತೆ ಮಾಡ್ತಾನೆ....ಇನ್ನು ಆ ದೇವರ ಮೇಲೆ ಭಾರ ಹಾಕ್ತೀನಿ....ನಡೀರಿ....ಇನ್ನು ಎಷ್ಟು ಕೇಳೋದು....?"

"ಒಂದ್ನಿಮಿಷ, ನೀವು ಕೂತ್ಕೊಂಡು ಕಾಫಿ ಕುಡೀರಿ... ಸಾಯಂಕಾಲದ ತನಕ ಸಮಯವನ್ನು ಕೊಡಿ... ಅಷ್ಟರಲ್ಲಿ ಸೀಮಾ ನಿರ್ಧಾರ ತಗೊಂಡಿರ್ತಾಳೆ..." ವಾಣಿ ನುಡಿದಳು.

"ಅವಳು ಬಾಯನ್ನೇ ಬಿಡ್ತಿಲ್ಲವಲ್ಲಮ್ಮ... ಈ ಮಾತನ್ನು ಹೇಗೆ ನಂಬೋದು...?" ಶಶಾಂಕನೂ ಸಂಶಯದಿಂದ ವಾಣಿಯ ಕಡೆ ನೋಡಿದ....ಸೀಮಾ ನನ್ನ ಸ್ನೇಹಿತೆ. ಅವಳೂ ನಾನು, ಕಷ್ಟ ಸುಖಗಳನ್ನು ಹಂಚಿಕೊಂಡಿದ್ದೇವೆ... ಅವಳ ಮನಸ್ನಲ್ಲಿ ಏನು ನಡೀತಿದೆ ಅಂತ ನನಗೆ ಅರ್ಥವಾಗ್ತುತ್ತಿದೆ... ನಾನೂ ಅವಳೂ ಕೂತು ಚರ್ಚಿಸಿ ನಂತರ ನಿಮಗೆ ತಿಳಿಸಿದರೆ ಆಯ್ತೋ ಇಲ್ವೋ....?"

"ಶಶಾಂಕ ಇದೆಲ್ಲಾ ಏನಪ್ಪಾ... ಇಷ್ಟು ಹೊತ್ತೂ ಮಾತನಾಡಿ, ಈಗ ಹೀಗೆ ಅಡ್ಡ ಗೋಡೆಯ ಮೇಲೆ ದೀಪ ಇಟ್ಟ ಹಾಗೆ ಮಾತಾಡಿದರೆ...?" ಶಶಾಂಕ ಉತ್ತರಿಸಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಅವರಿಬ್ಬರೂ ಹೊರಟರು. ಅವರಿಬ್ಬರೂ ಗೇಟನ್ನು ದಾಟುತ್ತಿದ್ದಂತೆ ಶಶಾಂಕನ ಮನಸ್ಸು ಕೆಟ್ಟ ಆಲೋಚನೆ ಮಾಡಿತು.

"ಇಬ್ಬರೂ ತುಂಬಾ ದುಃಖದಲ್ಲಿದ್ದಾರೆ... ತಮ್ಮ ಜೀವಕ್ಕೆ ಅಪಾಯ ಏನಾದರೂ ಮಾಡಿಕೊಂಡರೇ ಆ ಪಾಪ ನಮ್ಮನ್ನು ತಟ್ಟುತ್ತೆ... ಈಗ ಏನ್ಮಾಡೋದು...? ಅವರಿಬ್ಬರನ್ನೇ ಮನೆಗೆ ಕಳಿಸೋದು ಬೇಡ...ನಾನೂ ಅವರ ಜೊತೇಲಿ ಹೋಗ್ತೀನಿ... ಅವರಿಬ್ಬರನ್ನು ನಮ್ಮ ಮನೆಗೆ ಕರ್ಕೊಂಡು ಹೋಗ್ತೀನಿ."

"ನಾನೂ ಬರ್ತೀನಿ ಶಶಾಂಕ್... ಇಬ್ಬರಿಗೂ ವಯಸ್ಸಾಗಿದೆ. ಬಹಳವಾಗಿ ನೊಂದು ಹೋಗಿದಾರೆ... ಅಮ್ಮ ಅಪ್ಪ ಅವರಿಗೆ ಧೈರ್ಯ ಹೇಳಲಿ...."

"ಇಲ್ಲ ಶಶಾಂಕ್, ಅವರಿಗೆ ಈಗ ಬೇರೆ ಯಾರ ಮಾತೂ ತಲೆಗೆ ಹೋಗುವು ದಿಲ್ಲ... ಏನೋ ಒಂದು ಭರವಸೆಯನ್ನು ಇಟ್ಟುಕೊಂಡು ಬಂದಿದ್ದರು... ಅವರಿಗೆ ತುಂಬಾ ನಿರಾಸೆಯಾಗಿದೆ... ಕುಗ್ಗಿರುವ ಅವರ ನಡಿಗೆಯೇ ಹೇಳ್ತಿದೆ..." ವಾಣಿ ನುಡಿದಳು.

"ಶಶಾಂಕ್... ಅವರಿಬ್ಬರನ್ನೂ ಕರ್ಕೊಂಡು ಬನ್ನಿ. ನಾನು ಅವರ ಹತ್ರ ಮಾತಾಡ್ತೀನಿ." ಸೀಮಾ ಅವನ ತೋಳನ್ನು ಹಿಡಿದಳು... ಅವನು ಪ್ರಶ್ನಾರ್ಥಕವಾಗಿ ಅವಳನ್ನೇ ನೋಡಿದ.

"ಹೌದು ಶಶಾಂಕ್.... ಸುಮ್ಮನೇ ಸತಾಯಿಸುವುದರಲ್ಲಿ ಅರ್ಥವಿಲ್ಲ. ನಾನು ಮಾತಾಡ್ತೀನಿ. ಒಂದು ಇತ್ಯರ್ಥ ಮಾಡ್ತೀನಿ." ವಾಣಿ ಅವಳ ಮಾತನ್ನು ಅನುಮೋದಿಸಿದಳು. ಶಶಾಂಕ ಓಡಿ ಹೋಗಿ ಅವರಿಬ್ಬರನ್ನೂ ನಿಲ್ಲಿಸಿದ... ಇಬ್ಬರೂ ಅವನೊಡನೆ ಹಿಂತಿರುಗಿದರು.

ಕಣ್ಣೀರನ್ನು ಒರೆಸಿಕೊಳ್ಳುತ್ತಾ ಆಕೆ ಒಳಗೆ ಬಂದಳು. ಆಕೆಯ ಹಿಂದೆ, ಅವಮಾನಿತ ಮುಖವನ್ನು ಹೊತ್ತ ಆತ ಇಬ್ಬರೂ ಇವಳಿಗೆ ಕೈ ಮುಗಿದು ಸೋಫಾದ ಮೇಲೆ ಕುಳಿತರು. ಇವಳಿಗೆ ತನ್ನ ತಂದೆ ತಾಯಿಯ ನೆನಪಾಗಿತ್ತು. ಅವರಿಬ್ಬರೂ ಎಂದೂ ತಮ್ಮ ಮಕ್ಕಳಿಗಾಗಿ ಒದ್ದಾಡಿದ ನೆನಪಿಲ್ಲ. ಕೆಲವೇ ತಿಂಗಳುಗಳಲ್ಲಿ ತಾನು ತಾಯಿಯಾಗುತ್ತೇನೆ. ತನಗೂ ತಾಯಿಯ ಮಿಡಿತದ ಅನುಭವವಾಗುತ್ತದೆ.... ಆದರೆ ಆ ಮಗುವಿನ ಜನ್ಮ ರಹಸ್ಯ.... ತಿಳಿದಾಗ, ಎಲ್ಲರಿಗೂ ತಾನು ಮಾಡಿರುವ ತಪ್ಪು ಗೋಚರಿಸುತ್ತದೆ... ಎಲ್ಲರೂ ಮಗುವಿನೆಡೆ ಬೆರಳು ತೋರಿಸಬಹುದು. ಹೆಣ್ಣು ಮಗುವಾದರೆ, ನನ್ನಂತೆ ತಪ್ಪು ಮಾಡಬಹುದು. ಗಂಡು ಮಗುವಾದರೆ ಗೌತಮನಂತೆ ತಪ್ಪು ಮಾಡಬಹುದು... ಆದರೂ ಆ ಮಗು ತನ್ನದು. ಮಗು ಮಾಡುವ ತಪ್ಪುಗಳನ್ನು ನಾನು ಮನ್ನಿಸಬೇಕಾಗಬಹುದು. ... ಆಗ ನನ್ನ ಸ್ಥಿತಿಯೂ ಇವರಿಬ್ಬರಂತೆ ಆಗಬಹುದು... ಆಲೋಚನೆಯಲ್ಲಿ ಮುಳುಗಿದ್ದವಳನ್ನು ವಾಣಿ ಎಚ್ಚರಿಸಿದಳು.

"ಸೀಮಾ... ಅವರಿಬ್ಬರೂ ಕಾಯ್ತಾ ಇದಾರೆ.."

"ನಾನು ಸುಧಾಮನ ಮೇಲೆ ಕೊಟ್ಟಿರುವ ಕಂಪ್ಲೇಂಟನ್ನು ವಾಪಸ್ಸು ತೆಗೆದು ಕೊಳ್ತೀನಿ..." ಎಲ್ಲರೂ ಅವಳನ್ನೇ ದಿಟ್ಟಿಸಿದರು. "ಕೇಸನ್ನು ಹಿಂದಕ್ಕೆ ತೆಗೆದುಕೊಂಡ ಮಾತ್ರಕ್ಕೆ ನಾನು ಅವರನ್ನು ಕ್ಷಮಿಸಿದೀನಿ ಅಂತ ಅರ್ಥವಲ್ಲ....ಕೇವಲ ನಿಮ್ಮ ಸೊಸೆ ಹಾಗೂ ಮೊಮ್ಮಗುವಿನ ಭವಿಷ್ಯ ಹಾಳಾಗದಿರಲಿ ಅಂತ ಈ ತೀರ್ಮಾನಕ್ಕೆ ಬಂದಿದೀನಿ. ಇನ್ನು ಚಿಂತೆ ಮಾಡಬೇಡಿ..."

"ಮತ್ತೆ ಗೌತಮನ ಕೇಸು?"

"ಗೌತಮನ ಕೇಸು ನನಗೆ ಸಂಬಂಧಿಸಿದುದಲ್ಲ. ರೇಣುಕಾಳ ತಂದೆ-ತಾಯಿಯವರಿಗೆ ಸೇರಿದ್ದು... ಆ ಬಗ್ಗೆ ನನಗೆ ಏನೂ ತಿಳಿಸಿಲ್ಲ..."

"ಹಾಗಂದ್ರೆ ಹೇಗೆ...? ಅವನನ್ನು ಮರೆತು ಬಿಡ್ತೀಯಾ?" ಒಂದು ಘಳಿಗೆ ತಟಸ್ಥಳಾದಳು. ಒಡಲೊಳಗೆ ಜೀವ ಮಿಸುಕಾಡಿದ ಅನುಭವ. ಅವನನ್ನು ಮರೆಯಲು ಈ ಮಗು ಬಿಡುವುದೇ ಎಂದುಕೊಂಡಳು....

"ನೀವು ಒಪ್ಪಿಗೆ ಕೊಟ್ಟಿದ್ದರೇ, ನಾವಿಬ್ಬರೂ ಎಂದೋ ಮದುವೆಯಾಗಿರುತ್ತಿದ್ದೆವು. ಇಲ್ಲಿ ನಿಮ್ಮ ತಪ್ಪು ಇದೆ. ಈಗ ಮದುವೆಯ ಬಗ್ಗೆ ಮಾತಾಡ್ತೀರಿ...

ಅವನು ಬಿಡುಗಡೆಯಾಗಿ ಬರುವವರೆಗೂ ನಾನು ಅವನಿಗಾಗಿ ಕಾಯಬೇಕೆಂದು ಬಯಸ್ತೀರಾ...?" ನೇರವಾಗಿ ಕೇಳಿದಳು. ಆಕೆ ಮೆತ್ತಗಾದಳು.

"ಸುಧಾಮನ ಅಪರಾಧಕ್ಕೆ ಕಡೇ ಪಕ್ಷ ಮೂರು ವರ್ಷವಾದರೂ ಜೈಲು ಶಿಕ್ಷೆ ಆಗುತ್ತಿತ್ತು. ಅದು ತಪ್ಪಿದೆ. ಇನ್ನಾದರೂ ಅವನು ಮರ್ಯಾದೆಯಿಂದ ಇರಲಿ. ಹೆಂಡತಿಗೆ ದ್ರೋಹ ಮಾಡದಿರಲಿ." ಶಶಾಂಕನೆಂದ.

"ಹೌದು ಆಂಟಿ, ಸುಧಾಮ ಇನ್ನು ಮುಂದೆ ಯಾವ ಹೆಣ್ಣು ಮಕ್ಕಳ ತಂಟೆಗೂ ಹೋಗದಿರಲಿ. ಎಲ್ಲರೂ ಸೀಮಳಂತೆ ಇರುವುದಿಲ್ಲ." ವಾಣಿ ಎಂದಳು. ಸೀಮಾ ಒಳಗೆ ಹೊರಟು ಹೋಗಿದ್ದಳು.

"ಬನ್ನಿ, ನಿಮ್ಮಿಬ್ಬರನ್ನು ಮನೆಗೆ ಬಿಟ್ಟು ಬರ್ತೀನಿ..." ಇನ್ನು ಕೆಲವೇ ಗಂಟೆಗಳ ಒಳಗಾಗಿ ಸುಧಾಮ ಮನೆಗೆ ವಾಪಸ್ಸು ಬಂದಿರ್ತಾನೆ." ಅವರಿಬ್ಬರೂ ಭಾರವಾದ ಹೃದಯವನ್ನು ಹೊತ್ತು ಅವನೊಡನೆ ಹೊರಗೆ ನಡೆದರು.

ಶಶಾಂಕ ಸೀದಾ ಅವರಿಬ್ಬರನ್ನೂ ತನ್ನ ಮನೆಗೆ ಕರೆದುತಂದ. ಅವರಿಬ್ಬರನ್ನೂ ಕಂಡು ಹುಬ್ಬೇರಿಸಿದರು ಅವನ ತಂದೆ ತಾಯಿ. "ನಾನೀಗ ಪೋಲೀಸ್ ಸ್ಟೇಷನ್‌ಗೆ ಹೋಗ್ಬೇಕು. ಹಾಗೆ ಬರುವಾಗ ಸೀಮಾಳನ್ನೂ ಮನೆಗೆ ಕರೆತರ್ತೀನಿ. ಎಲ್ಲರೂ ಒಟ್ಟಿಗೆ ಕುಳಿತು ಊಟ ಮಾಡೋಣ. ವಿಜೀ ನಾನು ಬರೋವರ್ಗೂ ಅತ್ತೆ ಮಾವನ್ನ ಚೆನ್ನಾಗಿ ನೋಡ್ಕೊಳ್ಳೇ." ಎಂದು ಹೇಳಿ ಸ್ನಾನವನ್ನು ಮಾಡಿ ಕಾಫಿಯನ್ನು ಕುಡಿದು ಹೊರಟ. ಅವನ ಹಿಂದೆಯೇ ನಡೆದ ವಿಜಯ ಕೇಳಿದಳು.

"ಏನಾಯ್ತೋ ಶಶೀ... ಅತ್ತೆ ಮಾವ ಇಲ್ಲಿಗ್ಯಾಕೆ ಬಂದಿದಾರೆ...?" ಅವಳ ಮುಖ ಗೊಂದಲಗಳಿಂದ ತುಂಬಿತ್ತು.

"ಅದನ್ನೆಲ್ಲ ನಿಧಾನವಾಗಿ ಬಂದ್ಮೇಲೆ ಹೇಳ್ತೀನಿ..." ಎನ್ನುತ್ತಾ ಹೊರಟೇ ಬಿಟ್ಟ.

****

ಮನೆಯ ಮುಂದೆ ಕಾರು ನಿಂತಾಗ, ಎಲ್ಲರೂ ಮುಂಬಾಗಿಲಿಗೆ ಬಂದರು. ಕಾರನ್ನು ನಿಲ್ಲಿಸಿ ಶಶಾಂಕ್ ಇಳಿದ. ಅವನ ಪಕ್ಕದ ಸೀಟಿನಲ್ಲಿ ಕುಳಿತಿದ್ದ ಸೀಮಾ ಇಳಿದು ಅವನ ಪಕ್ಕ ನಿಂತಳು. ಹಿಂದಿನ ಸೀಟಿನಲ್ಲಿ ಕುಳಿತಿದ್ದ ಸುಧಾಮ ತಲೆ ತಗ್ಗಿಸಿ ನಿಂತ. ಅವನ ತಂದೆ ತಾಯಿ ಅವನ ಬಳಿಗೆ ಧಾವಿಸಿದರು. ಶಶಾಂಕ ಸೀಮಾಳ ಕೈ ಹಿಡಿದು ಮನೆಯತ್ತ ಹೆಜ್ಜೆ ಹಾಕಿದ. ತಾಯಿ ಇಬ್ಬರನ್ನೂ ನೋಡಿದಳು. ಮನದಲ್ಲಿ ಸಮಾಧಾನದ ಗೆರೆ ನಿಂತಿತು. "ಇಬ್ಬರೂ ಅಲ್ಲೇ ನಿಂತ್ಕೊಳ್ಳಿ. ಆರತಿ ಮಾಡ್ಕೊಂಡು ಬರ್ತೀನಿ. ವಾಣಿ ಬರ್ಲಿಲ್ವಾ, ಬಂದಿದ್ರೆ ಚೆನ್ನಾಗಿತ್ತು" ಎಂದಳು.

"ಬಿಡಮ್ಮ, ವಾಣಿ ಬರದೇ ಇದ್ದರೇನಾಯ್ತು. ಅತ್ತೆ ಇದಾರಲ್ಲ...ಅತ್ತೇ ಇಲ್ಬನ್ನಿ"

ವಿಜೀ ಜೋರಾಗಿ ಕರೆದಳು. ರುಕ್ಮಿಣಮ್ಮ ಒಳಗೆ ಹೋಗಿ ಕೆಂಪಾರತಿಯನ್ನು ಸಿದ್ಧ ಮಾಡಿಕೊಂಡು ಬಂದಳು. ಅಷ್ಟರಲ್ಲಿ ಗೌತಮನ ತಾಯಿ ಅಲ್ಲಿಗೆ ಬಂದಳು. ಕಾಲು ಮಣೆಗಳನ್ನಿಟ್ಟಳು.

"ಅತ್ತೇ...,ಇಬ್ಬರೂ ಆರತಿ ಎತ್ತಿ ಇವರಿಬ್ಬರನ್ನೂ ಬರಮಾಡಿಕೊಳ್ಳೋಣ.. ಬನ್ನಿ.... ತಟ್ಟೆ ಹಿಡ್ಕೊಳ್ಳಿ." ವಿಜಯ ಅವಸರಿಸಿದಳು.

"ಇದೇನೇ.... ವಿಜೀ.... ಈಗ್ಯಾಕೆ.... ಆರತಿ? ಏನಿದೆಲ್ಲಾ?" ಅಸಹನೆಯಿಂದ ಕೇಳಿದಳು.

"ಶಶಾಂಕನ ಮದುವೆ ನಿಂತು ಹೋಯ್ತು.... ಈ ಹುಡುಗಿಯ ಮದುವೆಯ ಕನಸೂ ಮುರಿದು ಹೋಯ್ತು.... ದೇವರ ಇಚ್ಛೆ ಬೇರೆಯೇ ಆಗಿರ್ಬೇಕು. ನಾನು ಸೀಮಾಳನ್ನು ನನ್ನ ಸೊಸೆಯನ್ನಾಗಿ ಮಾಡ್ಕೊಳ್ತೀನಿ... ನಿಂಗೆ ಮನಸ್ಸಿದ್ದರೆ, ಆರತಿ ಎತ್ತಿ ಆಶೀರ್ವಾದ ಮಾಡು. ಇಲ್ಲದಿದ್ದರೆ ಬಿಡು." ರುಕ್ಮಿಣಿ ಎಂದಳು.

"ಅತ್ತಿಗೆ ಯಾಕೆ ಹೀಗೆ ಮಾತಾಡ್ತೀರಿ? ಶಶಾಂಕ ನಮ್ಮ ಹುಡುಗನೇ... ಆದರೆ ಈ ಸೀಮಾ..."

"ನೋಡು ಶಾರದಾ... ಇಷ್ಟೆಲ್ಲಾ ಹಗರಣಗಳು ನಡೆದ ಮೇಲೆ ಸೀಮಾ ನಿನ್ನ ಸೊಸೆಯಾಗಲು ಸಿದ್ಧಳಾಗಿದಾಳೆ ಅಂತ ಅಂದ್ಕೊಂಡ್ಯಾ... ಬಲವಂತದಿಂದ ಯಾವ ಸಂಬಂಧವನ್ನೂ ಕೂರಿಸೋಕ್ಕೆ ಆಗುಲ್ಲ. ಆ ಆಸೆಯನ್ನು ಬಿಟ್ಟು ಬಿಡು. ಗೌತಮ ಜೈಲು ಶಿಕ್ಷೆಯನ್ನು ಮುಗಿಸಿ ಬರುವುದು ಇನ್ನೆಂದಿಗೋ... ಬಂದ ಮೇಲೆ ಅವನಿಗೆ ತಕ್ಕನಾದ ಹುಡುಗಿಯನ್ನು ಹುಡುಕಿ ನೀನೇ ಮದುವೆ ಮಾಡು. ಹೇಗೂ ನಿನಗೆ ಈ ಹುಡುಗಿ ಇಷ್ಟವಿರಲಿಲ್ಲ. ಆದರೆ, ನಮಗೆಲ್ಲ ಈ ಹುಡುಗಿ ಮೆಚ್ಚುಗೆಯಾಗಿದ್ದಾಳೆ. ಆಗ ಬಂದು ಬೆದರಿಕೆಯನ್ನು ಹಾಕಿದಿರಿ. ಮದುವೆಯನ್ನು ನಿಲ್ಲಿಸೋಕ್ಕೆ ಪ್ರಯತ್ನ ಮಾಡಿದಿರಿ...."

"ಆದರೆ ಒಂದು ವಿಷಯ ನಿನಗೆ ಗೊತ್ತಿಲ್ಲ ಶಾರದಾ... ಈಗಾಗಲೇ ಇವರಿಬ್ಬರ ಮದುವೆ ನೆರವೇರಿದೆ. ಹನಿಮೂನ್ ಸಹ ಮುಗಿಸಿಕೊಂಡು ಬಂದಿದಾರೆ. ಇನ್ನು ನೀವ್ಯಾರೂ ಏನೂ ಮಾಡಕ್ಕಾಗುಲ್ಲ."

"ಅಮ್ಮ ಸುಮ್ನಿರಮ್ಮ. ಬೀದಿ ಬಾಗಿಲಲ್ಲಿ ಈ ಮಾತ್ಯಾಕೆ....? ಅತ್ತೇ ನೀವು ಆರತಿ ಎತ್ತುತ್ತೀರೋ ನಾನೊಬ್ಳೇ ಎತ್ತಲೋ....?" ಶಾರದಾ ಆರತಿ ತಟ್ಟೆಯನ್ನು ಹಿಡಿದಳು. ವಿಜಯ, ಶಶಾಂಕ ಹಾಗೂ ಸೀಮಾಳ ಹಣೆಗೆ ಕುಂಕುಮದ ಬೊಟ್ಟನ್ನು ಇಟ್ಟಳು. ಅಷ್ಟರಲ್ಲಿ ರುಕ್ಮಿಣಿ ಅಕ್ಕಿ ತುಂಬಿದ ಸೇರಿನ ಮೇಲೆ ಬೆಲ್ಲದ ಅಚ್ಚನ್ನು ಇಟ್ಟು ಹೊಸ್ತಿಲ ಮೇಲಿಟ್ಟಳು. ಆರತಿಯ ಶಾಸ್ತ್ರವನ್ನು ಮುಗಿಸಿ, ನೀವಾಳಿ ತೆಗೆದಳು.

"ಸೀಮಾ ಸಂಪ್ರದಾಯದಂತೆ ಬಲಗಾಲಿನಲ್ಲಿ ಸೇರನ್ನು ಒದ್ದು ಅಕ್ಕಿಯನ್ನು

ಚೆಲ್ಲಿ ಬಲಗಾಲನ್ನಿಟ್ಟು ಒಳಗೆ ಬಾ...." ರುಕ್ಮಿಣಿ ಆದೇಶಿಸಿದಳು.

"ಶಶೀ, ಸೀಮಾಳ ಬಲಗೈಯನ್ನು ಹಿಡಿದ್ಕೊಳ್ಳೋ...." ವಿಜಯ ನುಡಿದಳು.

"ಶಾರದಾ, ನಿನ್ನ ಗಂಡನನ್ನು ಮಗನನ್ನು ಕರೀ... ಕೊಬ್ಬರಿ ಸಕ್ರೆ ಕೊಡ್ತೀನಿ..."

"ಮಾವ ಒಳಗೆ ಬನ್ನಿ..." ವಿಜಯ ಕರೆದಳು. ಆತ ಬಂದರು. ಸುಧಾಮ ಅಲ್ಲಿಯೇ ನಿಂತಿದ್ದ. ವಿಜಯ ಅವನ ಬಳಿಗೆ ಬಂದಳು. "ಸುಧಾಮ ...ಇಲ್ಲಿಯವರೆಗೆ ನೀನು ಬಂದಿದೀಯ ಅಂದ್ರೆ.... ಎಲ್ಲರೂ ನಿನ್ನ ತಪ್ಪನ್ನು ಮನ್ನಿಸಿದಾರೆ ಅಂತ ಅರ್ಥ. ನೀನು ಹೀಗೆ ಮಾಡಬಾರದಾಗಿತ್ತು... ನಿನ್ನ ಹೆಂಡತಿ, ಮಗು ಸುಖವಾಗಿರ ಬೇಕು ಅಂತಿದ್ದರೆ ಈ ದ್ವೇಷವನ್ನು ಬಿಟ್ಟು ಒಳ್ಳೆಯವನಾಗು... ಶಶಾಂಕ, ಸೀಮಾ ಇಬ್ಬರಿಗೂ ಅನ್ಯಾಯವಾಗಿದೆ. ಇಬ್ಬರೂ ನೊಂದಿದ್ದಾರೆ. ಇನ್ನು ಮುಂದಾದರೂ ಇವರು ಸುಖವಾಗಿ ಹೊಸ ಜೀವನವನ್ನು ಪ್ರಾರಂಭಿಸಲಿ ಅಂತ ಹಾರೈಸು...ಬಾ...." ಕರೆದಳು.

"ಬೇಡ ವಿಜಿ... ನಾನು ಅದಕ್ಕೆ ಅರ್ಹನಲ್ಲ." ಸುದಾಮ ತಲೆ ತಗ್ಗಿಸಿದ.

"ಹಾಗಿದ್ದರೆ ನಿನ್ನ ಮನಸ್ಸಿನ ಕಹಿ ಇನ್ನೂ ಕಡಿಮೆ ಆಗಿಲ್ಲ ಅಂತ ಅರ್ಥ. ನಿನ್ನಿಷ್ಟ, ನಾನು ಬಲವಂತ ಮಾಡುವುದಿಲ್ಲ...." ವಿಜಿ ಹಿಂತಿರುಗಿದಳು.

"ಎಲ್ಲಾ ಮುಗಿದಿದ್ರೆ ಅಪ್ಪ ಅಮ್ಮನ್ನು ಕಳಿಸು, ಮನೆಗೆ ಹೋಗ್ತೀವಿ." ಎಂದ ವಿಜಯ ಮನೆಯೊಳಕ್ಕೆ ಬಂದಳು.

"ಸುಧೀ ಬರ್ಲಿಲ್ಲ. ಅವನ ಮೂಡ್ ಇನ್ನೂ ಸರಿ ಹೋಗಿಲ್ಲ."

"ಪೋಲೀಸರು ಹೊಡೆದು ಬಡೆದು ಮಾಡಿದ್ರೇನೋ....?" ಶಸಾರದಾ ವ್ಯಥೆ, ಕೋಪಗಳಿಂದ ಕೇಳಿದಳು.

"ಇಲ್ಲ ಅತ್ತೆ, ಒಂದು ರಾತ್ರೀಲಿ, ಅದೂ ಲಾಕಪ್‌ನಲ್ಲಿ ಸುಮ್ಸುಮ್ನೆ ಹಾಗೆಲ್ಲಾ ಹೊಡೆದು ಬಡಿದು ಮಾಡಲ್ಲ. ಆರಾಮವಾಗಿದಾನೆ."

"ಸರಿ ಹಾಗಾದ್ರೆ ನಾನು ಕರ್‍ಕೊಂಡು ಬರ್ತೀನಿ.... ಅವನು ಎಲ್ಲರ ಕ್ಷಮೆಯನ್ನು ಕೇಳಲಿ."

"ಏನೂ ಬೇಡ ಅತ್ತೆ.....ಈ ನಾಟಕವೆಲ್ಲಾ ಬೇಡ.." ರುಕ್ಮಿಣಿ ಎಲ್ಲರಿಗೂ ಕೊಬ್ಬರಿ ಸಕ್ಕರೆಯನ್ನು ತಂದುಕೊಟ್ಟಳು. ವಿಜಯ, ಸರಳವಾಗಿ ನೆರವೇರಿದ್ದ ಮದುವೆಯ ಫೋಟೋಗಳನ್ನು ಅತ್ತೆ ಮಾವನಿಗೆ ತಂದು ತೋರಿಸಿದಳು.

"ಅರ್ಜೆಂಟಿನಲ್ಲಿ ಮದುವೆ ಮಾಡುವ ಅವಸರ ಏನಿತ್ತು....?" ಅನುಮಾನದಿಂದ ಕೇಳದಳು.

"ಅವಸರ ಇತ್ತು. ಅವತ್ತಿನ ಘಳಿಗೆ ಚೆನ್ನಾಗಿತ್ತು. 'ಶುಭಸ್ಯ ಶೀಘ್ರಂ' ಎಂದರು ಶಾಸ್ತ್ರಿಗಳು. ಜೈ ಎನಿಸಿಬಿಟ್ಟೆವು." ರುಕ್ಮಿಣಿ ಹರ್ಷದಿಂದ ಹೇಳಿಕೊಂಡಳು. ಶಾರದೆಯ

ಮುಖ ಫೋಟೋಗಳನ್ನು ನೋಡುತ್ತಿದ್ದಂತೆಯೇ ಪೆಚ್ಚಾಗಿತ್ತು. ನೋಡಿದ ಶಾಸ್ತ್ರವನ್ನು ಮಾಡಿ ಎದ್ದಳು. 'ಇನ್ನು ಹೊರಡೋಣ,. ಸುಧೀ ಕಾಯ್ತಾ ಇದಾನೆ." ರುಕ್ಮಿಣಿ ಇಬ್ಬರಿಗೂ ಫಲ ತಾಂಬೂಲಗಳನ್ನು ಉಡುಗೊರೆಗಳನ್ನು ಕೊಟ್ಟಳು.

"ಇವನು ತವರು ಮನೆಯವನು. ಮುಂದಾಗಿ ಬಂದು ಕಾರ್ಯವನ್ನು ನಡೆಸಿಕೊಡಬೇಕಾಗಿದ್ದವನು. ಮಗ ಮಾಡಿದ ತಪ್ಪಿಗೆ ನಮಗೆ ಶತ್ರುವಾದ..." ದನಿ ಕಟ್ಟಿತು. ರಂಗಣ್ಣನ ಮುಖ ಕಪ್ಪಿಟ್ಟಿತು.

"ಹಣೇಲಿ ಏನೇನು ಬರೆದಿದೆಯೋ ಅದು ನೆರವೇರುತ್ತೆ.... ಇನ್ನು ಈ ಮಾತುಗಳು ಸಾಕು. ಪದೇ ಪದೇ ಇದೇ ಮಾತುಗಳನ್ನಾಡುತ್ತಿದ್ದರೆ ಶಶಾಂಕನಿಗೆ ಸೀಮಾಳಿಗೆ ಬೇಸರವಾಗುತ್ತೆ.... ಶಶೀ, ನಿನ್ನ ಹೆಂಡ್ತೀನ ನಿನ್ನ ರೂಮಿಗೆ ಕರ್ಕೊಂಡು ಹೋಗೋ...." ತಂದೆ ನುಡಿದರು.

"ಅತ್ತೇ ಇಷ್ಟೇ ಹೊತ್ತಾಗಿದೆಯಂತೆ. ಊಟ ಮಾಡ್ಕೊಂಡು ಹೋಗಿ... ಸುಧಾಮ ನನ್ನು ಕರೀರಿ..." ಸೀಮಾ, ಶಶಾಂಕ ರೂಮನ್ನು ಸೇರಿದ್ದರು.

"ತಿಂದ ತಿಂಡಿಯೇ ಇನ್ನೂ ಅರಗಿಲ್ಲ. ಈಗ ಹೊರಡ್ತೀವಿ. ಮದುವೆ ಊಟಕ್ಕೆ ಮತ್ತೆ ಬರ್ತೀವಿ... ಎಂದು ಹಾಕಿಸ್ತೀರಿ...?" ಎಂದು ಕೇಳಿದಳು. ಇಬ್ಬರೂ ಹೊರಟಿದ್ದರು. ಸುಧಾಮ, ಅಸಹನೆಯಿಂದ ಅವರಿಗಾಗಿ ಕಾಯುತ್ತಾ ನಿಂತಿದ್ದ. ಅವರನ್ನು ಕಂಡ ಕೂಡಲೇ, ಒಂದು ಆಟೋರಿಕ್ಷಾವನ್ನು ನಿಲ್ಲಿಸಿದ. ಮೂವರೂ ರಿಕ್ಷಾ ಹತ್ತಿದರು, ರಿಕ್ಷಾ ಚಲಿಸಿತು... ಮೂವರೂ ಮುಖಮುಖ ನೋಡಿಕೊಂಡು ಮೌನವನ್ನು ವಹಿಸಿದರು.

"ಒಂದು ಅಧ್ಯಾಯ ಮುಗಿಯಿತು. ಇನ್ನು ಯಾವ ಆತಂಕವೂ ಇಲ್ಲ..." ವಿಜಿ ಎಂದಳು.

"ಆತಂಕ ಯಾಕಿಲ್ಲ...? ಗೌತಮನಿಗೆ ಸಂಬಂಧಪಟ್ಟ ವಿಚಾರಣೆಗಳು ಇನ್ನೂ ಪ್ರಾರಂಭವಾಗಿಲ್ಲ. ಅವನ ಆರೋಗ್ಯ ಹೇಗಿದೆಯೋ...?" ತಂದೆ ಕೇಳಿದರು.

"ಅವನೀಗ ಸರಕಾರಿ ಅತಿಥಿ.... ಅವನ ಸೇವೆ ಚೆನ್ನಾಗಿಯೇ ನಡೆಯುತ್ತೆ.... ಸೀಮಾ-ಶಶಾಂಕನ ಮದುವೆ ನೆರವೇರಿತು ಅಂತ ತಿಳಿಯುವವರೆಗೂ ಅವನ ಆರೋಗ್ಯ ಚೆನ್ನಾಗಿಯೇ ಇರುತ್ತೆ. ಈ ವಾರ್ತೆ ತಿಳಿದ ದಿನ... ಅವನ ಲೈಫು ಮುಗಿದಂತೆ."

"ಹಾಗೆಲ್ಲಾ ಮಾತಾಡ್ಬೇಡ ವಿಜೀ... ಅವನಿಗೆ ತಿಳಿಸೋರು ಯಾರು?"

"ಸುಧಾಮ.... ತಿಳಿಸ್ಬೇ ಇರ್ತಾನಾ....?"

"ಇಲ್ಲ, ಶಾರದಾ ಎಚ್ಚರಿಕೆ ವಹಿಸ್ತಾಳೆ.... ಗೌತಮ ನೊಂದ್ಕೋತಾನೆ ಅಂತ ಅವನಿಗೆ ಯಾರೂ ಏನನ್ನೂ ತಿಳಿಸುವುದಿಲ್ಲ... ನೋಡೋಣ ಏನೇನಾಗುತ್ತೆ

ಅಂತ...." ಇನ್ನ ನಮ್ಮ ತಂಟೆಗೆ ಯಾರೂ ಬರದಿದ್ರೆ ಸಾಕು.

*****

"ಅಂತೂ, ಸೀಮಾ ಕೈ ಕೊಟ್ಟು ಬಿಟ್ಲು. ಅದ್ಹೇಗೆ ಮನಸ್ಸು ಬಂತೋ ಶಶಾಂಕನ್ನ ಮದುವೆಯಾಗೋಕೆ...? ಗೌತಮನ್ನ ಅಷ್ಟು ಸುಲಭವಾಗಿ ಮರೆತು ಬಿಟ್ಲಾ....? ಮನೆಯೊಳಗೆ ಕಾಲಿಡುತ್ತಿದ್ದೇನೆ " ರುಕ್ಮಿಣಿ ಜೋರಾಗಿಯೇ ಗೊಣಗಿದಳು.

"ಅದಕ್ಕೇ ಹೇಳೋದು ಸ್ತ್ರೀ ಬುದ್ಧಿ ಚಂಚಲ ಅಂತ..." ಸುಧಾಮನೆಂದ.

"ನೀನು ಸುಮ್ನಿರು. ಇಷ್ಟೆಲ್ಲಾ ನಡೆದ್ಮೇಲೂ ಬಾಯಿಗೆ ಬಂದಿದ್ದನ್ನು ಮಾತಾಡ್ತೀರಲ್ಲ ನೀವಿಬ್ರೂ... ಇನ್ನಾದರೂ ಇಬ್ಬರೂ ತೆಪ್ಪಗಿರಿ. ನಿಮ್ಮಿಬ್ಬರ ಮಾತನ್ನು ಕೇಳ್ಕೊಂಡು ನಾನು ತಲೆ ತಗ್ಗಿಸುವಂತಾಯ್ತು." ತಂದೆ ಎಂದರು.

"ಅಲ್ಲಾ ನಿಮಗೆ ಗೌತಮನ ಬಗ್ಗೆ ಏನೂ ಅನ್ನಿಸೋದೇ ಇಲ್ವಾ...? ಜೈಲಿನಲ್ಲಿ ಇದ್ದು ಬಂದೋನು ಅಂತ ತಿಳಿದ್ಮೇಲೆ ಅವನಿಗೆ ಯಾರು ಹೆಣ್ಣು ಕೊಡ್ತಾರೆ... ಅವನ ಬಗ್ಗೆ ಎಲ್ಲಾ ತಿಳಿದಿದ್ದ ಸೀಮಾನೇ ಹೀಗೆ ಮಾಡಿಬಿಟ್ಲು. ಇವರಿಬ್ಬರ ಮದುವೆಯನ್ನು ನಾವಂತೂ ಒಪ್ಪುವುದಿಲ್ಲ."

"ಎಲ್ಲಾ ಶಶಾಂಕನ ಚಿತಾವಣೆ ಕಣಮ್ಮಾ... ಅವರ ಮನೆಯವರೆಲ್ಲ ಸೇರಿ ಕೊಂಡು ಮಾಡಿರುವ ಪಿತೂರಿ ಇದು. ಶಶಾಂಕನಿಗೂ ಬೇರೆ ಹೆಣ್ಣು ಸಿಗ್ತಿರ್ಲಿಲ್ಲ. ನಮ್ಮ ಹೊಟ್ಟೇನ ಉರಿಸೋಕೆ ಹೀಗೆ ಮಾಡಿದಾರೆ."

"ಇದೇ ನೆವ ಮಾಡ್ಕೊಂಡು ಇಬ್ರೂ ಒಂದಾಗಿಬಿಟ್ರು, ಅವರಿಬ್ಬರ ಮದುವೇನ ತಪ್ಪಿಸೋಕೆ ಒಂದು ಉಪಾಯ ಮಾಡಿದ್ದೆ. ಸೀಮಾನ್ನ ನನ್ನ ಕಡೆಗೆ ಒಲಿಸಿಕೊಂಡು ಬಿಟ್ಟಿದ್ದರೆ ಅವಳು ನಮ್ಮ ಮನೇನ ಬಿಟ್ಟು ಹೋಗ್ತಿರ್ಲಿಲ್ಲ."

"ಬಾಯ್ಮುಚ್ಚು ಸುಧಾಮ. ನಮ್ಮ ಎದರಿಗೇ ಆಡೋ ಮಾತಾ ಇದು? ಯಾರಾದ್ರೂ ಕೇಳಿದ್ರೆ ಮತ್ತೆ ನಿನ್ನನ್ನು ಪೋಲೀಸರಿಗೆ ಹಿಡಿದುಕೊಡ್ತಾರೆ...."

"ಮತ್ತೇನಮ್ಮ.... ಅವಳು ಪಾತರಗಿತ್ತಿ ಅಂಥ ಹೆಣ್ಣು.... ಅವಳು ಗೌತಮನ ಜೊತೆ ಎಲ್ಲಾ ಮುಗಿಸ್ಕೊಂಡಿದ್ಲು.... ಶಶಾಂಕನಿಗೆ ಸೆರಗು ಬೀಸಿ ತನ್ನ ವಶ ಮಾಡಿಕೊಂಡಳು. ಅವಳ ನಡತೆ ಸರಿಯಿಲ್ಲ ಅಂತ ನಾನು ಪ್ರಚಾರ ಮಾಡ್ಬೇಕಾಗಿತ್ತು... ಆಗ ಅವಳು ಹೆದರಿ, ಶಶಾಂಕನ ಜೊತೆ ತಿರುಗ್ತಿರ್ಲಿಲ್ಲ... ಭಯ ಬೀಳಿಸ್ಬೇಕಾಗಿತ್ತು.... ಅದಕ್ಕೇ ಅವಳನ್ನು ಹೆದರಿಸೋಕೆ ಅಂತ ನಾನು ಹೋಗಿದ್ದೆ."

"ಅಯ್ಯೋ ಪೆದ್ದೆ.... ಶಶಾಂಕನ ಜೊತೆ ಬರೀ ತಿರುಗೋದಿಲ್ಲ, ಇಬ್ಬರಿಗೂ ಗುಟ್ಟಾಗಿ ಮದುವೆ ನಡೆದಿದೆ. ವಿಜಯ ಫೋಟೋ ತೋರಿಸಿದಳು. ಹನಿಮೂನ್ ಅಂತ ಒಂದು ವಾರ ಒಟ್ಟಿಗೇ ಇದ್ದು ಬಂದಿದ್ದಾರೆ...."

"ಹೌದಾ! ನೀನು ಫೋಟೋ ನೋಡಿ ನಿಜ ಅಂತ ಒಪ್ಕೊಂಡು ಬಿಟ್ಯಾ?"

"ಮತ್ತಿನ್ನೇನು ಮಾಡ್ಲೋ...? ನಮ್ಮ ಭಾಗಕ್ಕೆ ಅವಳು ಇಲ್ಲ ಅಂತ ಸುಮ್ಮನಾಗ ಬೇಕಾಯ್ತು. ಗೌತಮನ ಹಣೇಲಿ ಬರೆದಿದ್ರೆ ಇವಳಿಗಿಂತ ಒಳ್ಳೆಯ ಹುಡುಗಿ ಸಿಗ್ತಾಳೆ. ಆದರೆ ಗೌತಮನಿಗೆ ಈ ವಿಷಯ ತಿಳಿದ್ರೆ ಏನು ಮಾಡ್ಕೋತಾನೋ?"

"ಶಾರದಾ ಇನ್ನು ಈ ಮಾತು ಸಾಕು. ಇದು ಮುಗಿದ ಅಧ್ಯಾಯ. ಅವರ ಪಾಡಿಗೆ ಅವರನ್ನು ಬಿಟ್ಟು ಬಿಡಿ. ಆಗ ನೀನು ಒಪ್ಪಿಗೆ ಕೊಟ್ಟಿದ್ದಿದ್ರೆ, ಇವಳು ನಿನ್ನ ಸೊಸೆ ಆಗಿರುತ್ತಿದ್ಲು. ಇನ್ನು ನಿಮ್ಮ ಜಾಣತನದ ಪ್ರಯೋಗ ಬೇಡ. ಸಧ್ಯ, ಸುಧಾಮ ನಿಗೂ ಏಳೋ ಎಂಟೋ ವರ್ಷ ಜೈಲು ಶಿಕ್ಷೆ ಆಗಿದ್ದಿದ್ರೆ ನಮ್ಮ ಗತಿ ಏನಾಗ್ತಿತ್ತು.... ಇವನ ಹೆಂಡತಿ ಮಗುವಿನ ಗತಿ ಏನಾಗ್ತಿತ್ತು....ಆ ಬಗ್ಗೆ ಯೋಚಿಸಿ ಲಂಗು ಲಗಾಮಿಲ್ಲದೆ ಏನೇನೋ ಮಾತಾಡ್ಬೇಡಿ...."

"ಅಪ್ಪಾ.... ಹಾಗೇನೂ ಆಗ್ತಿರ್ಲಿಲ್ಲ... ಯಾವ ಸಾಕ್ಷಿ ಆಧಾರಗಳಿರ್ಲಿಲ್ಲ. ಸೀಮಾ ನಮ್ಮ ಮನೆಗ್ಯಾಕೆ ಬಂದಿದ್ಲು ಅಂತ ಅವಳನ್ನೇ ಪ್ರಶ್ನೆ ಮಾಡಿರ್ತಿದ್ರು.... ಯಾವುದೋ ಕೆಟ್ಟ ಉದ್ದೇಶ ಅವಳಿಗಿದೆ ಅಂತ ಹೇಳಿ ಹೆದರಿಸಬಹುದಾಗಿತ್ತು.... ನಾನು ಎಲ್ಲವನ್ನೂ ಸರಿಮಾಡ್ತಿದ್ದೆ."

"ಅದು ಸಾಧ್ಯವಾಗ್ತಿರ್ಲಿಲ್ಲ. ನಿಂಗೆ ಅಷ್ಟೂ ತಿಳೀಬೇಡ್ವಾ.....? ಅಲ್ಲದೆ ಗೌತಮ ತಪ್ಪು ಮಾಡಿಯೇ ಇಲ್ಲ ಅಂತ ಹೇಗೆ ಹೇಳೋದು....? ಈಗ ನೀನು ಅದೇ ತಪ್ಪನ್ನು ಮಾಡೋಕೆ ಹೊರಟಿರ್ಲಿಲ್ವಾ.... ನೀವಿಬ್ಬರೂ ಒಂದೇ ಜಾತಿಗೆ ಸೇರಿದವರು... ನಿಮ್ಮಿಬ್ಬರಿಂದ ನನ್ನ ಮರ್ಯಾದೆ ಹೋಯ್ತು... ಮಕ್ಕಳಿಗೆ ಪಾಠ ಹೇಳಿಕೊಡುವ ಮೇಷ್ಟ್ರು ನಾನು... ಜನ ಆಡಿಕೊಂಡು ನಗುವಂತಾಯ್ತು... ಇನ್ನಾದರೂ ತೆಪ್ಪಗಿರಿ. ಇಲ್ಲದಿದ್ದರೆ ನಾನು ಮನೆ ಬಿಟ್ಟು ಹೊರಟು ಹೋಗ್ತೀನಿ.... ನೀವುಗಳು ಏನಾದ್ರೂ ಮಾಡ್ಕೊಳ್ಳಿ."

"ಅಯ್ಯೋ ಬಿಡಿ ಅಪ್ಪಾ....ಮೊದಲ್ನಿಂದ ನಮ್ಮನ್ನೆಲ್ಲಾ ಹೀಗೇ ಹೆದರಿಸ್ತಾನೇ ಬಂದ್ರಿ, ನಮ್ಮ ಬಗ್ಗೆ ನಿಮಗೆ ಯಾವ ಪ್ರೀತಿ ವಿಶ್ವಾಸವಿತ್ತು...? ಸ್ಕೂಲಲ್ಲಿ ಬಡ ಮಕ್ಕಳಿಗೆ ಹೊಡೆಯುವ ಹಾಗೆ ನಮ್ಮಿಬ್ಬರನ್ನು ಹೊಡೆಯುತ್ತಿದ್ರಿ.. ಅಮ್ಮ ಬಿಡಿಸಿಕೊಳ್ಳದೆ ಇದ್ದಿದ್ರೆ ನಾವು ಎಂದೋ ಮನೆ ಬಿಟ್ಟು ಹೋಗಿರುತ್ತಿದ್ದೆವು... ಈಗ ಬುದ್ಧಿ ಹೇಳ್ಬೇಡಿ...." ಸುದಾಮ ಕಟುವಾಗಿ ನುಡಿದ.

"ಸರಿ, ಇಷ್ಟು ಮಾತಾಡಿದ್ಮೇಲೆ ನಾನು ನಿಮ್ಮ ಸುದ್ಧಿಗೆ ಬರುಲ್ಲ. ಏನಾದ್ರೂ ಮಾಡ್ಕೊಳ್ಳಿ...." ಎಂದು ಹೇಳಿ ಚಪ್ಪಲಿ ಮೆಟ್ಟಿ ಹೊರಕ್ಕೆ ಹೋಗಿಬಿಟ್ಟರು.

"ಸುಧೀ... ಈ ಕತ್ತಲೇಲಿ ಹೋಗ್ಬೇಡಿ ಅಂತ ಹೇಳೋ... ಬಿದ್ದು ಗಿಡ್ದು ಪೆಟ್ಟು ಮಾಡ್ಕೊಂಡ್ರೆ...."

"ಏನೂ ಆಗೋಲ್ಲಮ್ಮ... ತಿರುಗಾಡಿ ಕಾಲು ನೊಂದ ಮೇಲೆ ಅವರೇ

ಬರ್ತಾರೆ... ಇಲ್ಲಿಗೆ ಬರದೇ ಇನ್ನೆಲ್ಲಿಗೆ ಹೋಗ್ತಾರೆ?" ಎಂದು ಹೇಳಿ ಮುಸುಕು ಬೀರಿ ಮಲಗಿದ.

ಆತ ಎಷ್ಟು ಹೊತ್ತಾದರೂ ವಾಪಸ್ಸು ಬರದಿದ್ದಾಗ, ಆಕೆಗೆ ಗಾಬರಿಯಾಗಿತ್ತು. ಮಗನನ್ನು ಎಬ್ಬಿಸಿದಳು.

"ಸುಧೀ, ಅಪ್ಪ ಇನ್ನೂ ವಾಪಸ್ಸು ಬರಲಿಲ್ಲವಲ್ಲೋ, ಎಲ್ಲಿ ಹೋದ್ರೋ...?"

"ಬರ್ತಾರೆ ಬಿಡಮ್ಮ, ಅವರೇನು ಚಿಕ್ಕ ಮಗುನಾ?"

"ಸ್ವಂತ ಮಗನಾಗಿ ಹೀಗೆ ಮಾತಾಡ್ತೀಯಲ್ಲೋ... ಸ್ವಲ್ಪ ವಿಚಾರಿಸಬಾರ್ದಾ?"

"ಅವರು ಅಪ್ಪನಾಗಿ ಹೀಗೆ ಆಡಬಹುದಾ? ಅವರ ಹತ್ರ ಮೊಬೈಲ್ ಇದ್ದಿದ್ದರೆ ಫೋನು ಮಾಡಿ ವಿಚಾರಿಸಬಹುದಾಗಿತ್ತು. ಬೆಳಿಗ್ಗೆ ನೋಡ್ತೀನಿ. ಈಗ ಎಲ್ಲಿ ಅಂತ ವಿಚಾರಿಸಲಿ....? ನೀನು ಮಲ್ಕೋ, ನನ್ನನ್ನೂ ಮಲಗಲು ಬಿಡು.. ನೆನ್ನೆ ರಾತ್ರಿಯೆಲ್ಲಾ ನನಗೆ ನಿದ್ದೆ ಇಲ್ಲ." ಗೊಣಗುತ್ತಾ ಅವನು ಮಲಗಿದ. ಪಿಟಿ ಪಿಟಿ ಎಂದು ಮಗನನ್ನು ಬೈಯುತ್ತಾ ಅವಳು ತೂಕಡಿಸುತ್ತಾ ರಾತ್ರಿಯನ್ನು ಕಳೆದಳು.

ಬೆಳಿಗ್ಗೆ ಚೆನ್ನಾಗಿ ಬೆಳಕಾಗಿತ್ತು. ಶಾರದಾ, ಎಚ್ಚರಗೊಂಡು ಗಂಡನ ಬಗ್ಗೆಯೇ ಚಿಂತಿಸುತ್ತಿದ್ದಾಗ, ಫೋನು ರಿಂಗಾಗಿತ್ತು. ಇವಳು ನಡುಗುವ ಕೈಗಳಿಂದ ರಿಸೀವರ್ ನೆತ್ತಿಕೊಂಡಳು. ಶಶಾಂಕ ಮಾತಾಡಿದ "ಅತ್ತೇ, ಮಾವನನ್ನು ಪೋಲೀಸರು ನಮ್ಮ ಮನೆಗೆ ಕರೆದುತಂದು ಬಿಟ್ಟಿದಾರೆ...."

"ಹೇಗಿದಾರೋ ಶಶಾಂಕ್? ಹುಶಾರಾಗಿದಾರೆ ತಾನೇ... ಅವರಿಗೆ ಫೋನು ಕೊಡು, ಮಾತಾಡ್ತೀನಿ."

"ಈಗ ಮಲಗಿದಾರೆ ಅತ್ತೇ. ಹುಶಾರಾಗಿದಾರೆ.... ನಾನು ಇಲ್ಲಿಗೆ ಬಂದಿರುವ ವಿಷಯವನ್ನು ನಿಮಗೆ ತಿಳಿಸುವುದು ಬೇಡ ಅಂತಂದ್ರು. ಏನಾದ್ರೂ ಮಾತುಕತೆ ಆಯ್ತಾ ಅತ್ತೇ? ರಾತ್ರಿ ಪೋಲೀಸ್ ಸ್ಟೇಷನ್‌ಗೆ ಯಾಕೆ ಹೋದ್ರು?"

"ತುಂಬಾ ಬೇಸರಗೊಂಡಿದ್ರು. ಸುಧೀಗೂ ಅವರಿಗೂ ಮಾತುಕತೆ ನಡೀತು. ಇದ್ದಕ್ಕಿದ್ದ ಹಾಗೆ ಮನೆಯಿಂದ ಆಚೆ ಹೊರಟ್ರು. ಈಗ ಬರ್ತಾರೆ ಆಗ ಬರ್ತಾರೆ ಅಂತ ರಾತ್ರಿಯೆಲ್ಲಾ ಕಾದೆವು. ಯಾಕೆ ಹೀಗೆ ಮಾಡಿದ್ರೋ... ನಿಂಗೇನಾದ್ರೂ ಹೇಳಿದ್ರಾ?"

"ಏನೂ ಹೇಳ್ಲಿಲ್ಲ ಅತ್ತೆ... ಒಂದೆರಡು ದಿನಗಳು ಅವರು ನಮ್ಮ ಮನೇಲಿರ್ಲಿ. ಆಮೇಲೆ ನಾನೇ ಕರ್ಕೊಂಡು ಬರ್ತೀನಿ....ನೀವು ಚಿಂತಿಸ್ಬೇಡಿ" ಎಂದು ಹೇಳಿದ.

ರಿಸೀವರ್‌ನಿಟ್ಟು ಮಲಗಿದ್ದ ಮಗನನ್ನು ತಿವಿದು ಎಬ್ಬಿಸಿದಳು. "ನಿಮ್ಮಪ್ಪ ರಾತ್ರಿಯೆಲ್ಲಾ ಪೋಲೀಸ್ ಸ್ಟೇಷನ್‌ನಲ್ಲಿ ಕೂತಿದ್ರಂತೆ.... ನೀನಿಲ್ಲಿ ಗೊರಕೆ ಹೊಡೀತಾ ಮಲಗಿದ್ದೀಯ...." ಅವನು ಕಣ್ಣುಜ್ಜಿಕೊಳ್ಳುತ್ತಾ ಎದ್ದ. ಗಾಬರಿ ಕಣ್ಣುಗಳಲ್ಲಿ ತುಳುಕಿತು.

"ಪೋಲೀಸ್ ಸ್ಟೇಷನ್ನಿಗಾ? ಯಾಕಂತೆ? ಈಗಲೂ ಅಲ್ಲೇ ಇದಾರಾ?"

"ಉಹೂಂ... ಅಲ್ಲಿಂದ ಸೀದಾ ಶಶಾಂಕನ ಮನೆಗೆ ಹೋಗಿದಾರೆ. ನೀನು ಹೋಗಿ ಕರ್ಕೊಂಡು ಬಾ."

"ಅವರೇ ಬರಲಿ. ನಾನು ಹೋಗುಲ್ಲ. ಪೋಲೀಸರ ಹತ್ರ ಏನ್ಹೇಳಿದ್ರಂತೆ? ನಿಂಗೆ ಹೇಗೆ ಗೊತ್ತಾಯ್ತು....?"

"ಶಶಾಂಕ ಫೋನು ಮಾಡಿದ್ದ. ಮಲಗಿದಾರೆ... ಒಂದೆರಡು ದಿನ ಇಲ್ಲಿಯೇ ಇರಲಿ ಅಂತಂದ."

"ಇರಲಿ ಬಿಡು. ಅವರಿಗೂ ಅದೇ ಬೇಕಾಗಿರೋದು."

"ಶಶಾಂಕನ ಮನೆಯವರು ಈಗ ಮೊದಲಿನಂತಿಲ್ಲ. ಏನೇನೋ ಮಾತಾಡಿ ಬಿಡ್ತಾರೋ ಅಂತ ಭಯ ಆಗುತ್ತೆ. ತಪ್ಪಾಯ್ತು ಅಂತ ಅವರ ಕಾಲಿಗೆ ಬಿದ್ದು ಅವರನ್ನು ಮನೆಗೆ ಕರ್ಕೊಂಡು ಬಾ...."

"ನಾನೇನಮ್ಮ ತಪ್ಪು ಮಾಡಿದೀನಿ...? ನಾನೂ ಒಂದು ರಾತ್ರಿ ಶಿಕ್ಷೆಯನ್ನು ಅನುಭವಿಸಿದೀನಿ. ನಾನು ಆ ಮನೆಗೆ ಹೋಗುಲ್ಲ. ಬಂದರೆ ಬರಲಿ....ಇಲ್ಲದಿದ್ದರೆ ಅಲ್ಲೇ ಇರಲಿ....ನಾನು ಊರಿಗೆ ವಾಪಸ್ಸು ಹೊರಟು ಹೋಗ್ತೀನಿ...." ಎನ್ನುತ್ತಾ ಎದ್ದ. ಶಾರದಾ ಅಡಿಗೆ ಮನೆಯ ಕಡೆಗೆ ನಡೆದಳು. ಬೇಗ ಬೇಗ ಸ್ನಾನ ಮಾಡಿ ತಿಂಡಿಯನ್ನು ಮಾಡಿಟ್ಟಳು. ಅವನೂ ಊರಿಗೆ ಹೊರಡಲು ಸಿದ್ಧನಾದ. ಅವಳೂ ಸಿದ್ಧಳಾದಳು.

"ನನ್ನನ್ನು ನಿನ್ನ ಮಾವನ ಮನೆಯ ಹತ್ತಿರ ಇಳಿಸ್ಬಿಟ್ಟು ಹೋಗು. ಇಲ್ಲಿ ಒಬ್ಬಳೇ ಕೂತು ಏನ್ಮಾಡ್ಲೀ?" ಎಂದಳು ಉತ್ತರಿಸದೇ ತಾಯಿಯ ಕಡೆ ದುರು ದುರು ನೋಡಿದ. ತಿಂಡಿ ತಿಂದು ಕಾಫಿ ಕುಡಿದು, ಇಬ್ಬರೂ ಹೊರಟರು.

*   *   *

ರಿಕ್ಷಾ ನಿಂತ ಶಬ್ದ ಕೇಳಿ ರುಕ್ಮಿಣಿ ಹೊರಬಂದಳು. ಶಾರದಾ ಮಾತಾಡಿದಳು.

"ರಾತ್ರಿಯೆಲ್ಲಾ ಮನೆಗೆ ಬರ್ಲಿಲ್ಲ. ಸುಧೀನು ವಿಚಾರಿಸ್ಲಿಲ್ಲ. ಈಗ ಅವನೂ ತನ್ನ ಊರಿಗೆ ಹೋದ. ಒಬ್ಬಳೇ ಹೇಗಿರ್ಲಿ ಅಂತ ಬಂದೆ. ಅವರನ್ನು ಎಬ್ಬಿಸಿ.... ಮನೆಗೆ ಕರ್ಕೊಂಡು ಹೋಗ್ತೀನಿ."

"ಮಲಗಿರ್ಲಿ ಬಿಡು. ತುಂಬಾ ಬೇಸರ ಮಾಡ್ಕೊಂಡಿದಾನೆ."

"ಅಲ್ಲ ಅತ್ತಿಗೆ, ಇದೇನು ಚೆನ್ನಾ? ಮನೆ ಮಠ ಬಿಟ್ಟು ಹೊರಗೆಲ್ಲೋ ತಿರುಗೋದು ಅಂದ್ರೇ....ಮಕ್ಕಳು ಬೇಸರ ಮಾಡಿದ್ರೆ, ನಾನೇನ್ಮಾಡ್ಲೀ?" ಅವಳು ಅಳತೊಡಗಿದಾಗ, ಅವಳಿಗೆ ಸಮಾಧಾನ ಹೇಳಬೇಕಾಯ್ತು. ಜೋರು ಜೋರು ಮಾತನ್ನು ಕೇಳಿ ಆತ ಎದ್ದು ಹೊರಕ್ಕೆ ಬಂದಿದ್ದ.

"ಇಲ್ಲಿಗೂ ಬಂದ್ಯಾ ನನ್ನನ್ನು ಹುಡಿಕ್ಕೊಂಡು?" ಹೆಂಡತಿಯ ಮೇಲೆ ರೇಗಿದ.

"ಬನ್ನಿ, ನಮ್ಮ ಮನೆಗೆ ಹೋಗೋಣ. ಸುಧೀನೂ ಊರಿಗೆ ಹೊರಟು ಹೋದ."

"ಶಶಾಂಕ, ನನ್ನನ್ನು ರೇಣುಕಾಳ ತಂದೆಯ ಮನೆಗೆ ಕರ್ರೊಂಡು ಹೋಗ್ತೀಯಾ? ನಾನು ಅವರ ಹತ್ರ ಮಾತಾಡ್ಬೇಕು..." ಹೆಂಡತಿಗೆ ಉತ್ತರಿಸದೇ ಕೇಳಿದಾಗ ಎಲ್ಲರೂ ಆತನನ್ನೇ ವಿಚಿತ್ರವಾಗಿ ನೋಡಿದರು.

"ಅಲ್ಲೇನು ಕೆಲಸ? ಅವರು ನನ್ನ ಮಗನ ಮೇಲೆ ದೂರು ಕೊಟ್ಟಿದ್ದಾರೆ.... ಕೇಸು ವಾಪಸ್ಸು ತಗೊಳ್ಳೋ ಜನರಲ್ಲ ಅವರು...."

"ಅವರ ಹತ್ರ ಕ್ಷಮೆ ಕೇಳ್ಬೇಕು ನಾನು... ಗೌತಮ ಮಾಡಿದ ತಪ್ಪಿನಿಂದಾಗಿ ನನ್ನ ತಲೆ ತಗ್ಗಿಸುವಂತಾಗಿದೆ...."

"ಅವರು ಕ್ಷಮಿಸ್ತಾರಾ ಅಣ್ಣಾ....ಅವರಿಗೆ ಅನ್ಯಾಯವಾಗಿದೆ...."

"ಕ್ಷಮಿಸಲಿ ಬಿಡಲಿ, ನಾನು ಕ್ಷಮೆ ಕೇಳ್ತೀನಿ...ಗೌತಮನ ಬಿಡುಗಡೆಗೆ ಸಹಾಯ ಮಾಡಿ ಅಂತೇನು ಕೇಳುವುದಿಲ್ಲ. ನಾನು ಸ್ನಾನ ಮಾಡಿ ಬರ್ತೀನಿ. ಕಾಫಿ ತಿಂಡಿ ಕೊಡು..." ಎನ್ನುತ್ತಾ ಬಚ್ಚಲು ಮನೆಯ ಕಡೆಗೆ ನಡೆದಾಗ ಇವರುಗಳು ಮುಖ ಮುಖ ನೋಡಿಕೊಂಡರು. ಶಶಾಂಕ ಏನೂ ಮಾತನಾಡದೇ ಬೇಗ ಬೇಗ ಸಿದ್ಧನಾದ. ರುಕ್ಮಿಣಿ ಎಲ್ಲರಿಗೂ ಬಿಸಿಬಿಸಿ. ತಿಂಡಿ ಕಾಫಿಗಳನ್ನು ತಂದಿತ್ತಳು. ಶಶಾಂಕ ಸೀಮಾಳನ್ನು ಬರುವಂತೆ ಕರೆದ.

ಆದರೆ ಅವಳು ಒಪ್ಪಲಿಲ್ಲ.

" ಇಲ್ಲ, ನನ್ನ ನೋಡಿ ಅವರ ದುಃಖ ಹೆಚ್ಚಾಗುತ್ತೆ" ಎಂದಳು. ಅವಳ ಮಾತು ಸರಿ ಎನಿಸ್ತು.

*****

ಶಶಾಂಕ ಮಾವನೊಂದಿಗೆ ರೇಣುಕಾಳ ಊರಿಗೆ ಹೊರಟ. "ಬೇಗ ವಾಪಸ್ಸು ಬಂದ್ಬಿಡಿ.... ಅವರು ಏನಾದ್ರೂ ಅಂದ್ರೆ ಬೇಜಾರಾಗುತ್ತೆ. ಹೆಚ್ಗೆ ಮಾತಾಡ್ಬೇಡಿ." ಎಂದು ಹೇಳಿ ಕಳಿಸಿದರು. ಎರಡು ಗಂಟೆಗಳ ಕಾಲ ಪ್ರಯಾಣದ ನಂತರ ಇಬ್ಬರೂ ರೇಣುಕಾಳ ಊರನ್ನು ಸೇರಿದರು. ಮನೆಯ ಮುಂದೆ ಕಾರು ನಿಂತ ಕೂಡಲೇ ರೇಣುಕಾಳ ತಂಗಿ ಮುಂಬಾಗಿಲಿಗೆ ಬಂದು ಕುತೂಹಲದಿಂದ ನೋಡಿದಳು.

"ಅಮ್ಮಾ... ಭಾವ ಬಂದ್ರು...." ಎಂದು ಹೇಳಿ ಒಳಗೋಡಿದಳು.

"ಯಾವ ಭಾವನೇ...." ಎನ್ನುತ್ತಾ ತಾಯಿ ಹೊರಗೆ ಬಂದಳು. ಶಶಾಂಕನನ್ನು ಕಂಡು ಹಾಗೇ ನಿಂತಳು. ಶಶಾಂಕ ಸಂಕೋಚ ಮುಜುಗರದಿಂದ ಕೈ ಮುಗಿದ.

ಒಳಗೆ ಬನ್ನಿ ಎಂದು ಅವರುಗಳು ಕರೆಯದಿದ್ದರೂ ಇವರಿಬ್ಬರೂ ವೆರಾಂಡದ ತನಕ ಬಂದರು.

"ಅಮ್ಮಾ... ನಮಸ್ಕಾರಾಮ್ಮ... ನಾನು ಶಶಾಂಕನ ಸೋದರ ಮಾವ..." ಈತ ಕೈ ಮುಗಿದು ಹೇಳಿದಾಗ, ಆಕೆ ವಿಷಾದದ ನಗೆಯನ್ನು ನಕ್ಕಳು.

"ಗೊತ್ತಾಯ್ತು ಬಿಡಿ. ಏನು ಬಂದದ್ದು?" ಕಟುವಾಗಿ ಕೇಳಿದಳು.

"ನಿಮ್ಮಿಬ್ಬರ ಹತ್ರ ಕ್ಷಮೆ ಯಾಚಿಸಿ ಹೋಗೋಣಾಂತ ಬಂದೆ..."

"ಕ್ಷಮೆ? ಯಾಕೆ....? ನಿಮಗೂ ಗೊತ್ತಲ್ವಾ ಎಂಥಾ ಅಪರಾಧ ಮಾಡಿದಾನೆ ನಿಮ್ಮ ಮಗ ಅಂತ?"

"ಹೌದಮ್ಮಾ ಗೊತ್ತು. ಅವನಿಗೆ ಶಿಕ್ಷೆಯಾಗಿ, ಜೈಲುವಾಸ ಮುಗಿಸಿ ವಾಪಸ್ಸು ಎಂದಿಗೆ ಬರ್ತಾನೋ... ಅಲ್ಲಿಯವರೆಗೂ ನಾನು ಬದುಕಿರುತ್ತೀನೋ ಇಲ್ಲವೋ ತಿಳಿಯದು. ನನ್ನ ಮಗನಿಂದ ನಿಮಗೆ ಅನ್ಯಾಯವಾಗಿದೆ. ಅವನನ್ನು ಕ್ಷಮಿಸಿ ಎಂದು ಕೇಳುಲ್ಲ... ತಿಳಿದೋ ತಿಳಿಯದೆಯೋ ನನ್ನಿಂದಲೂ ತಪ್ಪಾಗಿದೆ.... ಅಪರಾಧಿ ಮಗನ ತಂದೆ ಅಂತ ಅನ್ನುವ ಪಟ್ಟ ನನಗೆ ಸಿಕ್ಕಿದೆ... ನನ್ನ ಮಗನನ್ನು ಸರಿಯಾಗಿ ಬೆಳಿಸಲಿಲ್ಲ ಅನ್ನುವ ಪಶ್ಚಾತಾಪ ನನಗಿದೆ...ಈಗ ನನ್ನ ಕೈಲಾಗುವುದು ಇದೊಂದೇ ಕೆಲಸ... ಇಂಥಾ ಮಗನನ್ನು ಸಮಾಜಕ್ಕೆ ಕೊಟ್ಟ ತಪ್ಪಿಗೆ, ನನ್ನನ್ನು ಕ್ಷಮಿಸಿ ಅಂತ ಕೇಳುವುದು... ಇದರಿಂದ ನಿಮಗೆ ಸಹಾಯವಾಗುವುದಿಲ್ಲ.... ನಿಜ.... ಆದರೂ... ಇದಕ್ಕಾಗಿ ಬಂದಿದೀನಿ... ದಯವಿಟ್ಟು ನನ್ನನ್ನು ಕ್ಷಮಿಸಿ."

ಆತ ಬೆನ್ನು ಬಗ್ಗಿಸಿ, ತಲೆ ತಗ್ಗಿಸಿ, ಕೈ ಮುಗಿದು ಕ್ಷಮೆ ಯಾಚಿಸಿದಾಗ, ಎಲ್ಲರಿಗೂ ಮುಜುಗರವಾಗಿತ್ತು. ಶಶಾಂಕ ಮಾವನ ಭುಜವನ್ನು ಹಿಡಿದ. "ಬನ್ನಿ ಮಾವ.... ಹೋಗೋಣ...." ಎಂದು ಹೇಳಿ ಹಿಂದಕ್ಕೆ ನಡೆದ. ಅಷ್ಟರಲ್ಲಿ ರೇಣುಕಾಳ ತಂದೆ, ಒಂದು ಸಣ್ಣ ಹ್ಯಾಂಡ್ ಬ್ಯಾಗನ್ನು ತಂದು ಅವನ ಕೈಗಿತ್ತರು.

"ಇದರಲ್ಲಿ ನಿಮ್ಮ ಫೋಟೋಗಳಿವೆ... ನೀವು ಕೊಟ್ಟ ಕೆಲವು ಪುಸ್ತಕಗಳಿವೆ... ಇವೆಲ್ಲಾ ನಮಗ್ಯಾಕೆ...? ನಿಮ್ಮ ವಸ್ತುಗಳನ್ನು ನೀವೇ ತೆಗೆದುಕೊಂಡು ಹೋಗಿ...."

ಶಶಾಂಕ ಮಾತನಾಡದೇ ತೆಗೆದುಕೊಂಡ. ಇಬ್ಬರೂ ಅಲ್ಲಿಂದ ಹೊರಟರು. ಶಶಾಂಕ ಆ ಹ್ಯಾಂಡ್ ಬ್ಯಾಗನ್ನು ಕಾರಿನ ಹಿಂದಿನ ಸೀಟಿನಲ್ಲಿಟ್ಟು ಡ್ರೈವಿಂಗ್ ಸೀಟಿನಲ್ಲಿ ಕುಳಿತ. ಕಾರು ಮತ್ತೆ ಹಿಂದಕ್ಕೆ ಹೊರಟಿತು. ಮತ್ತೆ ಎರಡು ಗಂಟೆಯ ದೀರ್ಘ ಪ್ರಯಾಣದ ನಂತರ ವಾಪಸ್ಸು ತಮ್ಮ ಮನೆಗೆ ಬಂದರು. ಸ್ವಲ್ಪ ಹೊತ್ತು ಇವರ ಮನೆಯಲ್ಲಿ ವಿಶ್ರಮಿಸಿದರು. ಶರದಾ ಗಂಡನಿಗಾಗಿ ಕಾಯುತ್ತಾ ಅಲ್ಲೇ ಕುಳಿತಿದ್ದಳು.

"ಇನ್ನು ನಾವು ಹೊರಡ್ತೀವಪ್ಪಾ.... ಬಂದ ಕೆಲಸ ಆಯ್ತು.... ಮನಸ್ಸು ಸ್ವಲ್ಪ

ಮಟ್ಟಿಗೆ ಹಗುರ ಆಯ್ತು..." ಎಂದು ಮಾವ ಹೇಳಿದಾಗ, ಶಶಾಂಕ ಎದ್ದ.

"ಬನ್ನಿ, ನಿಮ್ಮಿಬ್ಬರನ್ನೂ ನಿಮ್ಮ ಮನೆಗೆ ಬಿಟ್ಟು ಬರ್ತೀನಿ..."

"ಬೇಡ, ನಾಲ್ಕು ಗಂಟೆಗಳ ಕಾಲ ಡ್ರೈವ್ ಮಾಡಿದೀಯ. ಸುಸ್ತಾಗಿದೆ ನಿಂಗೆ."

"ಮನೆಗೆ ಬಂದ್ಮೇಲೆ ರೆಸ್ಟ್ ತಗೋತೀನಿ... ದಿನಾ ಇಷ್ಟು ಗಂಟೆಗಳ ಕಾಲ ಡ್ರೈವ್ ಮಾಡಿ ನನಗೆ ಅಭ್ಯಾಸವಿದೆ." ಎಂದು ಹೇಳಿ ಮತ್ತೆ ಹೊರಟ. ಅತ್ತೆ ಮಾವನನ್ನು ಬೀಳ್ಕೊಡಲು ವಿಜಯ ಸಹ ಕಾರಿನ ತನಕ ಬಂದಳು. ಹಿಂದಿನ ಬಾಗಿಲನ್ನು ತೆಗೆದಾಗ ಆ ಹ್ಯಾಂಡ್ ಬ್ಯಾಗನ್ನು ಕಂಡಳು.

"ಇದ್ಯಾವುದೋ ಈ ಬ್ಯಾಗ್?" ಎನ್ನುತ್ತಾ ಕೈಗೆ ತೆಗೆದುಕೊಂಡಳು. "ಒಳಗೆ ತಗೊಂಡು ಹೋಗ್ಲಾ? ನಿಮ್ಮದೇ ತಾನೇ?" ಕೇಳಿದಳು.

"ಹ್ಞೂಂ ನಂದೆ.... ತಗೊಂಡ್ಹೋಗು" ಅಂತಷ್ಟೇ ಹೇಳಿದ. ಅವರಿಬ್ಬರೂ ಕಾರಿನೊಳಗೆ ಕುಳಿತ ಮೇಲೆ, ಕಾರನ್ನು ಓಡಿಸಿದ. ವಿಜಯ ಹ್ಯಾಂಡ್ ಬ್ಯಾಗನ್ನು ಅತ್ತ ಇತ್ತ ತಿರುಗಿಸುತ್ತಾ ಮನೆಯೊಳಗೆ ತಂದಳು.

"ಸೀಮಾ... ಇದು ನಿಮ್ಮ ಬ್ಯಾಗಾ...? ಕಾರಿನ ಹಿಂದಿನ ಸೀಟಿನಲ್ಲಿತ್ತು" ಎಂದಳು.

"ಅಲ್ಲ... ನನ್ನ ಹತ್ರ ಇಂಥಾ ಬ್ಯಾಗ್ ಇಲ್ಲ" ಎಂದಳು.

"ಮತ್ತೆ? ಶಶಾಂಕ ನಮ್ಮದೇ ಅಂತ ಹೇಳಿದ. ಏನೋ ಕನ್‌ಫ್ಯೂಷನ್ ಮಾಡ್ಕೊಂಡಿದಾನೆ.... ಯಾರದ್ದು ಅಂತ ನೋಡ್ತೀನಿ" ಎನ್ನುತ್ತಾ ಬ್ಯಾಗಿನ ಜಿಪ್ಪನ್ನು ಸರಿಸಿ, ಒಳಗೆ ಏನಿದೆ ಅಂತ ಕೈ ಹಾಕಿ ತೆಗೆದಳು.... ಶಶಾಂಕನ ಫೋಟೋಗಳು, ಶಶಾಂಕ ರೇಣುಕಾಳಿಗೆ ಕೊಟ್ಟ ಪುಸ್ತಕಗಳು, ಕಾಣಿಕೆಯನ್ನಾಗಿ ಕೊಟ್ಟ ವಸ್ತುಗಳು.... ಒಂದು ಕವರಿನಲ್ಲಿ ಶಶಾಂಕನ ಹೆಸರಿನಲ್ಲಿದ್ದ ಸಣ್ಣ ಪುಟ್ಟ ಕಾಗದದ ತುಂಡುಗಳು .... ಎಲ್ಲವನ್ನೂ ಹೊರಕ್ಕೆ ತೆಗೆದಳು.

"ಓ... ಇದೆಲ್ಲಾ ರೇಣುಕಾಳ ಮನೆಯವರು ಕೊಟ್ಟಿರಬೇಕು" ಎಂದು ಹೇಳುತ್ತಾ ಸೀಮಾಳ ಕಡೆ ನೋಡಿದಳು. ಅವಳ ಮುಖ ವಿವರ್ಣವಾಗಿತ್ತು.

"ಸಾರೀ.... ಸೀಮಾ.... ಇದನ್ನೆಲ್ಲ ನಾನು ನಿಮ್ಮೆದುರಿಗೆ ತೆಗೆಯಬಾರದಾಗಿತ್ತು.... ನಂಗೆ ಗೊತ್ತಾಗ್ಲಿಲ್ಲ" ಎನ್ನುತ್ತಾ ಅವುಗಳನ್ನ ಮತ್ತೆ ಬ್ಯಾಗಿಗೆ ತುಂಬಿಟ್ಟಳು.

"ಅವಳೇ ಇಲ್ಲದಿದ್ದ ಮೇಲೆ, ಇವೆಲ್ಲಾ ಯಾಕೆ? ಎಸೀ ಅತ್ಲಾಗೆ" ತಾಯಿ ಎಂದಳು. "ಹೊಟ್ಟೆ ಉರಿಸೋಕೆ ಬೇಕೂಂತ ಕೊಟ್ಟಿದ್ದಾರೆ"

"ಇದನ್ನೆಲ್ಲ ಅವರು ಇಟ್ಕೊಂಡು ಏನ್ಮಾಡ್ತಾರಮ್ಮ.... ಶಶಾಂಕ ಬಂದು ನೋಡಲಿ. ಅವನೇ ಎಸೀಲಿ ನಂಗ್ಯಾಕೆ?" ಸೀಮಾ ತನಗೆ ಸಂಬಂಧಿಸಿದುದೇ

ಅಲ್ಲ ಎನ್ನುವಂತೆ ಸುಮ್ಮನೇ ನಿಂತಿದ್ದಳು. ಇಪ್ಪತ್ತು ನಿಮಿಷಗಳೊಳಗೆ ಶಶಾಂಕ ಹಿಂತಿರುಗಿದ್ದ.

"ಅಬ್ಬಾ... ತಿರುಗಿ ತಿರುಗಿ ಸುಸ್ತಾಯ್ತು. ಒಂದು ಹತ್ತು ನಿಮಿಷ ರೆಸ್ಟ್ ತಗೋತೀನಿ." ಎನ್ನುತ್ತಾ ರೂಮಿಗೆ ಹೋದ. ಸೀಮಾ ಅವನ ಹಿಂದೆಯೇ ಬಂದಳು.

"ರೇಣುಕಾಳ ತಂದೆ ತಾಯಿ ಏನಂದ್ರು?" ಮುಜುಗರಗೊಂಡಿದ್ದರೂ ಕೇಳಿದಳು.

"ಏನಂತಾರೆ....? ಮಗಳನ್ನು ಕಳಕೊಂಡ ದುಃಖದಲ್ಲಿದ್ದಾರೆ. ಅವಳ ತಂಗೀನ ನೋಡಿ ತುಂಬಾ ಬೇಸರವಾಯ್ತು.... ಅವರಿಗೆ ಗಂಡು ಮಕ್ಕಳಿಲ್ಲ. ರೇಣುಕಾಳೇ ಸಂಪಾದನೆ ಮಾಡುತ್ತಿದ್ದುದು... ಈಗ ಅವರಿಗೆ ಬೇಕಾದಷ್ಟು ಖರ್ಚು ಇರುತ್ತೆ. ಏನಾದ್ರೂ ಸಹಾಯ ಮಾಡೋಣ ಅಂತ ಅನ್ಸುತ್ತೆ....ಆದರೆ ಅವರು ತಪ್ಪು ತಿಳ್ಕೋತಾರೆ.... ಅಲ್ಲದೇ... ಈಗ ನಂಗೂ ಆದಾಯವಿಲ್ಲ..." ಸೀಮಾ ಮೌನವಾಗಿ ಅವನನ್ನೇ ನೋಡಿದಳು.

"ಕೇಸಿಗಾಗಿ, ಏನು ಖರ್ಚು ಮಾಡಿದಾರೋ, ಹಾಗೇ ಕಾಂಪೆನ್ಸೇಷನ್ ಅಂತ ಗೌತಮನ ಕಡೆಯಿಂದ ಕೊಡಿಸ್ಬೇಕು.... ಸಧ್ಯದಲ್ಲೇ ವಿಚಾರಣೆ ಪ್ರಾರಂಭ ವಾಗಬಹುದು. ಹಾಗಂತ ಲಾಯರ್ರು ಹೇಳಿದ್ರು.... ಯಾಕೆ ಸೀಮಾ ಏನೂ ಮಾತಾಡ್ತಿಲ್ಲ. ಏನು ಯೋಚಿಸ್ತಿದೀರಿ...?"

"ಏನೂ ಇಲ್ಲ. ಇವತ್ತು ರೇಣುಕಾಳ ನೆನಪು ನಿಮ್ಮನ್ನು ತುಂಬಾ ಕಾಡ್ತಾ ಇರಬಹುದು ಅಲ್ವಾ....?"

"ಸ್ವಲ್ಪ ಮನಸ್ಸು ಕಲಕಿದೆ.... ಅವಳ ತಂದೆ ಒಂದು ಬ್ಯಾಗು ಕೊಟ್ರು....ಅದು ಕಾರ್ನಲ್ಲೇ ಇದೆ... ಅದರೊಳಗೆ ಏನಿದೆ ಅಂತ ನೋಡೋಕೂ ಮನಸ್ಸಿಲ್ಲ..."

"ಒಂದ್ಸಾರಿ ನೋಡಬಹುದಲ್ಲ ಶಶಾಂಕ್.... ಅದರಲ್ಲಿ ಕೇಸಿಗೆ ಸಂಬಂಧ ಪಟ್ಟ ಕ್ಲೂ ಏನಾದ್ರೂ ಇದ್ದರೂ ಇರಬಹುದು."

"ಏನಿರುತ್ತೆ....? ಅವಳ ರೂಮಿನಲ್ಲಿ. ನಾನು ಕೊಟ್ಟ ಕೆಲವು ಪುಸ್ತಕ ಇತ್ಯಾದಿಗಳನ್ನು ಇಟ್ಕೊಂಡಿದ್ಲು... ಅವುಗಳೇ ಇರಬಹುದು. ಯಾವುದಾದೂ ಲೈಬ್ರರಿಗೆ ಕೊಟ್ಟು ಬಿಡ್ತೀನಿ."

"ಕೊಡೋಕ್ಮುಂಚೆ ಒಂದ್ಸಾರಿ ನೋಡಿ.... ವಿಜಯ ಆ ಬ್ಯಾಗನ್ನು ತಂದು, ತೆಗೆದು ನೋಡಿದ್ರು...ನೀವೂ ಒಂದ್ಸಾರಿ ನೋಡ್ಬಿಡಿ."

"ಸರಿ, ನೋಡಿದ್ರಾಯ್ತು. ಈಗ ಒಂದು ಘಳಿಗೆ ರೆಸ್ಟ್ ತಗೋಳ್ತೀನಿ. ಬಾಗಿಲು ಹಾಕ್ಬಿಟ್ಟು ಬನ್ನಿ..." ಎನ್ನುತ್ತಾ ಮಂಚದ ಮೇಲೆ ಉರುಳಿಕೊಂಡ. ಕೆಲವೇ ಕ್ಷಣಗಳಲ್ಲಿ ಅವನಿಗೆ ನಿದ್ದೆ ಹತ್ತಿತ್ತು. ಅವಳು ಕಣ್ಣು ಬಿಟ್ಟು ಕೊಂಡು ಮಲಗಿದ್ದಳು.....ಅವನ ಮೇಲೆ ಕೈ ಹಾಕಿ ಅವನ ಸನಿಹದಲ್ಲಿ ಮಲಗುವ ಮನಸ್ಸಾದರೂ ತಡೆದುಕೊಂಡಳು.

ಇವತ್ತು ಇವನ ಮೂಡ್ ಚೆನ್ನಾಗಿಲ್ಲ.... ರೇಣುಕಾಳ ಸುತ್ತ ಮುತ್ತ ಅವನ ಮನಸ್ಸು ತಿರುಗುತ್ತಿದೆ. ತಾನೀಗ ಇವನನ್ನು ಡಿಸ್ಟರ್ಬ್ ಮಾಡಬಾರದು ಎಂದುಕೊಂಡಳು. ಆದರೆ ಮರುಕ್ಷಣವೇ, ಇವನು ನನ್ನಿಂದ ವಿಮುಖನಾಗುವಂತೆ ಇರಲು ಬಿಡಬಾರದು. ಇವನೀಗ ನನ್ನವನು.... ನಾನು ಇವನನ್ನು ನನ್ನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂದುಕೊಂಡು ಅವನ ಸಮೀಪಕ್ಕೆ ಸರಿದು ಅವನನ್ನು ಬಳಸಿದಳು. ಅವನಿಗೆ ಎಚ್ಚರವಾಗಲಿಲ್ಲ. ಆದರೂ, ಅವನ ಸಾಮೀಪ್ಯ ನನಗೆ ಬೇಕು... ಇವನ ಮನಸ್ಸು ರೇಣುಕಾಳಿಂದ ಸದಾ ಕಾಲಕ್ಕೂ ದೂರ ಹೋಗುವಷ್ಟು ತಾನು ಇವನನ್ನು ಪ್ರೀತಿಸಬೇಕು... ಇವನಿಗೆ ನನ್ನ ಸರ್ವಸ್ವವನ್ನೂ ನೀಡಬೇಕು....ನಾನು ಇವನ ಸರ್ವಸ್ವವಾಗಬೇಕು... ಎಂದು ತನ್ನಲ್ಲೇ ಆಲೋಚಿಸುತ್ತಾ ಮಲಗಿದಳು. ಅಷ್ಟರಲ್ಲಿ ರೂಮಿನ ಬಾಗಿಲನ್ನು ಯಾರೋ ಬಡಿಯುತ್ತಿರುವ ಸದ್ದು ಕೇಳಿಸಿತ್ತು. ಶಶಾಂಕನಿಗೆ ಎಚ್ಚರವಾಗದಂತೆ ಎದ್ದು ಬಂದು, ಸದ್ದಾಗದಂತೆ ಬಾಗಿಲನ್ನು ತೆರೆದಳು. ವಿಜೀ ನಿಂತಿದ್ದಳು.

"ಸಾರೀ... ಮಲಗಿದ್ರಾ....? ವಾಣಿ ಬಂದಿದಾರೆ...." ಎಂದಳು.

"ಈಗ್ಬಂದೇ." ಎಂದು ಹೇಳಿ, ಕನ್ನಡಿಯ ಮುಂದೆ ನಿಂತು, ಮುಂಗುರುಳನ್ನು ಸರಿಪಡಿಸಿಕೊಂಡು ಮುಖವನ್ನೊಮ್ಮೆ ಸರಿಯಾಗಿ ನೋಡಿಕೊಂಡು ಬಂದಳು. ಇಬ್ಬರೂ ಮುಂದಿನ ರೂಮಿಗೆ ಬಂದರು. "ಹಾಕಿದ್ದ ರಜ ಮುಗೀತಲ್ಲ ಸೀಮಾ... ಕೆಲಸಕ್ಕೆ ಯಾವಾಗ್ಲಿಂದ ಬರ್ತೀರಿ.,..?"

"ಮುಂದಿನ ವಾರದಿಂದ ಬರ್ತೀನಿ. ಯಾಕೋ ಮೂಡೇ ಚೆನ್ನಾಗಿಲ್ಲ..." ಎಂದು ಹೇಳಿ, ಕೆಳದನಿಯಲ್ಲಿ, ರೇಣುಕಾಳ ಮನೆಗೆ ಶಶಾಂಕ ಹೋಗಿದುದ್ದನ್ನು ತಿಳಿಸಿದಳು.. "ಯಾಕೋ ಮನಸ್ಸು ಕೆಟ್ಟು ಹೋಗಿದೆ.... ಶಶಾಂಕ ರೇಣುಕಾಳಿಗೆ ಕೊಟ್ಟಿದ್ದ ಗಿಫ್ಟ್‌ಗಳನ್ನೆಲ್ಲ ಅವರು ವಾಪಸ್ಸು ಕಳಿಸಿದ್ದಾರೆ... ಶಶಾಂಕ ಅವಳನ್ನು ಮರೆಯದೇ ಇದ್ರೆ....?"

"ನೀನು ಗೌತಮನ್ನ ಮರೆತಿದೀಯಾ....?"

"ಮರೆಯೋ ಪ್ರಯತ್ನ ಮಾಡ್ತಾನೇ ಇದೀನಿ....ಆದರೆ ಶಶಾಂಕನ ಮನಸ್ನಲ್ಲಿ ಏನು ಇದೆಯೋ ಅನ್ನುವ ಆತಂಕ ಕಾಡ್ತಾನೇ ಇರುತ್ತೆ. ಜೊತೆಗೆ ಅವನ ಈ ಪಿಂಡ... ನನ್ನ ಒಡಲೊಳಗೆ ಕುಳಿತಿದೀಯಲ್ಲ... ತೆಗೆಸಿಬಿಡ್ಲಾ ಅಂತ ಈಗಲೂ ಅನ್ನಿಸ್ತಿದೆ...."

"ಅದು ನನ್ನದು... ನಂಗೋಸ್ಕರ ಇಟ್ಟುಕೊಂಡಿದೀಯ... ಅಂಥಾ ಕೆಲಸ ಮಾತ್ರ ಮಾಡ್ಬೇಡ... ಈ ವಿಷಯಾನ ಗೌತಮನಿಗೆ ಯಾಕೆ ಹೇಳ್ದೆ..? ಹೇಳ್ಬಾರ್ದಾಗಿತ್ತು ನೀನು..." ಆಕ್ಷೇಪಿಸಿದಳು. ಸೀಮಾ ಮುಖ ಕೆಟ್ಟಿತ್ತು.

"ನಿಮಗೆ ಹೇಗೆ ಗೊತ್ತಾಯ್ತು?"

"ಅವನು ಇವತ್ತು ಫೋನು ಮಾಡಿಸಿದ್ದ...."

"ಏನಂದ....?"

"ನೀನು ಆದಷ್ಟು ಬೇಗ ಅಬಾರ್ಷನ್ ಮಾಡಿಸ್ಕೋಬೇಕಂತೆ... ನೀನು ಪ್ರೆಗ್ನೆಂಟ್ ಆಗಿದೀಯ ಅಂತ ಯಾರಿಗೂ ಗೊತ್ತಾಗಬಾರ್ದಂತೆ... ಇದಲ್ಲದಿದ್ದರೆ, ಇನ್ನೊಂದು ಮಗು ಆಗಿಯೇ ಆಗುತ್ತೆ. ಅವಳನ್ನು ಕನ್ವಿನ್ಸ್ ಮಾಡಿ ಅಂತಂದ."

"ನೀವೇನಂದ್ರಿ ವಾಣೀ...."

"ಅವಳು ಪ್ರೆಗ್ನೆಂಟ್ ಆಗಿಲ್ಲ....ನಿನ್ನತ್ರ ತಮಾಷೆ ಮಾಡಿದಾಳೆ ಅಥವಾ ನಿನ್ನನ್ನು ರೇಗಿಸಿದಾಳೆ...ಅಂತಂದೆ. ಅವನು ನಂಬಿದಂತೆ ಅನ್ನಿಸಲಿಲ್ಲ."

"ಈಗೇನ್ಮಾಡ್ಲೀ ನಾನು....? ಅವನು ನನಗೆ ತೊಂದರೆ ಏನಾದ್ರೂ ಮಾಡಿದ್ರೆ...."

"ತೊಂದರೆ ಏನೂ ಮಾಡೋಕ್ಕಾಗೋಲ್ಲ. ಅಲ್ಲದೇ ನೀನು ಪ್ರೆಗ್ನೆಂಟ್ ಅಂಥ ಅವನೇ ಯಾರಿಗೂ ಹೇಳೋಲ್ಲ. ಧೈರ್ಯವಾಗಿರು..."

"ಅಲ್ಲ ವಾಣೀ... ಒಂದು ಸ್ನೇಹ, ಒಂದು ಪ್ರೀತಿ, ಇಷ್ಟು ಹಿಂಸೆ ಮಾಡುತ್ತೆ ಅಂತ ನಾನಂದುಕೊಂಡಿರ್ಲಿಲ್ಲ. ಮದುವೆ ಆಗ್ದೇನೇ ಗಂಡನ ಹಕ್ಕು ಚಲಾಯಿಸ್ತಾನಲ್ಲ. ಮದುವೆ ಆಗಿದ್ದಿದ್ರೆ ಏನು ಗತಿ? ಸಧ್ಯ ದೇವರೇ ತಪ್ಪಿಸಿದ."

"ಆದರೂ ನೀನು ಸ್ವಲ್ಪ ಎಚ್ಚರವಾಗಿರು. ಅವನ ಮನೆಯವರು ನಿನಗೆ, ನಿನ್ನ ಮಗುವಿಗೆ, ಶಶಾಂಕನಿಗೆ ಏನಾದ್ರೂ ತೊಂದರೆ ಮಾಡಬಹುದು. ಹೇಳಿ ಹೋಗೋಣ ಅಂತ ಬಂದೆ. ನಾನಿನ್ನು ಬರ್ತೀನಿ."

"ಗೌತಮ ಮತ್ತೇನಾದ್ರೂ ಫೋನು ಮಾಡಿದ್ರೆ, ಸೀಮಾ ಪ್ರೆಗ್ನೆಂಟ್ ಅಲ್ಲ ಅಂತ ತಿಳಿಸಿಬಿಡಿ... ಅವನು ನಂಬಿದರೆ ನಂಬಲಿ ಬಿಟ್ಟರೆ ಬಿಡಲಿ. ಈಗ ಹೇಗೂ ಅವನ ಸಂಬಂಧ ಏನೂ ಇಲ್ಲ. ಅವಳು ಬೇರೆ ಮದುವೆ ಮಾಡಿಕೊಂಡಿದಾಳೆ. ಅವಳ ಚಿಂತೆ ಬಿಡು ಅಂತ ಹೇಳ್ಬಿಡಿ..."

"ಹೇಳ್ತೀನಿ, ಹಾಗೇ ನಿನಗೊಂದು ಸಲಹೆ... ಸುಮ್ಮನೆ ಏನೇನೋ ಯೋಚಿಸ ಬೇಡ. ನಿನ್ನ ಹೆಲ್ತ್ ಕೆಡುತ್ತೆ. ಬೆಳೆಯುತ್ತಿರುವ ಮಗುವಿನ ಬೆಳವಣಿಗೆಗೆ ಧಕ್ಕೆ ಬರುತ್ತೆ. ಸುಂದರವಾದ, ಆರೋಗ್ಯವಾದ ಮಗು ಹುಟ್ಟಲಿ ಅಂತ ನನ್ನಾಸೆ...."

"ನನಗೂ ಅದೇ ಆಸೆ ವಾಣೀ... ಮೊದಲ ಬಾರಿಗೆ ತಾಯಿಯಾಗ್ತಿದೀನಿ. ಆ ಆನಂದ, ಹೊಸ ಅನುಭವ ಎಲ್ಲವೂ ನನ್ನದಾಗಬೇಕು ಅಂತ ನನ್ನಾಸೆ... ಆದರೆ ಎಲ್ಲಾ ಹೀಗಾಗಿ ಹೋಯ್ತಲ್ಲ."

"ಡೋಂಟ್ ವರೀ ಸೀಮಾ....ಎಲ್ಲಾ ಸರಿ ಹೋಗುತ್ತೆ...."

"ನಂಗೊಂದು ಫೇವರ್ ಮಾಡ್ತೀರಾ ವಾಣೀ... ಶಶಾಂಕ, ರೇಣುಕಾಳಿಗೆ

ಕೊಟ್ಟಿರುವ ಗಿಫ್ಟ್‌ಗಳನ್ನಿಟ್ಟಿರುವ ಬ್ಯಾಗನ್ನು ನಿಮಗೆ ಕೊಡ್ತೀನಿ. ದೂರ ಎಲ್ಲಾದ್ರೂ ಬಿಸ್ಹಾಕಿ. ನನ್ನ ಕಣ್ಣೆದುರಿಗೆ ಇದ್ದರೆ ಕೆಟ್ಟ ಆಲೋಚನೆಗಳು ಬರುತ್ತೆ. ಶಶಾಂಕನ ಕಣ್ಣಿಗೂ ಅದು ಬೀಳಬಾರದು...ರೇಣುಕನ್ನ ಅವರು ನೆನಪಿಸಿಕೊಳ್ಳಬಾರದು."

"ಸರಿ ಕೊಡು. ನಿನ್ನ ಕಣ್ಣಿಗೆ ಬೀಳದಂತೆ ಎಲ್ಲಾದರೂ ಬಿಸ್ಹಾಕ್ತೀನಿ..." ಸೀಮಾ, ಆ ಬ್ಯಾಗನ್ನು ಯಾರಿಗೂ ಕಾಣದಂತೆ, ಬೇರೊಂದು ಬ್ಯಾಗಿನೊಳಗೆ ಹಾಕಿ ತಂದು ಕೊಟ್ಟಳು... ವಿಜಯ ಹಾಗೂ ಅವಳ ತಾಯಿ ಅಡಿಗೆ ಮನೆಯಲ್ಲಿದ್ದುದರಿಂದ ಗೊತ್ತಾಗಲಿಲ್ಲ. ವಾಣಿ ಯಾರಿಗೂ ಹೇಳದೇ ಹಾಗೇ ಹೊರಟು ಹೋದಳು.

ಸೀಮಾ ಒಬ್ಬಳೇ ಕುಳಿತಿರುವುದನ್ನು ಕಂಡು ವಿಜಯ ಹತ್ತಿರಕ್ಕೆ ಬಂದಳು. "ವಾಣಿ ಎಲ್ಲಿ? ಹೊರಟು ಹೋದ್ರಾ? ನಮಗ್ಯಾರಿಗೂ ಹೇಳಲೇ ಇಲ್ಲ" ಕೇಳಿದಳು.

"ಅವಳ ತಮ್ಮನಿಂದ ಫೋನು ಬಂದಿತ್ತು. ತಕ್ಷಣವೇ ಹೊರಟು ಬಿಟ್ಲು. ನಿಮಗೆ ಹೇಳಿ ಅಂತ ಹೇಳಿದ್ಲು. ನೀವು ಮಲಗಿದ್ರೇನೋ?"

"ಕೋಡು ಬಳೆ ಮಾಡ್ತಿದ್ವು. ಮನೆಯೆಲ್ಲಾ ಕನುಗು ಸುತ್ತಿಕೊಂಡಿದೆ... ಗೊತ್ತಾಗ್ಲೇ ಇಲ್ವಾ..? ನಿಮಗೆ ಕೋಡುಬಳೆ ಅಂದ್ರೆ ಇಷ್ಟಾನಾ ಸೀಮಾ... ಶಶಿಗೆ ತುಂಬಾ ಇಷ್ಟ. ಬಿಸಿ ಬಿಸಿಯಾಗಿದೆ. ತಟ್ಟೆಗೆ ಹಾಕಿಕೊಡ್ತೀನಿ. ನೀವೂ ತಿನ್ನಿ. ಅವನಿಗೂ ಕೊಡಿ" ಎನ್ನುತ್ತಾ ಒಳಗೆ ಹೋಗಿ, ಕೋಡುಬಳೆಯ ತಟ್ಟೆಯನ್ನು ತಂದುಕೊಟ್ಟಳು. ಸೀಮಾ ರೂಮಿಗೆ ಬಂದಳು. ಶಶಾಂಕ ಇನ್ನೂ ಎದ್ದಿರಲಿಲ್ಲ. ಎಬ್ಬಿಸಿದಳು.

"ನಿಮ್ಮಕ್ಕ ಬಿಸಿ ಬಿಸಿ ಕೋಡುಬಳೆಯನ್ನು ಕೊಟ್ಟಿದ್ದಾರೆ. ಏಳಿ, ತಿನ್ನಿ" ಶಶಾಂಕ ಎದ್ದು ಕುಳಿತ.

"ನೀವು ತಿಂದ್ರಾ....? ಅಮ್ಮ ಚೆನ್ನಾಗಿ ಮಾಡ್ತಾಳೆ..." ಎಂದ.

"ಕರಿದದ್ದನ್ನು ನೋಡಿದ್ರೆ ವಾಕರಿಕೆ ಬರುತ್ತೆ...." ಎಂದುಬಿಟ್ಟಳು. ಅವನು ಪ್ರಶ್ನಾರ್ಥಕವಾಗಿ ಅವಳ ಕಡೆ ನೋಡಿದ....ಆದರೆ ಏನನ್ನೂ ಕೇಳಲಿಲ್ಲ. ಅವಳು ಪೆಚ್ಚಾಗಿದ್ದಳು.

ಪರಿಸ್ಥಿತಿಯ ಸೂಕ್ಷ್ಮ ಅರಿವಾಗಿತ್ತು ಅವನಿಗೆ. "ಮತ್ತೆ ಡಾಕ್ಟರ್ ಹತ್ರ ಹೋಗಿದ್ರಾ?" ಮೆಲುದನಿಯಲ್ಲಿ ಕೇಳಿದ. ಇಲ್ಲ ಎನ್ನುವಂತೆ ತಲೆಯಾಡಿಸಿದಳು. "ಈ ವಿಷಯದಲ್ಲಿ ನನಗೆ ಏನೂ ತಿಳಿಯದು. ವಾಣಿಯ ಜೊತೇಲಿ ಹೋಗ್ಬನ್ನಿ. ಈಗಲೇ ನಮ್ಮ ಮನೆಯವರ್‍ಯಾರಿಗೂ ತಿಳಿಯೋದು ಬೇಡ...." ಎಂದ.

"ವಾಣಿ ಬಂದಿದ್ಲು....ಈಗ್ತಾನೇ ವಾಪಸ್ಸು ಹೋದ್ಲು"

"ನನ್ನನ್ನು ಎಬ್ಬಿಸಬೇಕಾಗಿತ್ತು ಸೀಮಾ.... ಯಾಕೆ ಬಂದಿದ್ರು...."

"ಸುಮ್ಮನೇ..." ಎಂದವಳು, "ನಾನೊಂದು ವಿಷಯ ತಿಳಿಸ್ತೀನಿ.... ನೀವು

ಅಪ್ಸೆಟ್ ಆಗಬಾರ್ದು..." ಎಂದಳು.

"ಇಲ್ಲ ಹೇಳಿ..."

"ನಾನು ಮುಂದಿನ ವಾರದಿಂದ ಕೆಲಸಕ್ಕೆ ಹೋಗ್ತೀನಿ, ರಜ ಮುಗಿದಿದೆ."

"ಕೆಲಸಕ್ಕೆ ಹೋಗೋದ್ರಿಂದ ನಿಮ್ಮ ಹೆಲ್ತ್‌ಗೆ ಏನೂ ತೊಂದ್ರೆ ಇಲ್ಲ ಅನ್ನೋದಾದ್ರೆ ಹೋಗಿ... ನಿಮಗೂ ಬೇಸರ ಕಳೆಯುತ್ತೆ...."

"ಇನ್ನೂ ಒಂದು ವಿಷಯ....ಅವತ್ತು ನಾನು ಗೌತಮನ್ನ ಮೀಟ್ ಮಾಡೋಕ್ಕೆ ಹೋದಾಗ, ಅವನನ್ನು ಕೆಟ್ಟವನನ್ನಾಗಿ ಮಾಡ್ಬೇಕು ಅಂತ...." ಮಾತನ್ನು ನಿಲ್ಲಿಸಿ ಅವನ ಕಡೆ ನೋಡಿದಳು.

"ಅವನನ್ನು ಬೈದ್ರಾ? ಮೊದಲೇ ಅವನು ಕೆಟ್ಟವನು....ಏನಂದ?"

"ನಾನು ಪ್ರೆಗ್ನೆಂಟ್ ಅಂತ ಹೇಳ್ಬಿಟ್ಟೆ...." ಶಶಾಂಕ ಬೆಚ್ಚಿದ.

"ಯಾಕೆ ಹಾಗೆ ಮಾಡಿದ್ರಿ... ಹೇಳ್ಬಾರ್ದಾಗಿತ್ತು ನೀವು... ಮೊದಲೇ ಅವನು ನಿಮ್ಮನ್ನು ಪೀಡಿಸ್ತಾನೆ. ಇನ್ಮುಂದೆ ಬ್ಲ್ಯಾಕ್ ಮೇಲ್ ಮಾಡ್ತಾನೆ... ಅಷ್ಟೂ ಗೊತ್ತಾಗ್ಲಿಲ್ವಾ ನಿಮಗೆ?"

"ಸಾರೀ ಶಶಾಂಕ್... ನಿನ್ನ ಕೆಟ್ಟ ನಡತೆಯಿಂದ ನಾನು ಹಾಳಾದೆ ಅಂತ ಹೇಳುವ ವೇಗದಲ್ಲಿ ಈ ವಿಷಯವನ್ನು ಹೇಳ್ಬಿಟ್ಟೆ... ಅಬಾರ್ಷನ್ ಮಾಡಿಸ್ಕೋ... ಇಲ್ದಿದ್ರೆ ನನ್ನನ್ನು ಎಲ್ರೂ ರೇಪಿಸ್ಟ್ ಅಂತ ಪಟ್ಟ ಕಟ್ತಾರೆ ಅಂತ ಅಂದ... ವಾಣಿಗೂ ಇದೇ ವಿಷಯಕ್ಕೆ ಫೋನು ಮಾಡಿ, ಅಬಾರ್ಷನ್ ಮಾಡಿಸ್ಕೋ ಅಂತ ಬಲವಂತ ಮಾಡಿ ಅಂತ ಹೇಳಿದಾನೆ... ಈಗ ನಂಗೆ ಭಯ ಆಗ್ತಿದೆ... ನಮಗೆಲ್ಲಾ ಏನು ಮಾಡಿಬಿಡ್ತಾನೋ ಅಂತ..."

"ಭಯ ಯಾಕೆ? ನಾನಿಲ್ವಾ...? ನಮ್ಮ ಸುದ್ದಿಗೆ ಬಂದರೆ, ಅವನ ಅಪರಾಧ ಇನ್ನೂ ಹೆಚ್ಚಾಗುತ್ತೆ. ಆ ಹೆದರಿಕೆ ಅವನಿಗೂ ಇರುತ್ತೆ....ಅದ್ಸರಿ....ಅವನ ಹತ್ರ ಫೋನು ಎಲ್ಲಿದೆ...? ಎಲ್ಲಿಂದ ಮಾಡಿದ್ನಂತೆ....?"

"ಏನೋ ನಂಗೊತ್ತಿಲ್ಲ. ನಾನು ಕೇಳ್ಲಿಲ್ಲ..."

"ಸರಿ ಬಿಡಿ... ಚಿಂತೆ ಮಾಡ್ಬೇಡಿ. ನಂಗೆ ಕಾಫಿ ಕುಡೀಬೇಕು ಅಂತ ಅನ್ನಿಸ್ತಿದೆ. ನಿಮಗೂ ಬೇಕಾ....?" ಎಂದು ಕೇಳಿ ಕಾಫಿಯನ್ನು ತರಲು ಎದ್ದು ಹೋದ. ಇವಳು ಗಲ್ಲಕ್ಕೆ ಕೈ ಕಟ್ಟಿ ಕುಳಿತಳು. ಅವನು ತಂದ ಕಾಫಿಯನ್ನು ಇಬ್ಬರೂ ಕುಡಿದರು. ಅಷ್ಟರಲ್ಲಿ ವಾಣಿ ಫೋನು ಮಾಡಿದ್ದಳು.

"ನಾನು ಈಗ್ಲೇ ಶಶಾಂಕನ ಹತ್ರ ಮಾತಾಡ್ಬೇಕು. ಮನೆಗೆ ಬರೋಕೆ ಆಗುತ್ತಾ?" ಕೇಳಿದ್ದಳು.

"ಏನು ವಿಷಯ ವಾಣೀ....?" ಸೀಮಾ ಕೇಳಿದ್ದಳು. ಅವನು ಅವಳತ್ತ

ನೋಡಿದ.

"ಮನೆಗೆ ಬಂದ್ರೇ ಇಲ್ಲೇ ಮಾತಾಡೋಣ... ಶಶಾಂಕನ್ನ ಕೇಳಿ ನೋಡು..." ಎಂದಳು.

"ನಾನು ಅವರಿಗೇ ಕೊಡ್ತೀನಿ ಅವರ ಹತ್ರ ಮಾತಾಡಿ" ಎಂದು ಹೇಳಿ ಫೋನನ್ನು ಅವನ ಕೈಗಿತ್ತಳು. ಅವನು ಮಾತಾಡಿದ. "ಬರ್ತೀವಿ..." ಎಂದದ್ದು ಕೇಳಿ, ಸೀಮಾ ಆತಂಕಗೊಂಡಳು. ಅವನು ಮಾತನ್ನು ಮುಗಿಸುತ್ತಿದ್ದಂತೆಯೇ ಕೇಳಿದಳು.

"ಬರೋಕ್ಕೆ ಆಗುಲ್ಲ ಅಂತ ಹೇಳ್ಬೇಕಾಗಿತ್ತು ಶಶಾಂಕ್...."

"ಅವರು ನಮಗೆ ಅಷ್ಟು ಸಹಾಯ ಮಾಡಿದಾರೆ. ಹೇಗೆ ಇಲ್ಲ ಅನ್ನಕ್ಕೆ ಆಗುತ್ತೆ... ಏಳಿ ರೆಡಿಯಾಗಿ... ಹೋಗಿ ಬರೋಣ" ಎಂದು ಹೇಳಿ ಬೇಗ ಬೇಗ ಸಿದ್ಧನಾದ. ಸೀಮಾ ಆತಂಕದಿಂದಲೇ ಸಿದ್ಧಳಾದಳು. ಇಬ್ಬರೂ ಹೊರಟರು.

"ಈಗ ಮತ್ತೆಲ್ಲೋ ಹೊರಟ್ರಲ್ಲ. ಇಡೀ ದಿನ ಸುತ್ತಾಡಿದ್ದು ಸಾಕಾಗ್ಲಿಲ್ವಾ... ನೀನಾದ್ರೂ ಬೇಡಾ ಅನ್ಬಾರ್ದಾ ಸೀಮಾ...." ತಾಯಿ ಕೇಳಿದಳು.

"ಬೇಗ ಬಂದು ಬಿಡ್ತೀವಿ. ನನ್ನ ಫ್ರೆಂಡು ಫೋನು ಮಾಡಿದ್ರು.... ಯಾವುದೋ ಕೆಲಸದ ವಿಷಯ" ಎಂದು ಹೇಳಿ ಬಾಗಿಲನ್ನು ದಾಟಿದ. ಸೀಮಾ ಹಿಂದೆ ನಡೆದಳು. ಏನಿರಬಹುದು ಎಂದು ಇಬ್ಬರೂ ಅವರವರ ರೀತಿಯಲ್ಲಿ ಚಿಂತಿಸುತ್ತಾ ತಲುಪಿದರು.

*****

"ಸಾರೀ ಸೀಮಾ.... ಸಾರೀ ಶಶಾಂಕ್.... ನಾನು ನಿಮ್ಮಿಬ್ಬರಿಗೂ ತಿಳಿಸದೇ ಒಂದು ತಪ್ಪು ಮಾಡಿದೀನಿ.." ಏನದು ಎಂದು ಇಬ್ಬರೂ ಕೇಳಲಿಲ್ಲ. ಅವಳೇ ಮಾತನಾಡಿದಳು. "ಶಶಾಂಕ್... ನಿಮ್ಮ ಹತ್ರ ಇನ್ನೊಂದು ಮೊಬೈಲ್ ಇದೆಯಾ...? ಪ್ರಶ್ನಿಸಿದಳು. ಅವನು ಸೀಮಾಳ ಕಡೆ ನೋಡಿ ಇಲ್ಲ ಎನ್ನುವಂತೆ ಸಂಜ್ಞೆಯಲ್ಲಿಯೇ ಉತ್ತರಿಸಿದ.

"ನೀವು ಯಾವುದಾದ್ರೂ ಹೊಸ ಫೋನಿನಿಂದ ಮಾತಾಡಿದ್ರಾ?"

"ಇಲ್ಲವಲ್ಲ... ಯಾಕೆ ಹೀಗೆ ಕೇಳ್ತಿದೀರಿ....?"

"ರೇಣುಕಾಗೆ ನೀವು ಕೊಟ್ಟ ಒಂದು ಪುಟ್ಟ ಡೈರಿಯಲ್ಲಿ ನಿಮ್ಮ ಫೋನು ನಂಬರ್ರು ಇದೆ... ಆದರೆ... ಅದು ನಿಮ್ಮ ಈ ನಂಬರಲ್ಲ..."

ಆದರೂ ಯೋಚಿಸಿ ಯೋಚಿಸಿ ಸಾಕಾಯ್ತು. ಅದಕ್ಕೇ ಫೋನು ಮಾಡಿ ಬನ್ನಿ ಅಂತ ಕರೆದೆ.

"ಬರೆಯುವಾಗ, ಏನೋ ಮಿಸ್ಟೇಕ್ ಆಗಿರಬಹುದು...."

"ಇಲ್ಲ. ನಿಮ್ಮ ಹೆಸರನ್ನು ಬರೆದು, ಅದರ ಕೆಳಗೆ, ನಿಮ್ಮ ಮನೆಯ ನಂಬರು ಹಾಗೂ ಮೊಬೈಲ್ ನಂಬರನ್ನು ಬರೆದುಕೊಂಡಿದ್ದಾಳೆ.... ಅದರ ಕೆಳಗೆ...."

"ಆ ಡೈರಿ ನಿಮಗೆಲ್ಲಿ ಸಿಕ್ತು? ರೇಣುಕಾಳ ಫ್ರೆಂಡ್ ಕೊಟ್ಲಾ...?"

"ಇಲ್ಲ... ನಿಮಗೆ ರೇಣುಕಾಳ ತಂದೆ ಕೊಟ್ಟ ಪುಸ್ತಕಗಳು ಹಾಗೂ ಗಿಫ್ಟ್ ಗಳೊಂದಿಗೆ ಈ ಡೈರಿ ಕೂಡಾ ಇತ್ತು...."

"ಅದು ನಿಮ್ಮ ಕೈಗೆ ಹೇಗೆ ಬಂತು....? ವಿಜಿ ಕೊಟ್ಲಾ?"

"ಇಲ್ಲ... ಇಲ್ಲ...ಮಧ್ಯಾಹ್ನ ನಿಮ್ಮ ಮನೆಗೆ ನಾನು ಬಂದಿದ್ದಾಗ, ಸೀಮಾ ಕೊಟ್ಟಳು...."

"ಯಾಕೆ ಸೀಮಾ ಹೀಗೆ ಮಾಡಿದ್ರಿ? ನನಗೆ ತಿಳಿಸದೇ....?"

"ಸಾರೀ ಶಶಾಂಕ್...ಅದನ್ನು ನೋಡ್ತಾ ಇದ್ದರೆ, ನಾವು ಅಪ್ಸೆಟ್ ಆಗ್ತೀವಿ ಅಂತ ಅನ್ನಿಸ್ತು.... ನನಗೂ ಏನೋ ಆತಂಕ ಆಗ್ತಿತ್ತು...."

"ಹಾಗಂತ.... ನನ್ನ ಪರ್ಸನಲ್ ಥಿಂಗ್ಸ್‌ನ್ನೆಲ್ಲಾ ಕೊಟ್ಟು ಬಿಡ್ತೀರಾ....? ವಾಣೀ ಆ ಬ್ಯಾಗ್ ಎಲ್ಲಿ ಇತ್ತ ಕೊಡಿ..." ವಾಣಿ ಬ್ಯಾಗನ್ನು ಕೊಟ್ಟಳು. ಸೀಮಾ ಪೆಚ್ಚಾಗಿದ್ದಳು.

"ಸೀಮಂದು ಏನೂ ತಪ್ಪಿಲ್ಲ ಶಶಾಂಕ್.... ಅವಳು ತನ್ನ ಆತಂಕವನ್ನು ವ್ಯಕ್ತಪಡಿಸಿದಾಗ, ನಾನೇ ಅದನ್ನು ನಮ್ಮ ಮನೇಲಿ ಮುಚ್ಚಿಟ್ಟಿರೋಣ ಅಂತ ಸಲಹೆ ಕೊಟ್ಟು ತಗೊಂಡ್ಬಂದೆ. ಹಾಗೇ ಕುತೂಹಲದಿಂದ ಒಳಗೆ ಇದ್ದ ಪುಸ್ತಕಗಳನ್ನು ನೋಡಿದೆ. ಆಗ ಈ ಪುಟ್ಟ ಡೈರಿ ಸಿಕ್ತು...."

"ಸರಿ... ಸರಿ... ನಾನು ನೋಡ್ಕೋತೀನಿ."

"ಬೇಜಾರು ಮಾಡ್ಕೋಬೇಡಿ... ನಿಮ್ಮ ಹೊಸ ಮೊಬೈಲ್ ನಂಬರನ್ನು ನೋಡಿದೆ..."

"ಹೇಳಿದ್ನಲ್ಲ. ನನ್ನ ಹತ್ರ ಬೇರೆ ಮೊಬೈಲ್ ಫೋನು ಇಲ್ಲ ಅಂತ...."

"ಮತ್ತೆ... ಹಾಗಾದ್ರೆ ಆ ನಂಬರ್ರು ಯಾರದ್ದು? ನಿಮ್ಮ ಹೆಸರಿನ ಕೆಳಗೆ ಇದೆ."

"ಏನೋ ಮಿಸ್ಟೇಕ್ ಇರಬಹುದು."

"ಇಲ್ಲ ಶಶಾಂಕ್.... ಮಿಸ್ಟೇಕ್ ಇಲ್ಲ. ರೇಣುಕಾಳ ಕೊಲೆ ಆಯ್ತಲ್ಲ, ಅದರ ಹಿಂದಿನ ದಿನದ ತಾರೀಖು ಇದೆ.... ಅದರ ಕೆಳಗೆ ಈ ಹೊಸ ನಂಬರನ್ನು ಬರೆದುಕೊಂಡು ಪ್ರಶ್ನಾರ್ಥಕ ಚಿಹ್ನೆ ಹಾಕಿದಾಳೆ.... ಹಾಗೇ ಒಂದು ಸಣ್ಣ ಚೀಟಿಯಲ್ಲಿ....ಇದು ಶಶಾಂಕನ ಹೊಸ ನಂಬರ್ರು...ಅವನನ್ನು ಕೇಳಬೇಕು ಅಂತ ನೋಟ್ ಮಾಡಿಕೊಂಡಿದಾಳೆ..."

"ಆ ಬಗ್ಗೆ ಅವಳು ನನ್ನನ್ನು ಏನೂ ಕೇಳಿದ ನೆನಪಿಲ್ಲ."

"ಕೇಳುಕ್ಕೆ ಸಮಯವೇ ಆಗಲಿಲ್ಲ ಅಂತ ಕಾಣುತ್ತೆ.... ಅಥವಾ ನಿಮ್ಮ ಈ ಹಳೆಯ ನಂಬರ್‌ಗೆ ಫೋನು ಮಾಡಿದ್ಲಾ ನೆನಪು ಮಾಡ್ಕೊಳ್ಳಿ...."

"ಇಲ್ಲ.... ನನಗೆ ಅವಳು ಫೋನು ಮಾಡಿರ್ಲಿಲ್ಲ. ನಾನೂ ಮಾಡಿರ್ಲಿಲ್ಲ..."

"ಮತ್ತೆ? ಶಶಾಂಕನ ಜೊತೆ ಷಾಪಿಂಗ್‌ಗೆ ಹೋಗ್ಬೇಕು.... ಅವನಿಂದ ಫೋನು ಬಂದಿದೆ ಎಂದಿದ್ದಳಂತೆ....ಅವಳ ರೂಂಮೇಟ್ ಹೇಳಿದ್ಲು.... ಹಾಗಾದ್ರೆ ಅವಳು ಸುಳ್ಳು ಹೇಳಿರಬಹುದಾ....? ಅಥವಾ ರೂಂಮೇಟ್ ಸುಳ್ಳು ಹೇಳಿರಬಹುದಾ....?"

"ಸುಳ್ಳು ಹೇಳಿದ್ರೆ ಯಾರಿಗೆ ಲಾಭ....? ರೇಣುಕಾ ನನ್ನನ್ನು ಮೀಟ್ ಮಾಡುಕ್ಕೆ ಯಾವ ಸುಳ್ಳು ಕಾರಣವನ್ನೂ ಹೇಳಬೇಕಾಗಿರಲಿಲ್ಲ. ನಮ್ಮಿಬ್ಬರಿಗೆ ಎಂಗೇಜ್‌ಮೆಂಟ್ ಆಗಿತ್ತು. ಅಲ್ಲದೇ ಅವತ್ತು ನಾವಿಬ್ಬರೂ ಮೀಟ್ ಮಾಡುವ ಪ್ಲ್ಯಾನ್ ಇರಲಿಲ್ಲ. ನನಗೆ ಚೆನ್ನಾಗಿ ನೆನಪಿದೆ."

"ಹಾಗಾದ್ರೆ ಈ ನಂಬರ್‍ರು....?" ಎನ್ನುತ್ತಾ ಡೈರಿಯನ್ನು ಅವನ ಕೈಗಿತ್ತಳು. ಶಶಾಂಕ ನೋಡಿದ. ಅದು ರೇಣುಕಾಳದೇ ಕೈ ಬರಹ.... ನೋಟ್ ಬರೆದಿರುವುದೂ ಅವಳ ಕೈ ಬರಹವೇ.... ಎಲ್ಲಿ ಏನು ತಪ್ಪಾಗಿದೆ....?"

"ನಂಗೊಂದು ಅನುಮಾನ ಶಶಾಂಕ್, ಬೇರೆ ಯಾರೋ....ಈ ನಂಬರ್‌ರಿಂದ ಫೋನು ಮಾಡಿ, ನಿಮ್ಮ ನಂಬರ್‍ರು ಎನ್ನುವಂತೆ ಮಾತಾಡಿರಬಹುದು ಅಲ್ವಾ..?"

"ಹಾಗೆ ಯಾರು ಮಾಡ್ತಾರೆ ವಾಣೀ...."

"ಹಾಗಾದ್ರೆ ರೇಣುಕಾ ಬೇಕೂಂತ ಏನಾದ್ರೂ ಕಿತಾಪತಿ ಮಾಡಿರಬಹುದಾ?"

"ಛೇ... ರೇಣುಕಾ ಅಂಥೋಳಲ್ಲ. ಇದರಿಂದ ಅವಳಿಗೇನು ಲಾಭ?"

"ಹಾಗಾದ್ರೆ ಯಾವುದೋ ಲಾಭ ಇರೋರು ಹೀಗೆ ಮಾಡಿರಬಹುದಾ.... ಏನು ಹೇಳಿರಬಹುದು....? ಏನು ಮಾತಾಡಿರಬಹುದು? ಅವಳ ಕೊಲೆಗೆ ಈ ಕಾಲ್ ಕಾರಣವಾಗಿರಬಹುದು ಅಲ್ವಾ?"

"ಹಾಗಾದ್ರೆ ಇದು ಗೌತಮನದೇ ಕೆಲಸ" ಎನ್ನುತ್ತಾ ಸೀಮಾಳ ಕಡೆ ನೋಡಿದ. ಅವಳು ತಟಸ್ಥಳಾದಳು.

"ಎಸ್, ಗೌತಮನೇ ಕಾಲ್ ಮಾಡಿ, ಅವಳನ್ನು ನನ್ನ ಜೊತೆ ಷಾಪಿಂಗ್ ಬರುವಂತೆ ಕರೆದು, ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿರಬಹುದು...."

"ಅವಳಿಗೆ ಧ್ವನಿ ನಿಮ್ಮದಲ್ಲ ಅಂತ ಗೊತ್ತಾಗ್ಲಿಲ್ವಾ....?"

"ಅವನು ನನ್ನ ಧ್ವನಿಯನ್ನು ಅನುಕರಿಸಿ ಮಾತಾಡಿರಬಹುದು....ಅವಳನ್ನು ತನ್ನ ವಶ ಮಾಡಿಕೊಳ್ಳಲು ಏನೇನು ಮಾಡಿದಾನೋ....?"

"ಅವನ್ಯಾಕೆ ಹಾಗೆ ಮಾಡ್ತಾನೆ? ಬೇರೆ ಯಾರೋ ಇರಬಹುದು...." ಸೀಮಾ ಹೇಳಿದಾಗ, ವಾಣಿ, ಶಶಾಂಕ್ ತಟ್ಟನೆ ಅವಳ ಕಡೆ ನೋಡಿದರು.

"ಸಾರೀ....ನನಗೆ ಅನ್ನಿಸಿದ್ದನ್ನು ಹೇಳಿದೆ...."

"ಹಾಗಿದ್ದರೆ, ಅವನು ತಲೆ ಮರೆಸಿಕೊಂಡು ಹೋಗಬಾರದಾಗಿತ್ತು....ಈಗ ಅನುಮಾನ ಅವನ ಮೇಲೇ ತಾನೇ ಬರುತ್ತೆ!"

"ಹೋಗಲಿ ಬಿಡಿ ವಾಣೀ.... ಅವನು ತಪ್ಪಿತಸ್ಥ ಅಲ್ಲದೇನೂ ಇರಬಹುದು.... ಆದರೆ ಈ ನಂಬರ್ರು ಯಾರದ್ದು ಅಂತ ಪತ್ತೆ ಹಚ್ಚೋದೇನೂ ಕಷ್ಟವಾಗೋಲ್ಲ. ನಾನು ಇವತ್ತೇ ಪೋಲೀಸ್ ಅಧಿಕಾರಿಯ ಹತ್ರ ಮಾತಾಡ್ತೀನಿ...."

"ಅದಕ್ಕೆ ಮೊದಲು ಗೌತಮನನ್ನೇ ಕೇಳಿದ್ರೆ....ಕೆಲಸ ಬೇಗ ಆಗುತ್ತೆ....ನಾನು ಅವನನ್ನು ಭೇಟಿಯಾಗಿ ಮಾತಾಡ್ಲಾ?" ವಾಣಿ ಕೇಳಿದಳು.

"ನಿಮ್ಮಿಷ್ಟ. ಆದರೆ ನಾನು ಪೋಲೀಸ್ ಅಧಿಕಾರಿಯನ್ನು ಭೇಟಿಯಾಗಿ ಈ ನಂಬರ್ರು ಯಾರದ್ದು....? ಯಾವ ಯಾವ ಫೋನಿಗೆ ಈ ಕಾಲ್ ಬಂದಿದೆ ಎಂದು ಕೇಳದರೆ ಎಲ್ಲಾ ತಿಳಿಯುತ್ತೆ....ರೇಣುಕಾಳ ಮೊಬೈಲ್ ಫೋನ್ ಹೇಗೂ ಪೋಲೀಸ್ ಕಸ್ಟಡೀಲೇ ಇದೆಯಲ್ಲ....ತಡವಾಗಾದ್ರೂ ನಿಜ ತಿಳಿಯುತ್ತೆ...."

"ನಾನು ಗೌತಮನ್ನ ಮೀಟ್ ಮಾಡಿ, ಉಪಾಯವಾಗಿ ಬಾಯಿ ಬಿಡಿಸ್ತೀನಿ." ವಾಣಿ ದೃಢವಾಗಿ ಹೇಳಿದಾಗ ಅವನು ತಲೆಯಾಡಿಸಿದ.

"ಇದಕ್ಕೆ ಕೋರ್ಟು ಅನುಮತಿ ಕೊಡುಲ್ಲ. ಸ್ಪೆಷಲ್ ಪರ್ಮಿಷನ್ ಕೊಡಬೇಕಾ ಗುತ್ತೆ.... ಎಲ್ರನ್ನು ಬಿಡುಲ್ಲ..."

"ಹಾಗಾದ್ರೆ ಸೀಮಾ ಹೋಗಲಿ.... ಅವಳು ಈ ಮುಂಚೆಯೂ ಒಂದು ಸಲ ಹೋಗಿ ಅವನ ಹೆಲ್ತನ್ನು ವಿಚಾರಿಸಿ ಬಂದಿದಾಳೆ."

"ಇಲ್ಲ, ನಾನು ಹೋಗುಲ್ಲ.... ನನಗೆ ಅವನ ಹತ್ರ ಯಾವ ಮಾತೂ ಬೇಕಿಲ್ಲ." ಸೀಮಾ ಉದಾಸೀನಳಾಗಿ ನುಡಿದಳು.

"ಹಾಗಾದ್ರೆ ಗೌತಮನ ತಂದೇನ ರಿಕ್ವೆಸ್ಟ್ ಮಾಡಿಕೊಳ್ಳೋಣ. ಅವರಿಗೆ ಹೋಗಿ ಬರುಕ್ಕೆ ಯಾವ ಅಡಚಣೆಯೂ ಇರುಲ್ಲ." ವಾಣಿ ಎಂದಳು.

"ಯಾರು ಏನು ಬೇಕಾದ್ರೂ ಮಾಡ್ಕೊಳ್ಳಿ. ನಾನು ಏನೂ ಹೇಳುಲ್ಲ. ನಾನು ಪೋಲೀಸ್ ಸ್ಟೇಷನ್‌ಗೆ ಹೋಗಿ ಆ ಬಗ್ಗೆ ಮಾತಾಡ್ತೀನಿ. ಅವರು ಅವರ ರೀತಿಯಲ್ಲಿ ವಿಚಾರಿಸಿಕೊಳ್ಳಲಿ... ಸೀಮಾ.... ನೀವು ಇಲ್ಲೇ ಇರ್ತೀರಾ ನಾನು ಬರೋವರ್ಗೂ....?" ಕೇಳಿದ.

"ಇಲ್ಲ, ನಾನು ಮನೆಗೆ ಹೋಗ್ತೀನಿ...." ಅವಳು ಎದ್ದಳು.

"ನನ್ನನ್ನು ಗೌತಮನ ಮನೆಯ ಹತ್ತಿರ ಇಳಿಸಿ ಬಿಡಿ." ಎಂದು ಹೇಳಿ ವಾಣಿಯೂ ಹೊರಟಳು. ಮೂವರೂ ಕಾರಿನ ಬಳಿಗೆ ಬಂದರು.

******

"ಹೇಗಿದೀಯೋ ಗೌತಮ?" ತಂದೆ ವಿಚಾರಿಸಿದಾಗ ಗೌತಮ ಅತ್ತ.

"ಆಪಾದನೆ ಹೊತ್ತು, ಆರೋಗ್ಯವೂ ಸರಿ ಇಲ್ಲದಾಗ ನಾನು ಇನ್ಹೇಗೆ ಇರ್ತೀನಿ ನೀವೇ ಹೇಳಿ ಅಪ್ಪಾ.... ನಿಮಗ್ಯಾರಿಗೂ ನನ್ನ ಮೇಲೆ ಪ್ರೀತೀನೇ ಇಲ್ಲ. ನನ್ನನ್ನು ಯಾವಾಗ ಡಿಸ್ಚಾರ್ಜ್ ಮಾಡ್ತಾರೆ....? ಮನೆಗೆ ಬಿಡುಗಡೆಯಾಗಿ ಯಾವಾಗ ಬರ್ತೀನಿ....?"

"ಅದನ್ನೆಲ್ಲ ಕೋರ್ಟು ಡಿಸೈಡ್ ಮಾಡಬೇಕು, ಎಲ್ಲಾ ಸರಿ ಹೋಗುತ್ತೆ.... ನೀನು ಸಹಕರಿಸಬೇಕು. ಸುಳ್ಳು ಹೇಳಿ ಸಿಕ್ಕಿ ಹಾಕಿಕೊಳ್ಳುತ್ತೀಯೋ, ನಿಜ ಹೇಳಿ ಆದಷ್ಟು ಬೇಗ ಹೊರಕ್ಕೆ ಬರ್ತೀಯೋ ಅದು ನಿನ್ನ ಕೈಲಿದೆ."

"ಯಾಕಪ್ಪಾ ಹೀಗೆ ಮಾತಾಡ್ತೀರಿ? ಸುಧೀ ಮತ್ತೆ ಬರಲೇ ಇಲ್ಲ. ಇಲ್ಲಿ ನಾನು ಒಬ್ಬನೇ ಹೇಗೆ ಇದೀನಿ ಅನ್ನುವ ಚಿಂತೆ ನಿಮಗ್ಯಾರಿಗೂ ಇಲ್ಲ. ಸೀಮಾ ಹೇಗಿದಾಳೆ....?"

"ಎಲ್ರೂ ಚೆನ್ನಾಗಿದಾರೆ... ನಾನು ಒಂದು ವಿಷಯ ಕೇಳೋಣ ಅಂತ ಬಂದೆ.... ನಿನ್ನ ಮೊಬೈಲ್ ಫೋನೇನಾದ್ರೂ ಕಳೆದುಹೋಗಿತ್ತಾ....?"

"ಇಲ್ಲ. ಈಗ ಅದು ಪೋಲೀಸರ ಕಸ್ಟಡೀಲೇ ಇದೆ. ಯಾಕೆ ಕೇಳಿದ್ರಿ....?"

"ನೆನ್ನೆ ನನಗೆ ಯಾರೋ ಒಬ್ಬರು ಫೋನು ಮಾಡಿ, ಯಾವುದೋ ಮೊಬೈಲ್ ಫೋನು ಸಿಕ್ಕಿದೆ....ಅದನ್ನು ಗೌತಮ ಅನ್ನೋರ ಹೆಸರಿನಲ್ಲಿ ರಿಜಿಸ್ಟರ್ ಮಾಡಿಸಿದೆ....ಅದರಲ್ಲಿ ನಿಮ್ಮ ಲ್ಯಾಂಡ್ ಲೈನ್ ಇತ್ತು ಅಂತ ಹೇಳಿ ನಂಗೆ ಫೋನು ಮಾಡಿದ್ರು...."

"ಯಾರೋ ಸುಳ್ಳು ಹೇಳಿರ್ತಾರೆ. ನೀವು ನಂಬಿಬಿಟ್ರಾ ಅಪ್ಪಾ...."

"ನಂಬಿಕೆ ಬರ್ಲಿಲ್ಲ. ಅದಕ್ಕೇ ಕೇಳಿದೆ....ಪೋಲೀಸರಿಗೆ ಕೊಟ್ಬಿಡಿ, ಅವರು ಪತ್ತೆ ಹಚ್ಚಬಹುದು ಅಂತ ಹೇಳಿದೀನಿ... ಆ ಫೋನಿನಿಂದ ಡಯಲ್ ಆಗಿರುವ ನಂಬರನ್ನೆಲ್ಲಾ ಪೋಲೀಸರು ಕಂಡುಹಿಡೀತಾರೆ....ವಿಚಾರಿಸ್ತಾರೆ, ನಮಗ್ಯಾಕೆ ಬಿಡು...."

"ಇದು ಪೋಲೀಸರ ಕಿತಾಪತಿ ಇರಬಹುದು. ನನ್ನ ಫೋನು, ಸಿಮ್ ಎಲ್ಲವನ್ನೂ ಪೋಲೀಸರು ಇಟ್ಟುಕೊಂಡಿದ್ದಾರಲ್ಲ....ಅವುಗಳನ್ನು ಹೇಗಾದರೂ ಹಿಂದಕ್ಕೆ ಪಡೆಯಿರಿ ಅಪ್ಪಾ...."

"ಯಾಕೆ....?"

"ಪರ್ಸನಲ್ ನಂಬರ್ರುಗಳಿವೆ. ಅದರ ಬಗ್ಗೆ ಕೋರ್ಟಿನಲ್ಲಿ ಲಾಯರ್ರು ಎಲ್ಲರ ಎದುರಿಗೆ ಕೇಳ್ತಾರಲ್ಲ..."

"ಕೇಳಲಿ ಬಿಡು..."

"ಬೇಡಪ್ಪಾ.... ನಂಗೆ ಇಷ್ಟವಿಲ್ಲ...."

"ಸರಿ ಬಿಡು, ಪ್ರಯತ್ನ ಪಡ್ತೀನಿ. ಆದರೆ ನನಗೆ ಪರಿಚಯದವರು ಯಾರೂ ಇಲ್ಲ. ಅಂದ್ಹಾಗೇ ಈ ಮೊಬೈಲ್ ಯಾರದ್ದು....? ಇದರಿಂದ ನಿನ್ನ ಮೊಬೈಲ್‌ಗೆ ಕಾಲ್‌ಗಳು ಬಂದಿವೆ ಅಂತ ಹೇಳಿದ್ರು...." ಎನ್ನುತ್ತಾ ವಾಣಿ ಬರೆದುಕೊಟ್ಟ, ಫೋನಿನ ನಂಬರನ್ನು ಅವನಿಗೆ ತೋರಿಸಿದರು. ಅವನು ನಿಧಾನವಾಗಿ ಓದಿಕೊಂಡ. ಅವನ ಮುಖ ಬಿಳುಪೇರಿತು. ಅವನ ಮುಖ ಬಾಡಿದ್ದನ್ನು ಅವರು ಗಮನಿಸಿದರು.

"ಈ ನಂಬರ್ರು.... ಯಾರದ್ದು....?" ಅವರನ್ನೇ ಕೇಳಿದ.

"ನನ್ನನ್ನು ಕೇಳಿದ್ರೆ....? ಈ ನಂಬರ್ರಿನಿಂದ ನಿನ್ನ ಮೊಬೈಲ್ ಪೋನುಗಳಿಗೆ ಕಾಲ್‌ಗಳು ಬಂದಿವೆಯಂತೆ. ಆ ಮನುಷ್ಯ ಹೇಳಿದ...."

"ಅದ್ಹೇಗಪ್ಪಾ ಸಾಧ್ಯ....? ನಾನ್ಯಾಕೆ ಹಾಗೆ ಮಾಡಲಿ?" ಎಂದು ಹೇಳಿ ತಟ್ಟನೆ ನಾಲಿಗೆಯನ್ನು ಕಚ್ಚಿಕೊಂಡ. ನೀವು ಏನೇನೋ ಕನ್‌ಫ್ಯೂಸ್ ಮಾಡ್ತಿದೀರಿ... ನಿಮ್ಮ ತಲೆ ಕೆಟ್ಟಿದೆ ಅಥವಾ ಅವನ ತಲೆ ಕೆಟ್ಟಿದೆ..." ಎಂದು ಹೇಳಿ ಬೆನ್ನು ತಿರುಗಿಸಿದ.

"ಸರಿ, ಹಾಗಾದ್ರೆ.... ನನ್ನ ತಲೆ ಕೆಟ್ಟಿದ್ರೆ ನಾನು ಹೇಗೆ ನಿನಗೆ ಸಹಾಯ ಮಾಡುಕ್ಕೆ ಆಗುತ್ತೆ.... ನಿಜ ಏನೂಂತ ತಿಳಿದ್ರೆ ಸಹಾಯ ಮಾಡಬಹುದು...."

"ತಲೆ ಸರಿ ಇಲ್ಲದಿದ್ದವರು ಏನು ಸಹಾಯ ಮಾಡ್ತೀರಾ....? ನಿಮ್ಮ ಮಾತನ್ನು ಯಾರು ನಂಬ್ತಾರೆ....?"

"ಹೌದು, ನಾನು ಏನೇ ಹೇಳಿದ್ರು ಯಾರೂ ನನ್ನ ಮಾತನ್ನು ನಂಬುಲ್ಲ. ತಂದೆ ಅನ್ನುವ ಅಧಿಕಾರದಿಂದ ಕೇಳ್ತಿದೀನಿ. ನಿಜ ಏನೂಂತ ನನ್ನ ಮನಸ್ಸಿನ ಸಮಾಧಾನಕ್ಕಾದರೂ ಹೇಳು. ನಾನು ಸುಮ್ಮನೇ ಹೊರಟು ಹೋಗ್ತೀನಿ." ಕೈ ಮುಗಿದಾಗ, ಅವನಿಗೆ ಮೋಜೆನಿಸಿತು.

"ಸರಿ, ನಾನು ಒಂದು ನಿಜವನ್ನು ಹೇಳ್ತೀನಿ. ನೀವು ನನಗೆ ಎರಡು ಉಪಕಾರ ಮಾಡ್ಬೇಕು... ಸೀಮಾ ಹಾಗೂ ಸುಧಾಮನ ಹತ್ರ ನಾನು ಮಾತಾಡ್ಬೇಕು. ಒಂದಿಷ್ಟು ಹಣ ಬಿಸಾಕಿದ್ರೆ ನನ್ನ ಕೇಸು ಮುಚಿ ಹೋಗುತ್ತೆ."

"ಸರಿ ಹೇಳು. ಸುದಾಮನ ಹತ್ತಿರ ಮಾತಾಡ್ತೀನಿ."

"ಈಗ ನೀವು ತೋರ್‍ಸಿದ್ರಲ್ಲ, ಆ ಫೋನು ನಂಬರ್ರು ನನ್ನದೇ...ನಾನು ಇನ್ನೊಂದು ಸಿಮ್ ತಗೊಂಡಿದೀನಿ. ಈ ವಿಷಯವನ್ನು ನೀವು ಯಾರಿಗೂ ಹೇಳಬೇಡಿ... ನೀವು ಹೋಗಿ... ಆದರೆ, ಈಗ ಆ ಮೊಬೈಲ್ ನನ್ನ ಹತ್ತಿರ ಇಲ್ಲ. ಕಳೆದು ಹೋಗಿದೆ."

"ಸರಿ... ನಾನು ಯಾರಿಗೂ ಹೇಳುಲ್ಲ. ಹೇಳಿದ್ರೂ ಯಾರೂ ನನ್ನ ಮಾತನ್ನು

ನಂಬುಲ್ಲ. ಹಾಗೇ ಈ ತಲೆ ಕೆಟ್ಟವನ ಮಾತಿನ ಮೇಲೆ ನಂಬಿಕೆ ಇದ್ದರೆ, ನಾನೀಗ ನಿನಗೆ ಒಂದು ವಿಷಯವನ್ನು ತಿಳಿಸಲೇ ಬೇಕು... ನಿನ್ನ ಅಣ್ಣ ಸುಧಾಮ, ನಿನ್ನ ಪ್ರಿಯತಮೆ ಸೀಮಾಳನ್ನು ಕೆಡಿಸಲು ಹೋಗಿದ್ದ... ಪೋಲೀಸರು ಅವನನ್ನು ಅರೆಸ್ಟ್ ಮಾಡಿ ಕರೆದುಕೊಂಡು ಹೋಗಿದ್ದರು. ಸೀಮಾ ಕೇಸ್ ವಾಪಸ್ಸು ತೆಗೆದು ಕೊಂಡು ಅವನನ್ನು ಬಿಡಿಸಿದಳು. ನಿನ್ನ ಮೇಲಿನ ಕೇಸು, ರೇಣುಕನ ತಂದೆ ಹಾಕಿರೋದು ... ಅವರು ವಾಪಸ್ಸು ತಗೋಳಲ್ಲ."

"ಏನ್ಹೇಳ್ತಿದೀರೀ ಅಪ್ಪಾ.... ಸುಧಾಮ.... ಸೀಮಾಳನ್ನು.... ನನ್ನ ಗರ್ಲ್ ಫ್ರೆಂಡನಾ? ಇಂಥಾ ಕೆಟ್ಟ ಬುದ್ಧಿ ಅವನಿಗ್ಯಾಕೆ ಬಂತು....?"

"ಯಾಕೆ ಬಂತೋ ಯಾರಿಗೆ ಗೊತ್ತು....? ಅವನು ಸಿಕ್ಕಿಬಿದ್ದ... ಸರಿಹೋಯ್ತು. ಇಲ್ಲದಿದ್ದರೆ, ರೇಣುಕಾಳಿಗೆ ಆದ ಗತಿಯೇ ಸೀಮಾಳಿಗೂ ಆಗುತ್ತಿತ್ತು.... ನಿನ್ನ ಸೀಮಾ ಸತ್ತು ಹೋಗಿರುತ್ತಿದ್ದಳು. ಈಗ ಸೀಮಾ ಬದುಕಿದ್ದಾಳೆ. ಆದರೆ ನಿಂಗೋಸ್ಕರ ಅಲ್ಲ. "

"ನಾನು ಈ ಕಟ್ಟು ಕತೆಯನ್ನು ನಂಬಲ್ಲ."

"ನಂಬಬೇಡ.... ಹಾಗೇ ಇನ್ನೂ ಒಂದು ಸುದ್ಧಿಯನ್ನು ತಿಳಿಸ್ತೀನಿ.... ಶಶಾಂಕ ಸೀಮಾಳನ್ನು ಮದುವೆಯಾಗಿದಾನೆ... ಅವಳೂ ನಿನ್ನನ್ನು ನಂಬಲಿಲ್ಲ. ಈಗ ನಿನ್ನ ಕಡೆಗೆ ಯಾರೂ ಇಲ್ಲ."

"ಸುಳ್ಳು, ಇದನ್ನು ನಾನು ನಂಬುಲ್ಲ."

"ನಂಬಬೇಡ. ಆದರೆ ಇದು ನಿಜ... ನಾನು ಸುಳ್ಳು ಹೇಳುವುದಿಲ್ಲ. ನಾನು ಪಾಠ ಕಲಿಸಿಕೊಡುವ ಮೇಷ್ಟ್ರು... ನನಗೆ ಅಯೋಗ್ಯ ಮಕ್ಕಳು ಹುಟ್ಟಿದರು ಅನ್ನುವ ದುಃಖ ನನ್ನನ್ನು ಜೀವಮಾನವೆಲ್ಲಾ ಕಾಡುತ್ತೆ.... ನಾನು ಮತ್ತೆ ಎಂದೂ ನಿನ್ನನ್ನು ನೋಡುಕ್ಕೆ ಬರುಲ್ಲ.... ಯಾಕೆಂದರೆ ನಾನು ತಲೆ ಕೆಟ್ಟವನು. ನನ್ನಿಂದ ನಿನಗೆ ಏನೂ ಉಪಯೋಗವಿಲ್ಲ." ಆತ ಹಾಗೆ ಹಿಂದೆ ಹಿಂದೆ ಹೆಜ್ಜೆ ಇಡುತ್ತಾ ಬಾಗಿಲ ಬಳಿಗೆ ನಡೆದರು. ಅವರನ್ನೇ ನೋಡುತ್ತಾ ಇದ್ದ ಗೌತಮ ತಲೆಯ ಮೇಲೆ ಕೈ ಹೊತ್ತು ಕುಸಿದು ಕುಳಿತ.

ಇವರಿಬ್ಬರ ಸಂಭಾಷಣೆಯನ್ನು ರೆಕಾರ್ಡ್ ಮಾಡಿಕೊಂಡಿದ್ದ ತಂದೆ ಅದನ್ನು ವಾಣಿಯ ಕೈಗಿತ್ತರು. ಕೇಸಿನ ವಿಚಾರಣೆಗೆ ಮೊದಲೇ, ಕೇಸಿನ ಅಂತ್ಯ ನಿರ್ಧಾರವಾಗಿತ್ತು.

* * * * *

* * *

*



'ಬಲೆ' ಒಂದು ಸಾಮಾಜಿಕ ಕಾದಂಬರಿ. ಇದೇ ಹೆಸರಿನಲ್ಲಿ ಮೊದಲಿಗೆ 'ರಾಗಸಂಗಮ' ಮಾಸಪತ್ರಿಕೆಯಲ್ಲಿ ಕಂತುಗಳಲ್ಲಿ ಪ್ರಕರಣಗೊಂಡಿದ್ದು ಈಗ ಪುಸ್ತಕ ರೂಪದಲ್ಲಿ ಓದುಗರಿಗಾಗಿ ಪ್ರಕಟ ಗೊಳ್ಳುತ್ತಿದೆ.

ಒಂದು ಕೊಲೆಯ ಸುತ್ತ, ಕಥಾವಸ್ತು ಹರಡಿ ಕೊಂಡು, ಇದರಿಂದಾಗಿ, ಹತ್ತಿರದವರ ಮನದಲ್ಲಿ, ಬದುಕಿನಲ್ಲಿ ಆದ ಬದಲಾವಣೆಗಳಲ್ಲಿ ಕಥೆಯು ಮುಂದುವರೆಯುತ್ತದೆ.

ಓದುಗರಿಗೆ ಇಷ್ಟವಾಗುತ್ತದೆಂದು ಭಾವಿಸು ತ್ತೇವೆ.